ಮುದ್ದುಶ್ರೀ ಗ್ರಂಥಮಾಲೆ

# ಹಂಪನಾ ವಾಙ್ಮಯ



ಸಂಪಾದಕರು

ಡಾ. ಎಂ. ಬೈರೇಗೌಡ

ಬಿ.ಆರ್. ಸತ್ಯನಾರಾಯಣ




ಕೆ.ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್ - ಕೃಷ್ಣಾಪುರದೊಡ್ಡಿ



**HAMPANA VANGMAYA**
**Edited By**
**Dr. M. Byregowda & B.R. Sathyanarayana**



**Published by**
**Muddushree Granthamale**
K.S. Muddappa Smaraka Trust - Krishnapuradoddi
119, 3rd Cross, 8th Main, Hampinagara, Bangalore - 560 104.
Phone: 080-23409512

First Impression : 2007

Pages : 224

Rights : **K.S.M. Trust**

Price : Rs. **120.00**

Paper : N.S. Maplitho 70 GSM.

Cover page : Krishna Raichur

ಪ್ರಕಾಶಕರು : ಮುದ್ದುಶ್ರೀ ಗ್ರಂಥಮಾಲೆ

**ಕೆ.ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್–ಕೃಷ್ಣಾಪುರದೊಡ್ಡಿ**

ನಂ.119, 3ನೇ ಕ್ರಾಸ್, 8ನೇ ಮುಖ್ಯರಸ್ತೆ, ಹಂಪಿನಗರ, ಬೆಂಗಳೂರು–560 104

ಫೋ: 080–23409512

ಪುಟಗಳು : 224

ಮೊದಲ ಮುದ್ರಣ : 2007

ಹಕ್ಕುಗಳು : ಕೆ.ಎಸ್.ಎಂ. ಟ್ರಸ್ಟ್

ಬೆಲೆ : 120/–

ಕಾಗದ : ಎನ್.ಎಸ್. ಮ್ಯಾಪ್ಲಿಥೊ 70 ಜಿ.ಎಸ್.ಎಂ.

ಮುಖಪುಟ : ಕೃಷ್ಣ ರಾಯಚೂರ್

ಮುದ್ರಣ: ವಿಶ್ವಾಸ್ ಪ್ರಿಂಟ್ಸ್
VISHWAS PRINTS
23, 3rd Cross, Nanjamba Agrahara
Chamarajpet, Bangalore - 560 018
Ph : 26604835



# ಅರಿಕೆ

ಸಾರ್ಥಕ ಸಮಾಜ ಸೇವೆಯನ್ನು ಮಾಡಿದವರಿಗೆ-ಅವರು ಸಾಹಿತಿ, ಸಂಶೋಧಕ, ಕವಿ, ಕಲಾವಿದ ರಾಜಕಾರಿಣಿ, ವಿಜ್ಞಾನಿ ಯಾರೇ ಆಗಿರಬಹುದು- ಕೃತಜ್ಞತಾಪೂರ್ವಕ ಸ್ಮರಣೆಯದ್ಯೋತಕವಾಗಿ ಸಂಭಾವನೆ ರೂಪದ ಗ್ರಂಥವನ್ನು ಸಮರ್ಪಿಸುವ ವಿಶಿಷ್ಟ ಸಂಪ್ರದಾಯ ಬೆಳೆದು ಬಂದಿದೆ.

ಹಂಪನಾ ಅವರಿಗೆ ಐವತ್ತು ವರ್ಷ ತುಂಬಿದಾಗ ಒಟ್ಟಿಗೆ ಮೂರು ಅಭಿನಂದನ ಗ್ರಂಥಗಳನ್ನು ಅರ್ಪಿಸಿ ಅಭಿನಂದಿಸಿದ್ದು ೧೯೮೬ ರಲ್ಲಿ - **ಪಚ್ಚೆತೆನೆ, ಸಂಕೃತಿ, ಸಂಕರ್ಷಣ.** ಬೆಂಗಳೂರಿನ ಸೆಂಟ್ರಲ್ ಕಾಲೇಜು ಸಭಾಂಗಣದಲ್ಲಿ ಅರ್ಥಪೂರ್ಣ ಸಮಾರಂಭ ನಡೆಯಿತು.

'ಪಚ್ಚೆತೆನೆ' ಗ್ರಂಥವನ್ನು ಭಟ್ಕಳದಲ್ಲಿ ಬಿಡುಗಡೆ ಮಾಡಿ ಹಂಪನಾರನ್ನು ಸತ್ಕರಿಸಿದಾಗ ಕವಿ- ವಿಮರ್ಶಕ ಸೈಯದ್ ಜಮೀರುಲ್ಲಾ ಷರೀಫ್ ಅಭಿನಂದನ ಭಾಷಣ ಮಾಡಿದರು. ಅನಂತರ ಮೈಸೂರಿನಲ್ಲಿ ರಾಷ್ಟ್ರಕವಿ ಕುವೆಂಪು ಅವರಿಗೆ ಅವರ ಮನೆ 'ಉದಯ ರವಿ' ಯಲ್ಲೇ ಏರ್ಪಾಡಾಗಿದ್ದ 'ಕ.ಸಾ.ಪ. ಗೌರವ ಸದಸ್ಯತ್ವ' ನೀಡುವ ಮನೋಜ್ಞ ಬೆಳಗಿನ ಸಮಾರಂಭದಲ್ಲಿ 'ಪಚ್ಚೆತೆನೆ'ಯನ್ನು ಮಹಾಕವಿಯ ಮಡಿಲಿಗಿಟ್ಟು ಸಂಪಾದಕ ಟಿ.ಕೆ. ಮಹಮದ್ ಧನ್ಯತೆಯ ಭಾವ ಅನುಭವಿಸಿದರು.

ಮತ್ತೆ ಹಂಪನಾಗೆ ಅರವತ್ತು ವರ್ಷ ತುಂಬಿದಾಗ ೧೯೯೬ ರಲ್ಲಿ ಧಾರವಾಡದಲ್ಲಿ 'ಬರಹ ಬಾಗಿನ' ಗೌರವ ಗ್ರಂಥ ಅರ್ಪಿತವಾಯಿತು. ಶಾಂತಾದೇವಿ ಮಾಳವಾಡ, ಚೆನ್ನವೀರ ಕಣವಿ ಮೊದಲಾದವರು ಅತಿಥಿಗಳಾಗಿದ್ದ ಸುಂದರ ಸಂಜೆಯ ಸಾಹಿತ್ಯ ಸಮಾರಾಧನೆ ಪತ್ರಿಕೆಗಳ ಮುಖ ಪುಟಗಳಲ್ಲಿ ವರದಿ ಆಯಿತು. 'ಬರಹ ಬಾಗಿನ' ಸಂಪಾದಕ ಪ್ರೊ. ಎಚ್.ವಿ. ನಾಗೇಶ್ ಪ್ರಸ್ತಾವನೆಯಲ್ಲಿ ನುಡಿದಿದ್ದಾರೆ- "ಡಾ. ಹಂಪನಾ ಅವರ ಕನ್ನಡ ಸೇವೆಯ ಸಾರ್ಥಕ ಬದುಕಿನ ಅಮೃತ ಘಳಿಗೆಯ ಸವಿನೆನಪನ್ನು ಗ್ರಂಥ ರೂಪದಲ್ಲಿ ಗೌರವಿಸುವ ವಿಶಿಷ್ಟವಾದ ಪ್ರಯತ್ನವಿದು".

ಹಂಪನಾ ಅವರು 70 ವಸಂತಗಳನ್ನೂ ಕಳೆದಿದ್ದಾರೆ. ಈ ಶುಭ ಗಳಿಗೆಯಲ್ಲಿ ಅರ್ಪಿಸುತ್ತಿರುವ 'ಹಂಪನಾ ವಾಙ್ಮಯ'ದ ಸಂಯೋಜನೆ ಸಂಕೀರ್ಣವಾದುದು. ವಾಙ್ಮಯವೆಂದರೆ ಒಂದು ಭಾಷೆಯಲ್ಲಿರುವ ಗ್ರಂಥ ಸಂಪತ್ತು. ಈ ಸಂಕಲನದಲ್ಲಿರುವುದು ಹಂಪನಾ ಅವರ ಸಮಗ್ರ ಗ್ರಂಥಗಳ ಪಕ್ಷಿ ನೋಟ; ಸಮಕಾಲೀನ ಬರಹಗಾರರ ಕಣ್ಣಿಗೆ ಈ ಕೃತಿಗಳಲ್ಲಿ ಕಂಡ ಸ್ವಾರಸ್ಯದ ದಾಖಲೆ. ಹಿಂದೆ ತಮಿಳ್ ಸೆಲ್ವಿ, ಸ್ಮಿತಾರೆಡ್ಡಿ ಸಂಪಾದಿಸಿದ್ದ 'ಹಂಗ್ರಂಥಾವಳಿ'ಯ ಮುಂದುವರಿಕೆಯಾಗಿದೆ ಈ ಪುಸ್ತಕ .

ಹಂಪನಾ ಅರುವತ್ತಕ್ಕೂ ಹೆಚ್ಚು ಪುಸ್ತಕಗಳನ್ನೂ ಮುನ್ನೂರೈವತ್ತಕ್ಕೂ ಹೆಚ್ಚು ಲೇಖನಗಳನ್ನೂ ಬರೆದಿದ್ದಾರೆ. ಅವುಗಳಲ್ಲಿ ಹರಟೆಗಳಿವೆ, ಸಂದರ್ಭೋಚಿತ ಬರೆಹಗಳಿವೆ, ಪುಸ್ತಕ ವಿಮರ್ಶೆಗಳಿವೆ, ಜೀವನ ಚಿತ್ರಗಳಿವೆ, ವಿಮರ್ಶೆಗಳಿವೆ, ಸಂಶೋಧನೆಗಳಿವೆ, ಸುಮಾರು ನೂರು ಗಂಭೀರ ಸಂಶೋಧನ ಲೇಖನಗಳಿವೆ.

ಕನ್ನಡ ಸಾಂಸ್ಕೃತಿಕ ಲೋಕದಲ್ಲಿ ಹಂಪನಾ ಚಿರಪರಿಚಿತ ಹೆಸರು. ಸಾಹಿತ್ಯ, ಶಾಸನ, ಸಂಶೋಧನೆ, ತತ್ವಶಾಸ್ತ್ರ, ದೇವಾಲಯ ವಾಸ್ತುಶಿಲ್ಪ, ಮೂರ್ತಿಶಿಲ್ಪ..... ಹೀಗೆ ಎಲ್ಲಾ ಕ್ಷೇತ್ರಗಳಲ್ಲೂ ಎಲ್ಲಾಕಾಲಕ್ಕೂ ನಿಲ್ಲಬಲ್ಲ ಕೃಷಿಯನ್ನು ಹಂಪನಾ ಮಾಡಿದ್ದಾರೆ. ಕನ್ನಡ ಜೈನ ಸಂಸ್ಕೃತಿಯ ಬಗ್ಗೆ ಅಧಿಕೃತವಾಗಿ ಮಾತನಾಡಬಲ್ಲ ಹಿರಿಯ ವಿದ್ವಾಂಸರೂ ಹೌದು. ಜಾನಪದ ಕ್ಷೇತ್ರದಲ್ಲೂ ಗಮನಾರ್ಹವಾದ ಕೆಲಸ ಹಂಪನಾ ಅವರಿಂದ ನಡೆದಿದೆ. ಕೇವಲ ಅಭಿವ್ಯಕ್ತಿ ಮಾತ್ರವಲ್ಲದೆ, ಆಡಳಿತದಲ್ಲೂ ಅವರದು ಎತ್ತಿದ ಕೈ. ಅಧ್ಯಾಪನದಿಂದ ಮಾತ್ರವಲ್ಲದೆ ಕೆಲಸದಲ್ಲಿನ ಬದ್ಧತೆ, ಅಚ್ಚುಕಟ್ಟುತನ, ನಿಖರತೆ, ಕಿರಿಯರೊಂದಿಗೆ ಕೆಲಸ ಮಾಡುವ ಉತ್ಸಾಹ ಇವೆಲ್ಲವು ಅವರಿಗೆ 'ಗುರು'ವಿನ ಸ್ಥಾನವನ್ನು ತಂದುಕೊಟ್ಟಿವೆ. ಅಂತೆಯೇ ನೂರಾರು ಪ್ರತಿಭಾವಂತ ಶಿಷ್ಯರನ್ನೂ ದೊರಕಿಸಿಕೊಟ್ಟಿವೆ.

ಹಂಪನಾ ಅವರ ಮಹತ್ತಿಗೆ ಅವರ ಪ್ರಕಟಿತ ಕೃತಿಗಳೇ ಸಾಕ್ಷಿ. ಅಂತಹ ಕೃತಿಗಳಿಗೆ ಕೈಮರವಾಗುವಂತೆ 'ಪುಸ್ತಕಸೂಚಿ'ಯ (bibliography) ಅಗತ್ಯವಿದ್ದು, ಅದು ಈಗ ನೆರವೇರುತ್ತಿದೆ. ಹಾಗೆ ನೋಡಿದರೆ ಎಲ್ಲ ಸಂಶೋಧಕರ ಪ್ರಕಟಣೆಗಳಿಗೂ, ಎಲ್ಲಾ ಪುಸ್ತಕಗಳಿಗೂ ಪುಸ್ತಕಸೂಚಿಯ ಅಗತ್ಯವಿದ್ದೇ ಇರುತ್ತದೆ. ಪಾಶ್ಚಾತ್ಯರಲ್ಲಿ 'ಪುಸ್ತಕಸೂಚಿ' ಎಂಬುದು ಒಂದು ಶಿಸ್ತಾಗಿ ಬೆಳೆದು ಬಂದಿದೆ. ಅಲ್ಲಿ ಗ್ರಂಥಾಲಯಗಳೇ ಈ ಕೆಲಸವನ್ನು ನೆರವೇರಿಸುತ್ತವೆ. ಈ ಕೆಲಸಗಳಿಗಾಗಿಯೇ 'ಪುಸ್ತಕಸೂಚಿಕಾರ' (bibliographer) ಎಂಬ ಹುದ್ದೆಯೇ ಇರುತ್ತದೆ. ಅಲ್ಲಿಯ ಕೆಲವು ಪ್ರಮುಖ ಗ್ರಂಥಾಲಯಗಳಲ್ಲಿರುವ ಪುಸ್ತಕಸೂಚಿಗಳಿಗೇ 'ಪುಸ್ತಕಸೂಚಿಗಳ ಸೂಚಿ' (bibliography of bibliographies) ಎಂಬ ಹೊತ್ತಿಗೆಗಳನ್ನು ಸಿದ್ಧಪಡಿಸಲಾಗುತ್ತಿದೆ. ಆದರೆ ನಮ್ಮಲ್ಲಿ ಸಮಗ್ರವೆನ್ನಬಹುದಾದ ಗ್ರಂಥಾಲಯದ ಪರಿಕಲ್ಪನೆಯೇ ಇರುವುದಿಲ್ಲ. ಕೇವಲ ಆಯಾಯ ಪ್ರಕಾಶಕರು, ಪ್ರಸಾರಾಂಗಗಳು ತಮ್ಮ ತಮ್ಮ ಪ್ರಕಟಣೆಗಳ ಸೂಚಿಯನ್ನಷ್ಟೇ ಕರಪತ್ರದ ರೀತಿಯಲ್ಲಿ ಮುದ್ರಿಸಿರುವುದುಂಟು. ಅವುಗಳಲ್ಲಿ ಪುಸ್ತಕದ ತಾಂತ್ರಿಕ ವಿವರಗಳಾಗಲೀ, 'ಪುಸ್ತಕಸಾರ'ವಾಗಲೀ ಇರುವುದಿಲ್ಲ. ಪುಸ್ತಕಸೂಚಿಯ ಜೊತೆಗೆ ಪುಸ್ತಕದ 'ಸಾರ' (abstract) ಇದ್ದರಂತೂ ಓದುಗರಿಗೆ, ಸಂಶೋಧಕರಿಗೆ ಅಮೂಲ್ಯ ಸಮಯದ ಉಳಿತಾಯವಾಗುತ್ತದೆ.

'ಹಂಪನಾ ವಾಙ್ಮಯ' ಹಂಪನಾ ಅವರ ಕೃತಿಗಳ 'ತಾಂತ್ರಿಕ ವಿವರಣೆ' ಮತ್ತು 'ಪುಸ್ತಕಸಾರ'ಗಳೆರನ್ನೂ ಸಂಯೋಜಿಸಿ ಸಿದ್ಧಪಡಿಸಿರುವ ಕೃತಿ. ಬಹುಶಃ ಕನ್ನಡದಲ್ಲಿ ಈ ಬಗೆಯ ಮೊದಲನೆಯ ಕೃತಿಯೂ ಹೌದು. ನಮ್ಮ ಸಂಪಾದನೆಯಲ್ಲಿಯೇ ಹೊರಬಂದ 'ತೇಜಸ್ವಿ' ಪುಸ್ತಕದಲ್ಲಿ ಹದಿನಾರು ಪುಟಗಳ 'ಪುಸ್ತಕಸಾರಸೂಚಿ'ಯನ್ನು (bibliographic abstract) ಸಿದ್ಧಪಡಿಸಿದ್ದೆವು. ಆದರೆ ಅದರಲ್ಲಿ ತಾಂತ್ರಿಕ ವಿವರಗಳಿರಲಿಲ್ಲ. ಈ ಕೃತಿಯಲ್ಲಿ ಸಮಗ್ರವೆನ್ನಬಹುದಾದ ರೀತಿಯಲ್ಲಿ ಪುಸ್ತಕದ ವಿಷಯ (subject), ಪುಸ್ತಕದ ಆಕಾರ, ಪುಟಗಳು, ಪ್ರಕಾಶಕರು, ಪ್ರಕಟಣೆಯ ಸ್ಥಳ, ವರ್ಷ ಮೊದಲಾದ 'ಪುಸ್ತಕ ವಿವರ' (bibliographic details) ಗಳನ್ನು ಸಂಗ್ರಹಿಸಲಾಗಿದೆ. ಪುಸ್ತಕಗಳ ಮರುಮುದ್ರಣ (reprint) ವಿವರಗಳು, ಪರಿಷ್ಕೃತ ಆವೃತ್ತಿ (revised edition) ವಿವರಗಳನ್ನೂ ದಾಖಲಿಸಲಾಗಿದೆ. ಇವುಗಳ ಜೊತೆಗೆ, ಪುಸ್ತಕದ

ಬಗ್ಗೆ ವಿದ್ವತ್ ವಲಯದಿಂದ ವ್ಯಕ್ತವಾದ ಅಭಿಪ್ರಾಯಗಳನ್ನೂ ಸಂಕ್ಷಿಪ್ತವಾಗಿ ಸಂಗ್ರಹಿಸಿಕೊಳ್ಳಲಾಗಿದೆ. ಜೊತೆಗೆ ಪುಸ್ತಕದ 'ಸಾರ' (abstract)ವನ್ನು ಸಂಗ್ರಹಿಸಿ ಕೊಡಲಾಗಿದೆ.

ಇಂತಹ ಒಂದು ಪುಸ್ತಕಸೂಚಿಯನ್ನು ಸಿದ್ಧಪಡಿಸಲು ಅನುಮತಿಯಿತ್ತುದಲ್ಲದೆ, ಹಲವಾರು ವಿವರಗಳನ್ನು ಒದಗಿಸಿದ ಹಂಪನಾ ಅವರಿಗೆ, ಮತ್ತು ಸೂಕ್ತ ಸಲಹೆಗಳನ್ನಿತ್ತು ಪ್ರೋತ್ಸಾಹಿಸಿದ ಶ್ರೀಮತಿ ಕಮಲಾ ಹಂಪನಾ ಅವರಿಗೆ ನಮ್ಮ ಹೃತ್ಪೂರ್ವಕ ನಮನಗಳು. ಪ್ರಕಟಿಸುವ ಹೊಣೆ ಹೊತ್ತ ಕೆ.ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್, ಕೃಷ್ಣಾಪುರದೊಡ್ಡಿಯ ಎಲ್ಲಾ ಪದಾಧಿಕಾರಿಗಳಿಗೂ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ. ಈ ಹೊಸ ರೀತಿಯ ಪುಸ್ತಕದ ಆಶಯಕ್ಕೆ ತಕ್ಕಂತೆ ಮುಖಪುಟ ರಚಿಸಿಕೊಟ್ಟ ಕೃಷ್ಣ ರಾಯಚೂರ್ ಅವರಿಗೂ, ಅಂದವಾಗಿ ಮುದ್ರಿಸಿಕೊಟ್ಟ ವಿಶ್ವಾಸ್ ಪ್ರಿಂಟ್ಸ್ ಅವರಿಗೂ ನಮ್ಮ ನಮನಗಳು.

**ಡಾ. ಎಂ. ಬೈರೇಗೌಡ**
**ಬಿ.ಆರ್. ಸತ್ಯನಾರಾಯಣ**



# ಅರ್ಪಣೆ



ಹೇಳದೆ ಕೇಳದೆ ಹಾರಿಹೋದ
ಕಾಡಿನ ಹಕ್ಕಿಗೆ



ರಾಷ್ಟ್ರಕವಿ ಕುವೆಂಪು ಅವರೊಂದಿಗೆ ಹಂಪನಾ



ತರಾಸು ಅವರೊಂದಿಗೆ



2006ರ ಮಹಾಮಸ್ತಕಾಭಿಷೇಕ ಸಂದರ್ಭದಲ್ಲಿ
ಪರಮಪೂಜ್ಯ ಆಚಾರ್ಯ ಶ್ರೀ ವರ್ಧಮಾನ ಸಾಗರ
ಮುನಿಮಹಾರಾಜರಿಂದ ಆಶೀರ್ವಾದ



ತವರುಮನೆಯ ಮುಂದೆ



ಎಪ್ಪತ್ತರ ಹರೆಯ



ಹಾಸನದಲ್ಲಿ ಎಪ್ಪತ್ತೊಂದು ಸಂಸ್ಥೆಗಳಿಂದ ಸನ್ಮಾನ



ಜೋಡಿ ಜೀವ



ಮುಂಬೈ ಎಲಿಫೆಂಟಾ ಗುಹೆಯೊಳಗೆ



ಕನ್ನಡ ವಿಶ್ವವಿದ್ಯಾಲಯ ಹಂಪಿ
ಜೈನಧರ್ಮ ಅಧ್ಯಯನ ಕೇಂದ್ರದ ಉದ್ಘಾಟನಾ ಸಮಾರಂಭ



**2007ರ ಧರ್ಮಸ್ಥಳ ಬಾಹುಬಲಿಯ ಮಹಾಮಸ್ತಕಾಭಿಷೇಕ ಸಂದರ್ಭದಲ್ಲಿ**



ಹಂಪನಾ ಎಪ್ಪತ್ತರ ಸಂಭ್ರಮ
ನಿವೃತ್ತ ರಾಜ್ಯಪಾಲ ರಾಮಾ ಜೋಯಿಸ್ ಮತ್ತು ಇತರರೊಂದಿಗೆ



ಮಹಾಕವಿ ಪಂಪನ 1100ನೇ ಜನ್ಮದಿನೋತ್ಸವದಲ್ಲಿ



ರಾಷ್ಟ್ರಕವಿ ಜಿ.ಎಸ್.ಎಸ್. ಮತ್ತು ಮುಖ್ಯಮಂತ್ರಿ ಹೆಚ್.ಡಿ. ಕುಮಾರಸ್ವಾಮಿ ಅವರೊಂದಿಗೆ ಹಂಪನಾ ದಂಪತಿಗಳು



## ಪರಿವಿಡಿ

1. ಅಕ್ಕನ ಬಸದಿ
2. ಅಜಾತ ಶತ್ರು
3. ಅತ್ತಿಮಬ್ಬೆ
4. ಅನನ್ಯ
5. ಆಕಾಶ ಜಾನಪದ
6. ಆತ್ಮತತ್ವ ವಿಚಾರ
7. ಉಪಾಧ್ಯೆ ಆ. ನೇ.
8. ಕರ್ನಾಟಕದ ಜಾತ್ರೆಗಳು
9. ಕರ್ನಾಟಕ ಮತ್ತು ಜೈನಧರ್ಮ
10. ಕಮ್ಮಟದ ಕಿಡಿಗಳು
11. ಕವಿವರ ಕಾಮಧೇನು
12. ಕವಿ ಬಂಧುವರ್ಮನ ಜಿಜ್ಞಾಸೆ
13. ಕೃಷ್ಣ ಪಾಂಡವರು
14. ಕೊಪ್ಪಳ ಶಾಸನಗಳು
15. ಗಡಿನಾಡು ಗಾಂಧಿ
16. ಗೋಕಾಕ್ ವಿ. ಕೃ.
17. ಗೋವಿಂದ ಪೈ
18. ಗೊಮ್ಮಟ ಬಾಹುಬಲಿ
19. ಚಂದ್ರಕೊಡೆ
20. ಚಾರುವಸಂತ
21. ಚಿನ್ನದ ಗರಿ
22. ದೇವರಾಯನ ದುರ್ಗ
23. ದ್ರಾವಿಡ ಭಾಷಾವಿಜ್ಞಾನ
24. ದ್ರಾವಿಡ ಸಂಖ್ಯಾ ವಾಚಕಗಳು
25. ನಾಗಚಂದ್ರನ ಇತಿವೃತ್ತ
26. ನಾಗಚಂದ್ರನ ಕಾಲ - ಸ್ಥಳ

27. ನಾಗಶ್ರೀ
28. ನಾಡೋಜ ಪಂಪ
29. ನೆನಪಿನಂಗಳದಲ್ಲಿ ಮಾಸ್ತಿ
30. ಪುಣ್ಯಕೋಟಿ
31. ಪೆನುಗೊಂಡೆ : ಜೈನ ಕ್ಷೇತ್ರ
32. ಪೈಯವರ ಮೂರು ನಾಟಕಗಳು
33. ಫಣಿಕುಮಾರ ಕಥಾ ಸಾಹಿತ್ಯ
34. ಬಸವಪ್ಪ ಶಾಸ್ತ್ರಿ
35. ಬಾಹುಬಲಿ: ರೂಪ ಸ್ವರೂಪ, ವಿಶ್ವರೂಪ
36. ಭಾರತದ ಭಾಷಾ ಸಮಸ್ಯೆ
37. ಭಾಷೆ
38. ಭಾಷಾ ವಿಜ್ಞಾನ
39. ಭಾಷಾ ವಿಜ್ಞಾನಿಗಳು
40. ಭೀಮ ಭಕ್ತಿ ಪರೀಕ್ಷೆ
41. ಮಹಾವೀರ
42. ಮಹಾವೀರ (ರಾಷ್ಟ್ರೋತ್ಥಾನ ಸಾಹಿತ್ಯ ಪ್ರಕಾಶನ)
43. ಮಹಾಕವಿ ರನ್ನ
44. ಮೂರಸೆಯ ಮಂಗರಸ
45. ಯಕ್ಷಯಕ್ಷಿಯರು
46. ಯಾಪನೀಯ ಸಂಘ
47. ರಾಮನ್ ಸಿ.ವಿ.
48. ವಡ್ಡಾರಾಧನೆ
49. ವಡ್ಡಾರಾಧನೆ: ಸಮಗ್ರ ಅಧ್ಯಯನ
50. ವಡ್ಡಾರಾಧನೆ ಮತ್ತು ಜಾನಪದ
51. ವಿಷ್ಣುವರ್ಧನ- ವಿಜಯಾದಿತ್ಯ- ಕೀರ್ತಿವರ್ಮ
52. ವೀರಜಿನೇಂದ್ರ ಚರಿತೆ
53. ಶಾಸನಗಳಲ್ಲಿ ಎರಡು ವಂಶಗಳು
54. ಶಾಸನಗಳಲ್ಲಿ ಜೈನ ತೀರ್ಥಗಳು
55. ಶಾಸನಗಳಲ್ಲಿ ಬಸದಿಗಳು
56. ಶ್ರೀ ಶಂಭವಸಾಗರ ಮಹಾರಾಜರ ಜೀವನ ಚರಿತೆ

57. ಸಂಸ್ಕೃತಿ ಐಸಿರಿ
58. ಸಚಿತ್ರಹೊಂಬುಜ
59. ಸಮ್ಮೇಳನಾಧ್ಯಕ್ಷರುಗಳು
60. ಸಂಸ್ಕೃತಿ ಐಸಿರಿ
61. ಸವ್ಯಸಾಚಿ ಪಂಪ
62. ಸಾಂಗತ್ಯ ಕವಿಗಳು
63. ಸಾಂತರರು : ಒಂದು ಅಧ್ಯಯನ
64. ಹಂಪನಾ ಆಯ್ದ ಪ್ರಬಂಧಗಳು
65. ಹೆಸರಿನ ಸೊಗಸು
66. ಹೊಂಬುಜದ ಶಾಸನಗಳು

ಇಂಗ್ಲಿಷ್ ಗ್ರಂಥಗಳು

1. A History of the Early Ganga Monarchy and Jainism
2. The Later Gangas: Mandali Thousand
3. Jaina Corpus of Koppala Inscriptions X Rayed
4. Apropos of Vikramaditya-VI and Jainism
5. Jina Parshva Temples in Karnataka
6. A History of the Rashtrakutas of Malkhed and Jainism
7. Manastambha: Jaina Pillar of Eminence
8. Opulent Candragiri
9. Indra in Jaina Iconography
10. Bahubali and Badami Calukyas
11. Jinendra Stavana

ಅನುಬಂಧ

ಹಂಪನಾ ಅವರ ಲೇಖನಗಳು

ಹಂಪನಾ ಅವರ ಮುನ್ನುಡಿಗಳು / ಬೆನ್ನುಡಿಗಳು

ಹಂಪನಾ ಅವರಿಗೆ ಅರ್ಪಿಸಿದ ಗ್ರಂಥಗಳು : ಪಚ್ಚೆತೆನೆ
ಸಂಕೃತಿ
ಸಂಕರ್ಷಣ
ಬರಹಬಾಗಿನ
ಹಂಗ್ರಂಥಾವಳಿ
Scholars Speak

1. ಜೀವನದ ಮುಖ್ಯ ವಿವರಗಳು
2. ಜನಪರ ಸಾಹಿತ್ಯ ಪರಿಷತ್ತಿನ ವತಿಯಿಂದ ಪ್ರಕಟಿಸಿದ ಗ್ರಂಥಗಳು
3. ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ ವಾಚನ
4. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿ
5. ಗುಬ್ಬಿಯ ಶ್ರೀ ಅಮರೇಶ್ವರ ವಿಜಯಕರ್ನಾಟಕ ಮಂಡಳಿಯವರು ಸಮರ್ಪಿಸಿದ ಸನ್ಮಾನಪತ್ರ.
6. ಪ್ರಜ್ಞಾ ಸಾಂಸ್ಕೃತಿಕ ವೇದಿಕೆ ನೀಡಿದ ಅಭಿನಂದನ ಪತ್ರ

**ಸಂಪಾದಿತ ಕೃತಿಗಳು:**

1. ಅಪ್ರತಿಮ ವೀರ ಚರಿತ್ರೆ
2. ಅಮೃತಶ್ರೀ
3. ಆನಂದರ ಆಯ್ದ ಕಥೆಗಳು
4. ಕನ್ನಡದ ಮೂವರು ಕಟ್ಟಾಳುಗಳು
5. ಕೆಲವು ನೋಂಪಿಯ ಕಥೆಗಳು
6. ಕುವೆಂಪು -ಜೋಶಿ
7. ಕೈವಾರ ಸಾಹಿತ್ಯ ಸಮ್ಮೇಳನ
8. ಚಂದ್ರಸಾಗರವರ್ಣಿಯ ಕೃತಿಗಳು
9. ಚಿಕ್ಕಮಗಳೂರು ಸಾಹಿತ್ಯ ಸಮ್ಮೇಳನ
10. ಜನಪದ ಕಲಾವಿದರ ಸೂಚಿ
11. ಜಯನೃಪ ಕಾವ್ಯ ಸಂಗ್ರಹ
12. ಜಾನಪದ ಅಧ್ಯಯನ ವಿಚಾರ ಸಂಕಿರಣ
13. ಜೈನಕಥಾ ಕೋಶ
14. ತತ್ವಾರ್ಥ ಸೂತ್ರಾನುಗತ ಕರ್ಣಾಟ ಲಘುವೃತ್ತಿ
15. ಧನ್ಯಕುಮಾರ ಚರಿತೆ
16. ಧರ್ಮಸ್ಥಳ ಸಾಹಿತ್ಯ ಸಮ್ಮೇಳನ
17. ದಿವ್ಯ ಧ್ವನಿ
18. ನಾಗಕುಮಾರ ಷಟ್ಪದಿ
19. ನೆನಪಿನ ಹೊತ್ತಗೆ
20. ನೇಮಿನಾಥ ಪುರಾಣಂ
21. ನೋಂಪಿಯ ಕಥೆಗಳು
22. ಪಂಪ

23. ಪಂಪ ಭಾರತ ಸಂಗ್ರಹ
24. ಪೊನ್ನ-ಕಮಲಭವ ಸಂಪುಟ
25. ಭರತೇಶ ವೈಭವ
26. ಬೀದರ್ ಸಾಹಿತ್ಯ ಸಮ್ಮೇಳನ
27. ಬೆಳಗಾವಿ ಸಾಹಿತ್ಯ ಸಮ್ಮೇಳನ
28. ಮಡಿಕೇರಿ ಸಾಹಿತ್ಯ ಸಮ್ಮೇಳನ
29. ರನ್ನಸಂಪುಟ
30. ರತ್ನಾಕರನ ಹಾಡುಗಳು
31. ವಡ್ಡಾರಾಧನೆ (ಸಂ)
32. ಶಾಂತಿ ಪುರಾಣಂ
33. ಶಿರಸಿ ಸಾಹಿತ್ಯ ಸಮ್ಮೇಳನ
34. ಸದಾಶಿವರ ಹನ್ನೆರಡು ಕಥೆಗಳು
35. ಸಾಳ್ವ ಭಾರತ



# ಸೂರಿ ಶ್ರೇಷ್ಠ ಸೃಜನ ಶೀಲ ನೇತಾರ

ನಿರಂಜನ ಅವರಿಗೆ
ಗೌರವ ಪುರಸ್ಸರ
ಹಂಪನಾ
೧೭ . ೧೧. ೧೯೬೮

ಹಂಪಸಂದ್ರ ಪದ್ಮನಾಭಯ್ಯ ನಾಗರಾಜಯ್ಯನವರ ಚೆಲುವಾದ ಕೈ ಬರಹದಲ್ಲಿರುವ ಮೇಲಿನ ಸಾಲುಗಳು ನನ್ನ ಮೆಚ್ಚುಗೆಯ ಒಂದು ಗ್ರಂಥದ ಒಳಗಿನ ಬಿಳಿಯ ಹಾಳೆಯಲ್ಲಿ ಮೂಡಿವೆ. ಆ ಕೃತಿ 'ಭಾಷಾವಿಜ್ಞಾನ'. ಕರ್ತೃ ಹಂಪನಾ.

ಮನುಷ್ಯ ಹೇಗೆಯೋ ಹಾಗೆಯೇ ಅವನ ಮಹತ್ ಸಾಧನೆಯಾದ ಭಾಷೆಯ ಬಗೆಗೂ ನನಗೆ ಗಾಢ ಆಸಕ್ತಿ. ಪ್ರಾಚೀನ-ಅರ್ವಾಚೀನ, ಮೃತ-ಜೀವಂತ ಎಲ್ಲವೂ ನನಗೆ ಇಷ್ಟ. ಪ್ರಪಂಚದಲ್ಲಿ ಸುಮಾರು ೧೭೬೯ ಭಾಷೆಗಳಿವೆಯಂತೆ. ಅವುಗಳಲ್ಲಿ ಅರೆಬರೆಯಾಗಿ ನಾನು ಬಲ್ಲವು ಹತ್ತು ಭಾಷೆ ಮಾತ್ರ. ಆದರೆ, ಅರಿಯದ್ದರ ವಿಷಯದಲ್ಲಿ ಸಹಜ ಕುತೂಹಲ. ಐದು ಸಾವಿರ ವರ್ಷ ಹಿಂದೆ ಜಗತ್ತಿನ ಪ್ರಥಮ ಸಾಹಿತ್ಯ ಕೃತಿ 'ಗಿಲ್ಗಮೇಶನ ಮಹಾಕಾವ್ಯ'ವನ್ನು ಓದುಗರಿಗೆ ಉಣಿಸಿದ ಅಕ್ಕಡ್ ಭಾಷೆ ಇರಲಿ, ವ್ಯವಹಾರಕ್ಕೆ ಮಾತ್ರ ಬಳಕೆಯಾಗುವ ಆಸ್ಟ್ರೇಲಿಯನ್ ಇರಲಿ, ಅಂಥವೆಲ್ಲ ನನಗಿಷ್ಟ. ಆ ಕಾರಣದಿಂದಲೇ ಹಂಪನಾ ಸೃಷ್ಟಿ 'ಭಾಷಾ ವಿಜ್ಞಾನ'ವನ್ನು ನಾನು ಆಗಾಗ್ಗೆ ಕೈಗೆತ್ತಿಕೊಳ್ಳುತ್ತೇನೆ. ಪ್ರತಿಸಲವೂ ಮೊದಲ ಹಾಳೆಯ ಮೇಲಿನ ನುಡಿಗಟ್ಟು ಕಳೆದ ಕಾಲದ ನೆನಪನ್ನು ಹಸಿರುಗೊಳಿಸುತ್ತದೆ.

ಹಂಪನಾ ಅದೃಷ್ಟಶಾಲಿ. ಕನ್ನಡದ ಹಿರಿಯ ಆಚಾರ್ಯರಾದ ಡಿ. ಎಲ್. ಎನ್. ಮತ್ತು ತೀ. ನಂ. ಶ್ರೀ. ಯವರ ಶಿಷ್ಯರಾಗಿದ್ದರು ನಾಗರಾಜಯ್ಯ.

ಗುರು ಡಿ. ಎಲ್. ಎನ್. ಶಿಷ್ಯನ ಗ್ರಂಥವನ್ನು ಕುರಿತು ನೀಡಿರುವ ಪ್ರಮಾಣ ಪತ್ರವಾದರೂ ಎಂಥದು!

''....ಈ ಗ್ರಂಥವನ್ನು ಶ್ರೀ ಹಂಪ ನಾಗರಾಜಯ್ಯನವರು ಬರೆದು ಕನ್ನಡಿಗರಿಗೆ ಮಾಡಿರುವ ಉಪಕಾರವನ್ನು ಅಷ್ಟಿಷ್ಟೆಂದು ಹೇಳುವ ಹಾಗಿಲ್ಲ. ಅನೇಕ ಆಧಾರ ಗ್ರಂಥಗಳನ್ನು ಅವಲೋಕಿಸಿ ಮನನಮಾಡಿ ಸಾರಭೂತವಾದ ಅಂಶಗಳನ್ನು ಒಂದೆಡೆ ಸೇರಿಸಿ, ಸೌಧವನ್ನು ಕಟ್ಟುವ ಶಿಲ್ಪಿಯಂತೆ ಅವರು ತಮ್ಮ ಗ್ರಂಥವನ್ನು ಬರೆದಿದ್ದಾರೆ. ಅವರ ಭಾಷೆ ನಿರರ್ಗಳವಾಗಿ ಓಡುತ್ತದೆ; ಅದು ಸುಲಭವೂ ಖಚಿತವೂ ಸಂಯಮಯುಕ್ತವೂ ಆಗಿದೆ. ಅವರ ಉತ್ಸಾಹ ಅವರ ಭಾಷೆಯಲ್ಲಿ ಹೊಳಲು

ಕೊಡುತ್ತಿವೆ. ಇಷ್ಟು ಒಳ್ಳೆಯ ಗ್ರಂಥವನ್ನು ಬರೆದ ಅವರಿಗೆ ಅಭಿನಂದನೆಗಳು ಸಲ್ಲುತ್ತವೆ. ಕುತೂಹಲಿಗಳಾಗಿರುವ ಎಲ್ಲ ಕನ್ನಡಿಗರೂ ಈ ಗ್ರಂಥವನ್ನು ಆಸಕ್ತಿಯಿಂದ ಓದಿ ಭಾಷಾವಿಜ್ಞಾನದ ಪರಿಚಯವನ್ನು ಪಡೆದರೆ ಗ್ರಂಥಕರ್ತರು ಪಟ್ಟಿರುವ ಶ್ರಮ ಸಾರ್ಥಕವಾಗುತ್ತದೆ......."

ನಿರರ್ಗಳವಾಗಿ ಓಡುವ ಭಾಷೆ. ಸುಲಭ, ಖಚಿತ, ಸಂಯಮ ಯುಕ್ತ. ಈ ಮಾತಿಗೆ ದೃಷ್ಟಾಂತವಾಗಿ, ತಮ್ಮ ಗ್ರಂಥಕ್ಕೆ ಹಂಪನಾ ಬರೆದಿರುವ ಪ್ರಸ್ತಾವನೆಯ ಕೊನೆಯ ಪ್ಯಾರಾವನ್ನು ಇಲ್ಲಿ ಉಲ್ಲೇಖಿಸುವೆ:

"ಮಾತೃಭಾಷೆ, ತಾಯ್ ನುಡಿ ಎಂಬುದು ಅಭಿಮಾನದ ಮಾತು. ನನ್ನ ರಕ್ತದಲ್ಲಿ ಕನ್ನಡ ಹರಿಯುತ್ತಿದೆ ಎಂಬುದು ಆವೇಶದ ಮಾತು. ನನ್ನ ದೇಹದಲ್ಲಿ ಇಂಗ್ಲಿಷ್ ತುಂಬಿದೆ ಎಂಬುದು ಅಭಿಮಾನದ ಹೇಳಿಕೆ. ತಾಯ್ನುಡಿ ಎಂದರೆ ತಾಯಿ ನುಡಿದು ತನಗೆ ಕಲಿಸುವ ನುಡಿ ಎಂದಷ್ಟೆ ಅರ್ಥ. ಹಾಗಾದರೆ ಭಾಷಾಭಿಮಾನ, ನನ್ನ ನುಡಿ, ನನ್ನ ಭಾಷೆ ಎಂಬ ಅಕ್ಕರೆ ತಪ್ಪೇ? ಎಂದು ಪ್ರಶ್ನಿಸಬಹುದು. ಸರಿಯಾದ ಅಭಿಮಾನ ತಪ್ಪಲ್ಲ, ಒಪ್ಪು;ಅನವಶ್ಯಕವಾದ ಅಂಧಾಭಿಮಾನ ಒಪ್ಪಲ್ಲ, ತಪ್ಪು. ಈ ಒಳಗುಟ್ಟು ತಿಳಿದ ಭಾಷಾವಿಜ್ಞಾನಿಗಳಲ್ಲಿ ನನ್ನ ಭಾಷೆ ಹೆಚ್ಚು, ನಿನ್ನ ಭಾಷೆ ಕಡಿಮೆ ಎಂಬ ಭಾಷಾ ವಿವಾದ ಬರುವುದಿಲ್ಲ. ಭಾಷೆಗಳಲ್ಲಿ ಹೆಚ್ಚು ಕಡಿಮೆ ಎಂಬ ತಾರತಮ್ಯ ಎಂದಿಗೂ ಬರಬಾರದು. ಎಲ್ಲ ಜೀವಂತ ಭಾಷೆಗಳೂ ಅವನ್ನು ಬಳಸುವವರ ನೆರವಿಗೆ ನಿಂತ ನೆಂಟರಂತೆ, ನೇಹಿಗರಂತೆ."

ನನ್ನ ಅಭಿಪ್ರಾಯದಲ್ಲಿ ಮೇಲೆ ಪ್ರತಿಪಾದಿತವಾಗಿರುವ ವಿಚಾರಧಾರೆ, ಅದರ ನಿರೂಪಣೆಗೆ ಬಳಸಿರುವ ಭಾಷೆ, ಶೈಲಿ ಎಲ್ಲ ಪೊರ್ಲ್, ಪೊರ್ಲ್. ಹಂಪನಾ ನಿಸ್ಸಂದೇಹವಾಗಿಯೂ ಸೂರಿ. ವಿದ್ವಾಂಸರೂ ಒಪ್ಪುತ್ತಾರೆ, ಶ್ರೀಸಾಮಾನ್ಯರೂ ಒಪ್ಪುತ್ತಾರೆ.

...'ಮಹಾಕೊಬ್ಬಿನವರು' ಎಂಬ ನಿಂದೆಗೆ ಕೆಲ ಪಂಡಿತರು ಈಡಾಗುವುದುಂಟು. ಆ ಮಾತಿನ ಹಿನ್ನೆಲೆಯಲ್ಲಿ ಸೂರಿ ಹಂಪನಾರನ್ನು ತೂಗಿ ನೋಡೋಣವೆ?

ಮೂವತ್ತರ ಹರೆಯದ ಉಪನ್ಯಾಸಕನಿಗೂ, ಐವತ್ತರ ಪ್ರಾಧ್ಯಾಪಕನಿಗೂ ಎಷ್ಟು ಮಹಡಿಗಳ ಅಂತರ?

ಈಚೆಗೆ ನನ್ನ ಗಮನ ಸೆಳೆದಿರುವ ಒಂದು ಲೇಖನ 'ನಾಗಚಂದ್ರನ ಕಾಲನಿರ್ಧಾರ: ಮರುಪರಿಶೀಲನೆ.' ಬರೆದವರು ಡಾ. ಹಂಪನಾ. ಐದು ವರ್ಷ ಹಿಂದೆ ನಾಗಚಂದ್ರನ ಕಾಲದ ಬಗೆಗೆ ಅವರೊಂದು ಲೇಕನ ಬರೆದಿದ್ದರು. ಈಗ ಅವರೆನ್ನುತ್ತಾರೆ: "....ಮತ್ತೆ ಈ ಬಗ್ಗೆ ಚಿಂತನಮಂಥನ ನಡೆಸುವ ಸಂದರ್ಭದಲ್ಲಿ ಒಂದೆರಡು ಹೊಸ ಅಂಶಗಳು ನನ್ನ ಸಂಶೋಧನೆಗೆ ಒದಗಿ ಬಂದಿವೆ."

ಬಳಿಕ ಅಂಶಗಳನ್ನು ಕುರಿತು ಸುದೀರ್ಘ ಪರಿಶೀಲನೆ. ಅಂತ್ಯದಲ್ಲಿ:

"ಇದುವರೆಗಿನ ವಿಮರ್ಶೆ ಮತ್ತು ವಿವೇಚನೆಯಿಂದ ನಾಗಚಂದ್ರನ ಕಾಲ ವಿಚಾರದಲ್ಲಿದ್ದ ಕೆಲವು ತೊಡಕುಗಳು ನಿವಾರಣೆಯಾಗುತ್ತವೆ, ಸಮಸ್ಯೆಯ ಸಿಕ್ಕುಗಳು ಸಡಿಲವಾಗುತ್ತೆ. ಸುಮಾರು

೧೦೪೦ ರಿಂದ ೧೧೧೦ ವರೆಗೆ ನಾಗಚಂದ್ರನ ಜೀವನ ಕಾಲವನ್ನು ಸೂಚಿಸಬಹುದು. ಇದು ಪೂರ್ವಾಗ್ರಹ ಇಲ್ಲವೆ ಹಠದಿಂದ ಸಾಧಿಸಿ ತೋರಿಸಿದ ತೇದಿಯಲ್ಲ, ಉಪಲಬ್ಧ ಸಾಮಗ್ರಿಯಿಂದ ತಳೆದ ನಿರ್ಧಾರ. ಇದಕ್ಕೆ ಹೆಚ್ಚು ಬಾಧಕಗಳಾಗಲಿ, ಅನೌಚಿತ್ಯವಾಗಲಿ, ಅಸಾಂಗತ್ಯವಾಗಲಿ ನನಗೆ ಕಾಣುತ್ತಿಲ್ಲ. ಅಂಥ ಸಂಶಯಗಳನ್ನು ತೋರಿಸಿಕೊಟ್ಟರೆ ಅವಶ್ಯ ಸ್ವಾಗತಿಸುತ್ತೇನೆ..."

ಹಂಪನಾ ಅವರ ಈ ನಿಲುವು ವಿನಮ್ರತೆ ಅವರ ವಿದ್ವತ್ತಿಗೆ ಭೂಷಣಪ್ರಾಯವಾಗಿದೆ. ಅವರು ಖಂಡಿತವಾಗಿಯೂ ಸೂರಿಶ್ರೇಷ್ಠ.

ಯಾವ ಬಿರುಗಾಳಿಯೂ ಮಣಿಯದ ಮರ. ಅದರಲ್ಲಿ ಬಲವಾದ ಗೂಡು. ಆ ಗೂಡಿನಲ್ಲಿ ಪಂಡಿತವಕ್ಕಿ. ಬೇರೆ ಹಕ್ಕಿಯ ಯೋಚನೆಯನ್ನೂ ಅದು ಮಾಡಬಾರದೆಂದು ಎಲ್ಲಿದೆ ನಿಯಮ? ಕಲೆ ಉಲಿಯಿತು. ಪಂಡಿತವಕ್ಕಿ ಕಾದಂಬರಿ ಬರೆಯಿತು. ಭಾಷಾ ವಿಜ್ಞಾನ ಗ್ರಂಥಗಳು ಅಣಿಗೊಂಡುದಕ್ಕೆ ತುಸು ಮುನ್ನ . ಶೀರ್ಷಿಕೆ: 'ನಾಗಶ್ರೀ'.

ಇದು ಹಂಪನಾರ ಸೃಜನ ಶೀಲ ಮುಖ.

ಅಪಾರ ಬರವಣಿಗೆಯಲ್ಲಿ ನಿರತರಾದ ಹಂಪನಾ ತಮ್ಮ ಮಹತ್ವದ ಕಾದಂಬರಿ ನೀಡಲು ಹದಿನೈದು ವರ್ಷ ಕಾಯಬೇಕಾಯಿತು. ಕಲೆಯೊ.. ವಿಜ್ಞಾನವೊ? ಕಾದಂಬರಿಯೊ ಸಂಶೋಧನೆಯೊ? ಪರಿಶ್ರಮದ, ಪ್ರಜನನ ಕ್ರಿಯೆಯ ಬೇನೆ ಬನ್ನಗಳೆಲ್ಲ ಒಂದೇ ತೆರ. ಮೌಲ್ಯದಲ್ಲಿ 'ಭಾಷಾವಿಜ್ಞಾನ' ಗ್ರಂಥಕ್ಕೆ ಸರಿಗಟ್ಟುವಂಥದು 'ಸವ್ಯಸಾಚಿ ಪಂಪ' ಕಾದಂಬರಿ.

ಇಲ್ಲಿ ಹಂಪನಾ ಬಳಸಿರುವುದು ಕಲಾಲೋಕದ ಪರಿಕರಗಳನ್ನು.

ಕಾದಂಬರಿ ಶಿಲ್ಪದ ಮೊದಲ ಸಾಲುಗಳು ಇವು:

ಮುದ್ದು ಮುದ್ದಾಗಿ ಬೆಳೆಯುತ್ತಿದ್ದ ಮಗು ಪದ್ಮನಾಭ ಮನೆಯವರ ಬಾಯಲ್ಲಿ ಪದ್ಮಪನಾಗಿದ್ದ. ಜನರ ನಾಲಗೆಯಲ್ಲಿ ಪಂಪನಾಗಿದ್ದ. ಪಂಪನ ತಾತ ಕೊಮರಯ್ಯ ಮೊಮ್ಮಗನ ಆಟಪಾಟ ವಿನೋದಗಳಲ್ಲಿ ಆನಂದಿಸಿದ.

ಕೊಮರಯ್ಯ ಲೋಕಾಂತದಲ್ಲಿದ್ದೂ ಏಕಾಂತ ಜೀವನಕ್ಕೆ ಮಾರು ಹೋದವನು. (ಆ ತಾತ ನೊಡನೆ ಕಿರಿಯ ಪಂಪ)

ನಿಸರ್ಗದ ಚೆಲುವಿನಲ್ಲಿ ಹಸಿರ ಸೆರಗಿನಲ್ಲಿ ಸಮೃದ್ಧವಾಗಿ ಸುಳಿದಾಡಿದ. ಹಸಿರ ಬಸರಲ್ಲಿ ಮರುಹುಟ್ಟು ಪಡೆದ. ಕತ್ತೆತ್ತಿ ನೋಡಿದಷ್ಟೂ ಎತ್ತರವೆಂಬಂತೆ ಬೆಳೆದ ಮರಗಳು. ನೂರಾರು ಗಿಡಮರ ಬಳ್ಳಿ ಹೂಗಳು. ನಾನಾ ತೆರನಾದ ಕಾಡುಮೃಗಗಳು. ಹತ್ತಾರು ಜಾತಿಯ ಹಕ್ಕಿಗಳ ಗುಂಪು. ಜುಳು ಜುಳು ಬಳುಕಿ ಹರಿವ ತೊರೆ ಹಳ್ಳಗಳು. ಪ್ರಕೃತಿಯ ಮಡಿಲಲ್ಲೇ ಮಣ್ಣಿನ ಮಗನಂತೆ ಬೆಳೆಯುತತೊಡಗಿದ್ದರಿಂದ ಎಂಟು ವರ್ಷಕ್ಕೇ ದಷ್ಟಪುಷ್ಟನಾದ. ತಂದೆ 'ಭೀಮಪನ ಮಾತೆಂದರೆ ಮೋಡಿ, ಅವನ ವಾಗ್ವೈಭವ ಪುಲಿಗೆರೆಯ ಮಾತು'. ತಾಯಿ ಅಬ್ಬಣಬ್ಬೆ 'ಗಂಡನ ಬಾಯಿಯಿಂದ ಕಾವ್ಯಗಳನ್ನು ಓದಿಸಿ ಕೇಳಿಕೊಂಡಾಕೆ.'

ಈ ಕಾದಂಬರಿಯಲ್ಲಿ ಹಂಪನಾ ಹತ್ತನೆಯ ಶತಮಾನದ ಕನ್ನಡ ನಾಡನ್ನು ಪುನಃ ಸೃಷ್ಟಿಸಿದ್ದಾರೆ. ಕನ್ನಡದ ಮಹಾಕವಿ ಪಂಪನ ಮಹಾಶಿಲ್ಪವನ್ನು ಕ್ರಮವಾಗಿ ಕಟೆದು ಉಸಿರು ತುಂಬಿದ್ದಾರೆ.

ಅರಸುಗುವರ ಅರಿಗನ ಜತೆ ಸಖ್ಯ, ಸಹ ಅಧ್ಯಯನಗಳ ಚಿತ್ರಣ ಅತ್ಯಂತ ಸ್ವಜವೆಂಬಂತೆ ಕಣ್ಣಿಗೆ ಕಟ್ಟುತ್ತದೆ. ಎತ್ತಿದ್ದು ಲೇಖನಿ ಇರಲಿ, ಖಡ್ಗವಿರಲಿ ಈ ಪಂಪ ಅನ್ಯಾದೃಶ.

ಕನ್ನಡದ ಮೇರುಕೃತಿಗಳಾದ 'ಆದಿಪುರಾಣ' ಮತ್ತು 'ವಿಕ್ರಮಾರ್ಜುನ ವಿಜಯಗಳು' ಹೇಗೆ ಸೃಷ್ಟಿಯಾದವು? ಆ ವಿವರ ಹಂಪನಾರ ಕೈಯಲ್ಲಿ ರೋಚಕ ಕಥೆಯಾಗಿದೆ.

ಕಾದಂಬರಿಯಲ್ಲಿ ಬರುವ ಬಂಕಾಪುರ, ಬನವಾಸಿ, ಅಣ್ಣಿಗೆರೆ, ಪುಲಿಗೆರೆ, ಬೋದನ, ಮೇಮುಲವಾಡ, ಮಾನ್ಯಖೇಟ, ವೆಂಗಿಪಳು, ಕೊಪಣ ಮುಂತಾದ ಊರುಗಳು ಕಾವ್ಯಯಾತ್ರೆಗೆ ಓದುಗರನ್ನು ಕರೆಯುತ್ತವೆ.

ಕಾದಂಬರಿಕಾರ ದಾರ್ಶನಿಕನೂ ಆಗುವ ಪರಿಯನ್ನು ಈ ಮೂರು ವಾಕ್ಯಗಳಲ್ಲಿ ಕಾಣಬಹುದು.

'ಸಾವಿರಾರು ವರ್ಷಗಳಿಂದ ರೂಢಿಯಲ್ಲಿದ್ದ ಮಾತ್ರಕ್ಕೆ ಅಸತ್ಯ ಸತ್ಯವಾಗದು'.

'ನಿಜ ಕೆಲವೊಮ್ಮೆ ಕಠಿಣವಾಗಿರುತ್ತದೆ.'

-'ಅವರವರ ಧರ್ಮ ಅವರವರಿಗೆ ದೊಡ್ಡದು. ಆದರೆ ಎಲ್ಲಕ್ಕೂ ದೊಡ್ಡದು ಮಾನವಜನ್ಮ ಮತ್ತು ಮಾನವ ಧರ್ಮ.'

ಗದ್ಯ ಮಹಾಕಾವ್ಯವೆನಿಸಿಕೊಳ್ಳಲು ಅರ್ಹವಾದ 'ಸವ್ಯಸಾಚಿ ಪಂಪ' ಕಾದಂಬರಿಯ ಕೊನೆಯ ವಾಕ್ಯ ಸಮುಚ್ಚಯ ಇದು:

ಮರುದಿವಸ ಗುರುಕುಲದಿಂದ ರಾಜಧಾನಿಯ ತನಕ ಪಲ್ಲಕ್ಕಿ ಪಟ್ಟದಾನೆಯ ಮೇಲೆ ಪಂಪನ ಎರಡೂ ಕಾವ್ಯಗಳನ್ನಿಟ್ಟು ಗೌರವದ ಮೆರವಣಿಗೆ ಮಾಡಿದರು. ಪಂಪನನ್ನು ಅರಮನೆಯ ರಥದಲ್ಲಿ ಕುಳ್ಳಿರಿಸಿ ಕರೆತರಲಾಯಿತು. ಕಾವ್ಯಗಳಿಟ್ಟ ಪಲ್ಲಕ್ಕಿಯನ್ನು ಸ್ವಲ್ಪ ದೂರ ರಟ್ಟರ ಚಕ್ರವರ್ತಿ ಕನ್ನರ ಒಂದು ಕಡೆ, ಅರಿಗ ಒಂದು ಕಡೆ ಹೆಗಲು ಕೊಟ್ಟುದನ್ನು ಜನತೆ ಹರ್ಷೋದ್ಗಾರದಿಂದ ಸ್ವಾಗತಿಸಿತು. ಪಂಪನನ್ನು ಮನೆಯಿಂದ ಹೇಗೆ ಜೋಡಿ ಓಲಗ ಊದಿಸಿ ಕರೆತಂದರೋ ಹಾಗೆಯೇ ಕಳಿಸಿದರು. ದಾರಿಯುದ್ದಕ್ಕೂ ಹದಿನಾಲ್ಕು ಅಶ್ವಾಸದ ಕಾವ್ಯಕ್ಕೆ ಸಂಕೇತವಾಗಿ ಹದಿನಾಲ್ಕು ಚಪ್ಪರ ಹಾಕಿದ್ದರು. ಸಂಜೆಯ ಹೊಂಬೆಳಕಿನಲ್ಲಿ ಪಂಪ ಬಿಡಾರ ಹೊಕ್ಕ. ಲೋಕವನ್ನು ಬೆಳಗಿದ ದಿನಪತಿ ತನ್ನ ಅಂದಿನ ಕರ್ತವ್ಯ ಮುಗಿಯಿತೆಂದು ಪಡುವಣಕ್ಕೆ ಇಳಿಯಲು ಅಣಿಯಾದ.

ಮಹಾಕವಿ ಪಂಪ ಆ ಬಳಿಕ ಬರೆದನೊ ಇಲ್ಲವೊ ತಿಳಿಯದು. ಅತಿಯಾದ ಪ್ರಶಸ್ತಿಗಳ ಝಳಕ್ಕೆ ಕಾವ್ಯಸೆಲೆ ಬತ್ತುತ್ತದಂತೆ. ಅಂಥ ತಾಪಕ್ಕೆ ಹಂಪನಾ ಇನ್ನೂ ಈಡಾಗಿಲ್ಲ. ಸಮಾಧಾನದ ಸಂಗತಿ.

೩

ಕನ್ನಡ ಮಾಸ್ತರು ಸ್ವತಂತ್ರ ಭಾರತದಲ್ಲೂ ಏಕೀಕೃತ ಕರ್ನಾಟಕದಲ್ಲೂ ಅನಾದರಕ್ಕೆ ಗುರಿಯಾಗಿರುವ ವ್ಯಕ್ತಿ. ಮೂರು ದಶಕಗಳ ಹಿಂದೆ ಕಾಲೇಜುಗಳತ್ತ ನೋಡಿದೆ. ಇಂಗ್ಲಿಷ್ ಮತ್ತಿತರ ವಿಭಾಗಗಳ ಥಳಕಿನ ಮುಂದೆ ಕಳಾಹೀನ, ಕನ್ನಡ ವಿಭಾಗ. ಎಳೆಯೌವನದಲ್ಲಿ ಮಕ್ಕಳಿಗೆ ಟ್ಯೂಷನ್ ಹೇಳಿದ್ದೆಷ್ಟೋ ಅಷ್ಟೇ ನನ್ನ ಅಧ್ಯಾಪನಾನುಭವ. (ಕನ್ನಡ ಇಂಗ್ಲಿಷ್ ಗಣಿತ ಎಲ್ಲವನ್ನೂ

ಹೇಳಿಕೊಡುತ್ತಿದ್ದೆ.) ಆಗ ಅನಿಸುತ್ತಿತ್ತು- ಕಾಲೇಜುಗಳಲ್ಲಿ ಪಾಠ ಹೇಳುವ ಅಧ್ಯಾಪಕರು ಆಧುನಿಕರಾಗಿ ಕಾಣಿಸುವುದು ಯಾವಾಗ?

೧೯೬೪-೧೯೬೫ರಲ್ಲಿ ಆರು ತಿಂಗಳು ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಯಾಗಿದ್ದೆ. ಸರಕಾರದಿಂದ ಆಗ ಪರಿಷತ್ತಿಗೆ ದೊರೆಯುತ್ತಿದ್ದ ವಾರ್ಷಿಕ ಅನುದಾನ ಕೇವಲ ಏಳು ಸಾವಿರ ರೂಪಾಯಿ!. ವೇದಿಕೆ ಹತ್ತುವವರ ವಿಷಯದಲ್ಲಿ ನನಗೆ ಅನಾದರ ಮೂಡಿದ್ದ ಅವಧಿ ಅದು. ಪರಿಷತ್ತಿನಲ್ಲಿ ಒಂದು ಕಾರ್ಯಕ್ರಮವಿತ್ತು. ಆಸಕ್ತ ಕಿರಿಯರಿಗೆ ವಾಗ್ಮಿತೆಯನ್ನು ಹೇಳಿಕೊಡುವುದು. ವಾರಕ್ಕೊಮ್ಮೆ ಬೂಟಿನ ಟಪ್‌ಟಪ್ ಸಪ್ಪಳ. ಮುಗುಳುನಗೆಯೊಡನೆ ನಮಸ್ಕಾರ. ಟೈ ಕಟ್ಟಿದ ಸೂಟುಧಾರಿ. ಸೊಗಸಾದ ದಿರಸುಗಾರ- ಅವರು ಹಂಪನಾ. ವಾಗ್ಮಿತೆ ತರಗತಿಯ ಅಧ್ಯಾಪಕರು. [ವಾರದಲ್ಲಿ ಇನ್ನೊಂದು ದಿನ ಅ.ರಾ. ಮಿತ್ರ ಬರುತ್ತಿದ್ದರು.] ಆಧುನಿಕ ಉಡುಗೆಯ ಕನ್ನಡ ಅಧ್ಯಾಪಕ ಹಂಪನಾರನ್ನು ಕಂಡು ಇಷ್ಟ ಪಟ್ಟೆ. (ಸರಳ ಉಡುಪಿನವರೂ ನನಗಿಷ್ಟವೇ. ಅದು ನನ್ನೊಳಗಿನ ದ್ವಂದ್ವ.) ಒಂದು ದಿನ ಗ್ರಂಥಭಂಡಾರದಲ್ಲಿ ನಿಂತು ಸಭಾಭವನದಿಂದ ಬರುತ್ತಿದ್ದ ಹಂಪನಾ ವಾಣಿಗೆ ಕಿವಿಗೊಟ್ಟೆ. ಮೆಚ್ಚುಗೆಯಾಯಿತು. ಹೀಗೆ ಮಾತನಾಡುವುದನ್ನು ಕಲಿತರೆ ಈ ದೇಶದಲ್ಲಿ ಪ್ರಜಾಪ್ರಭುತ್ವ ಒಂದು ನೆಲೆ ಕಂಡೀತು ಎನ್ನಿಸಿತು.

ಮೊದಲೇ ಒಪ್ಪಿದ್ದಂತೆ ಕಾರವಾರ ಸಾಹಿತ್ಯ ಸಮ್ಮೇಳನದ ಮುಕ್ತಾಯದ ತನಕ ಕಾರ್ಯದರ್ಶಿತ್ವದ ಹೊಣೆ ನಿರ್ವಹಿಸಿ, ಅಧ್ಯಕ್ಷ ಜಿ.ಪಿಂ. ಅವರಿಗೆ ಫೈಲುಗಳನ್ನು ದಾಟಿಸಿದೆ. ೧೯೬೬ರಿಂದ ಹಂಪನಾ ಕಾರ್ಯದರ್ಶಿಯಾದರು. ಹೊಟ್ಟೆಪಾಡಿನ ಬರವಣಿಗೆ (ಅಂಕಣ, ಪತ್ರಿಕೋದ್ಯಮ, ಕಾದಂಬರಿ, ಮುಂದೆ ಜ್ಞಾನಗಂಗೋತ್ರಿ ಯೋಜನೆ) ಈ ಚಟುವಟಿಕೆಗಳ ಮಧ್ಯೆ ಪರಿಷತ್ತು ನನಗೆ ದೂರವಾಯಿತು. ಹೊಸ ಅಧ್ಯಕ್ಷರು, ಹೊಸ ಪದಾಧಿಕಾರಿಗಳು, ಹೊಸ ಕಟ್ಟಡ-ಪರಿಷತ್ತು ಪತ್ರಿಕೆಗಳ ಮುಖಪುಟಕ್ಕೆ ಬಂತು. ಲಕ್ಷಗಟ್ಟಲೆಯಲ್ಲಿ ಅನುದಾನ. ಅಷ್ಟೇ ವ್ಯಾಪಕವಾದ ಕಾರ್ಯಕ್ರಮ. ೧೯೭೮ರಲ್ಲಿ ಹಂಪನಾ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದರು. ಸರಳ ಆದರೆ ಶಿಸ್ತಿನ ಉಡುಪು. ವಿಶ್ವವಿದ್ಯಾಲಯದ ಹುದ್ದೆಯಿಂದ ರಜಾ ಪಡೆದು ಪೂರ್ಣಾವಧಿಯ ದುಡಿಮೆ. ಮತ್ತೊಂದು ಹೊಸ ಕಟ್ಟಡ, ಹೊಸ ಮುಖಗಳು. ಜೇನುತೊಟ್ಟಿಯಾಯಿತು 'ಕನ್ನಡದ ಕಣಜ'. ಏಳೂವರೆ ವರ್ಷ ಏಳು ಬಣ್ಣಗಳ ನೇತೃತ್ವ ನೀಡಿ ಸ್ವಇಚ್ಛೆಯಿಂದ ಹಂಪನಾ ಅಧ್ಯಕ್ಷ ಸ್ಥಾನದಿಂದ ಇಳಿದುಬಂದರು.

ಸೂರಿಶ್ರೇಷ್ಠ, ಸೃಜನಶೀಲ, ನೇತಾರ. ಯಾರು ಹಿತವರು? ಮೂವರೂ.

ಹಂಪನಾ ಸಮರ್ಥ ಆರೋಹಿ. ಕತ್ತೆತ್ತಿ ನೋಡಿದಷ್ಟೂ ಎತ್ತರವೆನಿಸಬಹುದು. ಆದರೆ ಶಿಖರ ತಲುಪಿದಾಗಲೇ ಅವರಿಗೆ ಸಮಾಧಾನ; ಅವರ ಸ್ನೇಹಿತರ ಬೃಹತ್ ಸ್ತೋಮಕ್ಕೆ ಸಂತೋಷ.

೧೯೮೬



## ಅಕ್ಕನ ಬಸದಿ

**ವಾಸ್ತು-ಶಿಲ್ಪ-ಶಾಸನ**

| | | |
|---|---|---|
| ಕ್ರೌನ್1/8 ಆಕಾರ, ಪುಟಗಳು | : | 28 |
| ಪ್ರಥಮ ಮುದ್ರಣ | : | 2000 |
| ಪ್ರಕಾಶಕರು | : | ಜೈನ ಅಧ್ಯಯನ ಸಂಸ್ಥೆ, ಶ್ರವಣಬೆಳಗೊಳ |

'ಅಕ್ಕನ ಬಸದಿ' ಶ್ರವಣಬೆಳಗೊಳದಲ್ಲಿರುವ ಸುಂದರವೂ ಪ್ರಾಚೀನವೂ ಆದ ಬಸದಿಯ ಪರಿಚಯ ಪುಸ್ತಕ. ಪರಮಜಿನ ಭಕ್ತೆ ಆಚಿಯಕ್ಕಳು 1181 ರಲ್ಲಿ ನಕ್ಷತ್ರಾಕಾರದ ಅಧಿಷ್ಠಾನದ ಮೇಲೆ ಕಟ್ಟಿಸಿದ ಚೈತ್ಯಾಲಯಕ್ಕೆ 'ಅಕ್ಕನ ಬಸದಿ' ಎಂದು ಹೆಸರು. ಈ ಜಿನಮಂದಿರದ ವಾಸ್ತು, ಶಿಲ್ಪ, ಶಾಸನ ಕುರಿತು ಈ ಪುಟ್ಟ ಪುಸ್ತಕ ಉಪಯುಕ್ತ ಮಾಹಿತಿಯನ್ನು ಒದಗಿಸಿದೆ. ಪಾರ್ಶ್ವನಾಥ ತೀರ್ಥಂಕರರು ಈ ಬಸದಿಯ ಮೂಲ ನಾಯಕರು. 2000 ನೆಯ ಇಸವಿ ಮೇ 21, 22 ರಂದು ನಡೆದ ಅಖಿಲ ಕರ್ನಾಟಕ ಜೈನ ಸಮ್ಮೇಳನದಲ್ಲಿ (ಅಧ್ಯಕ್ಷರು: ಡಾ. ಕಮಲಾ ಹಂಪನಾ) ಬಿಡುಗಡೆ ಆದ ಪುಸ್ತಕವಿದು.

**ಅಭಿಪ್ರಾಯ:**

ಶ್ರವಣಬೆಳಗೊಳದಲ್ಲಿಯೇ ಅಲ್ಲದೆ ಕರ್ನಾಟಕದ ವಾಸ್ತು, ಶಿಲ್ಪ ಮತ್ತು ಶಿಲಾ ಶಾಸನದ ದೃಷ್ಟಿಯಿಂದ 'ಅಕ್ಕನ ಬಸದಿ'ಗೆ ಗಣ್ಯ ಸ್ಥಾನವಿದೆ. ಅದೊಂದು ಅಪೂರ್ವ ಚೈತ್ಯಾಲಯ. ಅದರೊಳಗೆ ಪ್ರವೇಶಿಸಿದರೆ ಸಾಕ್ಷಾತ್ ಶ್ರೀ ಪಾರ್ಶ್ವನಾಥ ತೀರ್ಥಂಕರರ ಸಮವಸರಣದೊಳಗೆ ಬಂದಂಥ ಭಾವನೆಯುಂಟಾಗುತ್ತದೆ.

**-ಸ್ವಸ್ತಿಶ್ರೀ ಚಾರುಕೀರ್ತಿ ಭಟ್ಟಾರಕ ಪಟ್ಟಾಚಾರ್ಯರು**
**(ಚಾರುಶ್ರೀ)**

# ಅಜಾತ ಶತ್ರು

**ಜೀವನ ಚರಿತ್ರೆ**

| | | |
|---|---|---|
| ಕ್ರೌನ್1/8 ಆಕಾರ, ಪುಟಗಳು | : | 150 |
| ಪ್ರಥಮ ಮುದ್ರಣ | : | 1968 |
| ದ್ವಿತೀಯ ಮುದ್ರಣ | : | 1971 |
| ಸಹ ಲೇಖಕರು | : | ಶಿವೋತ್ತಮ ಕಲ್ಲೆ |
| ಪ್ರಕಾಶಕರು | : | ಹಿಂದ್ ವಿದ್ಯಾರ್ಥಿ ಯುವಕ ಸಮ್ಮೇಳ ಮಲ್ಲೇಶ್ವರಂ, ಬೆಂಗಳೂರು. |

ಸ್ವತಂತ್ರ ಭಾರತದ ಪ್ರಥಮ ರಾಷ್ಟ್ರಾಧ್ಯಕ್ಷರಾಗಿದ್ದವರು ಘನತೆವೆತ್ತ ಡಾ. ಬಾಬುರಾಜೇಂದ್ರ ಪ್ರಸಾದರು. ಅವರು ವಿದ್ವಾಂಸರು, ವಕೀಲರು, ಹಿಂದಿ, ಇಂಗ್ಲಿಷ್, ಸಂಸ್ಕೃತ ಕಲಿತವರು, ಲೇಖಕರು, ಸ್ವಾತಂತ್ರ್ಯ ಹೋರಾಟದಲ್ಲಿ ಮುಂಚೂಣಿಯ ನಾಯಕರು. ಡಿವೈಡೆಡ್ ಇಂಡಿಯಾ ಮತ್ತು ಆತ್ಮಕಥಾ (ಹಿಂದಿಯಲ್ಲಿದೆ) ಎಂಬ ಅವರ ಎರಡು ಪುಸ್ತಕಗಳು ವಿಖ್ಯಾತವಾಗಿವೆ. ಅವರ ತ್ಯಾಗಮಯ ಸರಳ ಶುದ್ಧ ಜೀವನ ಅನುಕರಣೀಯ ಯೋಗ್ಯವಾದದ್ದು. ಉಬ್ಬಸ (ಗೂರಲು) ರೋಗದಿಂದ ಬಳಲುತ್ತಿದ್ದಾಗಲೂ ಸಹ ಶಿಸ್ತು ಬದ್ಧ ಜೀವನದಿಂದ ಆದರ್ಶಪ್ರಾಯರಾಗಿದ್ದರು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದವರಲ್ಲಿ ಅಪರೂಪದ ಶುಭ್ರ ಪಾರದರ್ಶಕ ವ್ಯಕ್ತಿತ್ವ ಪಡೆದಿದ್ದ ಬಾಬು ರಾಜೇಂದ್ರಪ್ರಸಾದರು ಮರೆಯಲಾಗದ ಮಹಾನುಭಾವರೆನಿಸಿದ್ದರು. ಅಂತಹ ಮಹನೀಯರ ಜೀವನ ಚರಿತ್ರೆಯಿದು.

**ಅಭಿಪ್ರಾಯ:**

ಶತ್ರುಗಳಿಗೂ ಪ್ರಿಯವಾಗಿದ್ದ ಹಾಗೂ ಸರ್ವಾನಾಂಪ್ರಿಯರು ಮತ್ತು ಭಾರತದ ಸರಳ ಸಜ್ಜನಿಕೆಗಳ ಪ್ರತೀಕವಾದ ವ್ಯಕ್ತಿ ಡಾ. ರಾಜೇಂದ್ರಪ್ರಸಾದರನ್ನು ಕುರಿತ ಅಜಾತಶತ್ರು ಕೃತಿ (ಯಲ್ಲಿ) ಅವರ ವ್ಯಕ್ತಿತ್ವಕ್ಕೆ ಕಳಸವಿಡುವ ಘಟನೆಗಳನ್ನು ಸವಿವರವಾಗಿ ಲೇಖಕರು ತಿಳಿಸಿದ್ದಾರೆ.

ಡಾ. ರಾಜೇಂದ್ರ ಪ್ರಸಾದರ ಆದರ್ಶಗಳನ್ನು ಬಿಚ್ಚಿ ಹೇಳುವ ಮತ್ತು ಬೋಧನೆ ಸಿದ್ಧಾಂತವನ್ನು ಪ್ರತಿಪಾದಿಸುವ 'ಅಜಾತಶತ್ರು' ಕೃತಿ ಉತ್ಕೃಷ್ಟ ಜೀವನ ಚರಿತ್ರೆಯಾಗಿದೆ.

**-ಸಿ. ಹನುಮಂತರಾಯಪ್ಪ**

# ಅತ್ತಿಮಬ್ಬೆ

**ಜೀವನ ಚಿತ್ರಣ**

| | | |
|---|---|---|
| ಕ್ರೌನ್ 1/8 ಆಕಾರ, ಪುಟಗಳು, | : | 56+viii |
| ಪ್ರಥಮ ಮುದ್ರಣ | : | 1994 |
| ಪ್ರಕಾಶಕರು | : | ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು 2 |

**ಸಾಮಾಜಿಕ ಚಿಂತನ ಮಾಲೆ.**

ಕಲ್ಯಾಣ ಚಾಲುಕ್ಯರ ಆರಂಭದ ಚಕ್ರವರ್ತಿಗಳಾದ ತೈಲಪ, ಇರಿವ ಬೆಡಂಗ ಸತ್ಯಾಶ್ರಯ, ಐದನೆಯ ವಿಕ್ರಮಾದಿತ್ಯ, ಅಯ್ಯಣ, ಜಗದೇಕಮಲ್ಲ ಜಯಸಿಂಹ ಇವರ ಕಾಲದಲ್ಲಿ ಜೀವಿಸಿದ್ದು, 'ದಾನಚಿಂತಾಮಣಿ' ಬಿರುದು ಪಡೆದು ಅಜರಾಮರಳಾಗಿರುವ ಅತ್ತಿಮಬ್ಬೆಯ ಜೀವನದೊಂದಿಗೆ, ಆಕೆಯ ಮಹತ್ವದ ಸಾಧನೆಗಳನ್ನು ಸಾಮಾನ್ಯ ಓದುಗರಿಗೆಂದು ರಚಿಸಿರುವ ಪುಸ್ತಕವಿದು. ಅತ್ತಿಮಬ್ಬೆ ತಾತ- ನಾಗಮಯ್ಯ, ತಂದೆ ಮಲ್ಲಪಯ್ಯ, ಚಿಕ್ಕಪ್ಪ ಪುನ್ನಮಯ್ಯ, ಮಾವ ದಲ್ಲಪಯ್ಯ, ಗಂಡ ನಾಗದೇವ, ತಂಗಿ ಗುಂಡಮಬ್ಬೆ, ಮಗ ಅಣ್ಣಿಗದೇವ, ಕವಿ ರನ್ನ– ಇವರೆಲ್ಲರ ಪರಿಚಯವೂ ಈ ಪುಸ್ತಕದಲ್ಲಿದೆ.

ಡಾ. ಹಂಪ ನಾಗರಾಜಯ್ಯ ಮತ್ತು ಡಾ. ಕಮಲಾ ಹಂಪನಾ ದಂಪತಿಗಳು ದಾನಚಿಂತಾಮಣಿ ಅತ್ತಿಮಬ್ಬೆಯನ್ನು ಜನಮನಕ್ಕೆ ಮುಟ್ಟಿಸುವ ಕಂಕಣ ಕಟ್ಟಿ ದೀಕ್ಷೆ ತೊಟ್ಟವರು. ಹಂಪನಾರವರ ಇನ್ನೊಂದು ಸಂಶೋಧನ ಪುಸ್ತಕ 'ಕವಿವರ ಕಾಮಧೇನು' (1996) ಪುಸ್ತಕ ಕುರಿತ ವಿವರಗಳನ್ನು ಇದೇ ಪುಸ್ತಕದಲ್ಲಿ ಕೊಟ್ಟಿದ್ದೇವೆ.

**ಅಭಿಪ್ರಾಯ:**

ಸಾಹಿತ್ಯ, ಸಂಸ್ಕೃತಿ, ರಾಜಕೀಯ, ಕಲೆ, ಧರ್ಮ, ಸ್ತ್ರೀಜಾಗೃತಿ- ಇಂಥ ಅಂದಿನ ಒಟ್ಟು ಸಾಮಾಜಿಕ ಅರಿವು ಅತ್ತಿಮಬ್ಬೆಯ ವ್ಯಕ್ತಿತ್ವ ಸಂಪುಷ್ಟಗೊಳ್ಳುವುದಕ್ಕೆ ಹೇಗೆ ಪೋಷಕಾಂಶವಾಯಿತೆಂಬುದನ್ನು ಡಾ. ಹಂಪನಾ ಸಮರ್ಥವಾಗಿ ತೋರಿಸಿ ಕೊಟ್ಟಿದ್ದಾರೆ.

**ಡಾ. ಬಾಳಣ್ಣ ಶೀಗೀಹಳ್ಳಿ**

(ಈ 'ಅತ್ತಿಮಬ್ಬೆ' ಪುಸ್ತಕ ಹಿಂದಿ,ತೆಲುಗು, ತಮಿಳು,ತುಳು, ಮರಾಠಿ,ಗುಜರಾತಿ ಭಾಷೆಗಳಿಗೆ ಭಾಷಾಂತರವಾಗಿದೆ.)

# ಅನನ್ಯ

**ಸಂಶೋಧನೆ**

| | | |
|---|---|---|
| ಡೆಮ್ಮಿ 1/8 ಆಕಾರ, ಪುಟಗಳು | : | viii+240 |
| ಪ್ರಥಮ ಮುದ್ರಣ | : | 2003 |
| ಪ್ರಕಾಶಕರು | : | ಕನ್ನಡ ಪುಸ್ತಕ ಪ್ರಾಧಿಕಾರ |

ಸಂಶೋಧನೆ ಮತ್ತು ವಿಮರ್ಶೆಯ ಗಡಿಗೆರೆಗಳನ್ನುವಿಸ್ತರಿಸುವ ಕೃತಿ

ಹಳೆಯದೆಲ್ಲವನ್ನೂ ನಿರಾಕರಿಸುವ, ಪ್ರಶ್ನಿಸುವ ಪರಿಪಾಠ ಬೆಳೆಯುತ್ತಿರುವ ಇವತ್ತಿನ ಕನ್ನಡ ಸಾಹಿತ್ಯ ವಿಮರ್ಶೆಯಲ್ಲಿ ಶುದ್ಧ ಸಾಹಿತ್ಯ ವಿಮರ್ಶೆ ಮಾನ್ಯತೆಯನ್ನು ಕಳೆದುಕೊಳ್ಳುತೊಡಗಿದೆ. ಪಠ್ಯಕ್ಕಿಂತ ಪಠ್ಯದಾಚೆಗಿನ ವಿವರಗಳು ಗಂಭೀರ ಅಧ್ಯಯನದ ತೆಕ್ಕೆಗೆ ಒಳಗಾಗುತ್ತಿವೆ. ಬಂಧ, ಶೈಲಿ, ಛಂದಸ್ಸುಗಳಿಗಿಂತ ಸಾಂಸ್ಕೃತಿಕ ಹೂರಣ ಮುಖ್ಯವಾಗುತ್ತಿದೆ. ಜೊತೆಗೆ ಪ್ರಾಚೀನ ಕನ್ನಡ ಕಾವ್ಯಗಳ ಓದು ಕಡಿಮೆಯಾಗುತ್ತಿದೆ. ಮೂಲ ಕಾವ್ಯಗಳ ಓದಿಗಿಂತ ಅನುವಾದಗಳ ಮೊರೆ ಹೋಗುವ ಕಾಲದಲ್ಲಿ ಶೈಕ್ಷಣಿಕ ವ್ಯವಸ್ಥೆ ಇದೆ. ಇಂಥ ಸಂದರ್ಭದಲ್ಲಿ ಹಂ. ಪ. ನಾಗರಾಜಯ್ಯ ಅವರ 'ಅನನ್ಯ' ಹೊರಬಂದಿದೆ.

ಹಂಪನಾ ಅವರು ಪ್ರೊ. ಡಿ.ಎಲ್. ನರಸಿಂಹಾಚಾರ್, ಪ್ರೊ. ತೀ.ನಂ. ಶ್ರೀಕಂಠಯ್ಯ ಅವರ ಪ್ರಭಾವ ಮತ್ತು ಪ್ರೇರಣೆಗಳಿಗೆ ಒಳಗಾದವರು. ಕೇವಲ ಭಾಷಾ ಪಂಡಿತರಾಗಿರದೆ, ಸಾಹಿತ್ಯ ವಿಮರ್ಶಕರಾಗಿಯೂ ಕೆಲಸ ಮಾಡಿದ ಈ ಹಿರಿಯ ವಿದ್ವಾಂಸರಂತೆ ಹಂಪನಾ ಕಾರ್ಯ ವೈಖರಿಯೂ ವಿಶಿಷ್ಟ ಬಗೆಯದು. ಸಾಹಿತ್ಯ ಮತ್ತು ಸಂಸ್ಕೃತಿಗೆ ಸಂಬಂಧಿಸಿದ ಇಪ್ಪತ್ತು ಲೇಖನಗಳನ್ನು ಒಳಗೊಂಡಿರುವ ಈ 'ಅನನ್ಯ' ಡಿ.ಎಲ್.ಎನ್. ಪರಂಪರೆಯ ಅಧ್ಯಯನದ ಶಿಸ್ತನ್ನು ವಿಶಿಷ್ಟ ರೀತಿಯಲ್ಲಿ ಉಳಿಸಿಕೊಂಡು ಬಂದಿರುವಂಥದ್ದು. ಪ್ರಾಚೀನ, ಅರ್ವಾಚೀನ ಸಂಗತಿಗಳನ್ನ, ಶಾಸನಗಳಿಂದ ಓಡಿದು ಆಧುನಿಕ ಪಂಥದವರೆಗಿನ ವಿಷಯುಗಳನ್ನು ಒಳಗೊಂಡಿರುವುದರಿಂದ ಈ ಕೃತಿಯ ಡೈಮೆನ್ಷನ್ ನಿರ್ದಿಷ್ಟ ಬಗೆಯದಾದದ್ದಲ್ಲ, ಒಂದು ಕೃತಿಗೆ ಹಲವು ದೃಷ್ಟಿಕೋನಗಳಿರುವುದು ಸಹಜ. ಅನನ್ಯವೂ ಇದಕ್ಕೆ ಹೊರತಾಗಿಲ್ಲ.

ಆಧುನಿಕ ಸಾಹಿತ್ಯವನ್ನು ಕುರಿತ ಮೂರು ಲೇಖನಗಳನ್ನು ಬಿಟ್ಟರೆ ಉಳಿದವೆಲ್ಲ ಜೈನ ಸಮಾಜ ಮತ್ತು ಸಂಸ್ಕೃತಿಗೆ ಸಂಬಂಧಿಸಿದವು. ಪ್ರಾಕೃತ-ಸಂಸ್ಕೃತ ಕಾವ್ಯಗಳು, ಬಸದಿಗಳು, ಜೈನಾಲಯಗಳು, ಶಾಸನ, ಚರಿತ್ರೆ- ಮುಂತಾದವು ಇಲ್ಲಿಯ ಬರಹಗಳಿಗೆ ಸಾಮಗ್ರಿಯನ್ನೊದಗಿಸಿವೆ. ಪ್ರಾಚೀನ

ಸಾಹಿತ್ಯದ ಓದು ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗಿನ ದಿನಗಳಿಂದಲೂ ಸಕ್ರಿಯವಾಗಿ ಈ ಕ್ಷೇತ್ರದಲ್ಲಿ ತೊಡಗುತ್ತ ಬಂದ ಹಂಪನಾ ಅವರ ಆಸಕ್ತಿಯ ಕ್ಷೇತ್ರಗಳು ಹಲವಾರು. ಪಂಪ ಪೂರ್ವ ಯುಗದಿಂದ ಹಿಡಿದು ಈ ಶತಮಾನದ ಸಾಹಿತ್ಯ ಪಂಥಗಳವರೆಗೆ ಅವರ ಅಧ್ಯಯನದ ಆಸಕ್ತಿ ವಿಸ್ತರಿಸಿರುವುದಕ್ಕೆ ಈವರೆಗಿನ ಅವರ ಬರಹಗಳು ಸಾಕ್ಷಿಯಾಗಿವೆ. ಅಂದಂದಿನ ಸಾಹಿತ್ಯ ವಿಮರ್ಶೆಯ ಬೆಳವಣಿಗೆಗೆ ಬೆನ್ನು ತಿರುಗಿಸದೆ. ಅದರ ಫಲಿತಗಳನ್ನೂ ಬಳಸಿಕೊಳ್ಳುತ್ತಲೇ ಸಾಹಿತ್ಯ ರಚನೆ ಮಾಡಿದ್ದು ಒಟ್ಟು ಬರವಣಿಗೆಯ ಕ್ರಮದಲ್ಲಿ ಗೋಚರವಾಗುವ ಪ್ರಮುಖ ಬೆಳವಣಿಗೆ ಎನ್ನಬಹುದು. **ಯಾವುದೇ ಚಳವಳಿಯ- ಪಂಥದ ಫಲಿತಗಳನ್ನು ತನ್ನ ಶೋಧದಲ್ಲಿ ಬಳಸಿಕೊಳ್ಳುವ ಸಹೃದಯತೆ, ವಿಶಾಲ ಮನೋಭಾವ ಹಂಪನಾ ಅವರ ವಿದ್ವತ್ ಬರವಣಿಗೆಯ ವೈಶಿಷ್ಟ್ಯವೂ ಆಗಿದೆ.**

ಆಧುನಿಕ ಸಾಹಿತ್ಯವನ್ನು ಕುರಿತ ಮೂರು ಬರಹಗಳಲ್ಲಿ ಎರಡು ನವೋದಯಕ್ಕೆ (ಮೂರ್ತಿರಾಯರ ವಿಮರ್ಶೆಯ ಅನನ್ಯತೆ, ಭಾವ, ಸೋಪಜ್ಞತೆ), ಒಂದು ಪ್ರಗತಿಶೀಲಕ್ಕೆ (ದುರ್ಗಾಸ್ತಮಾನ: ಒಂದು ಸಮೀಕ್ಷೆ) ಸೇರುವಂಥದ್ದು. ನವೋದಯದ ಬರಹಗಾರರು ಇವತ್ತಿನ ವಿಮರ್ಶಕರಂತೆ, ಕೇವಲ ವಿಮರ್ಶಕರಾಗಿರಲಿಲ್ಲ. ಕುವೆಂಪು, ಬೇಂದ್ರೆ, ಪುತಿನ, ಮಾಸ್ತಿ- ಇವರೆಲ್ಲ ಸೃಜನಶೀಲ ಸಾಹಿತ್ಯಕ್ಕೆ ಸಮನಾಗಿ ವಿಮರ್ಶೆಯನ್ನು ಬೆಳೆಸಿದರು. ತಮ್ಮ ಕಾಲದ ಸಾಹಿತ್ಯ ವಿಮರ್ಶೆಗಿಂತ ಪ್ರಾಚೀನ ಕಾವ್ಯ, ಅದರಲ್ಲಿನ ಪಾತ್ರಗಳು, ಪ್ರಸಂಗಗಳು ಅವರನ್ನು ಹೆಚ್ಚು ಕಾಡತೊಡಗಿದವು. ನವೋದಯ ಕಾಲದಲ್ಲಿ ಸಮಕಾಲೀನ ಸಾಹಿತ್ಯ ವಿಪುಲವಾಗಿ ಬೆಳೆದಿರಲಿಲ್ಲವಾದ್ದರಿಂದ ಪೂರ್ವಿಕರ ಕೃತಿಗಳನ್ನು ವಿಮರ್ಶೆಗೆ ಎತ್ತಿಕೊಳ್ಳಬೇಕಾದ ಅನಿವಾರ್ಯತೆ ಅವರಿಗೆ ಒದಗಿ ಬಂತು. ಮೂಲವನ್ನು ಓದಲೇಬೇಕೆನಿಸುವ ರೀತಿಯಲ್ಲಿ ನವೋದಯ ವಿಮರ್ಶೆ ಕೆಲಸ ಮಾಡಿತು. ಮೂರ್ತಿರಾಯರ ವಿಮರ್ಶೆ ಮಾಡಿದ ಕೆಲಸವೂ ಇದೇ ಬಗೆಯದು. ಇವರ ವಿಮರ್ಶೆಯ ಅನನ್ಯತೆಯನ್ನು ಹಾಗೂ ಆ ಕಾಲದ ತೌಲನಿಕ ವಿಮರ್ಶೆ ಕನ್ನಡ ವಿಮರ್ಶೆಯ ಮೇಲೆ ಬೀರಿದ ಪ್ರಭಾವವನ್ನು ವಿವರಿಸುವ ಉದ್ದೇಶ ಹಂಪನಾ ಅವರ ಮೊದಲ ಬರಹದಲ್ಲಿ ಕಾಣಿಸುತ್ತದೆ. ಮೂರ್ತಿರಾಯರ ಎರಡು ಕೃತಿಗಳಲ್ಲಿ (ಪೂರ್ವ ಸೂರಿಗಳೊಡನೆ, ಮಹಾಭಾರತದಲ್ಲಿ ಕೇಡು ಎಂಬುದರ ಸಮಸ್ಯೆ) ಗಟ್ಟಿಗೊಂಡಿರುವ ವಿಮರ್ಶೆಯನ್ನು ಕಟ್ಟಿಕೊಡುವ ಹಂಪನಾ ಅವರ ಈ ಬರಹ ವಿಮರ್ಶೆಯ ಬಗೆಗಿನ ವಿಮರ್ಶೆಯಾಗಿದೆ. ನವೋದಯದ ಬಹುಪಾಲು ಬ್ರಾಹ್ಮಣ ಲೇಖಕರಂತೆ (ಬೇಂದ್ರೆ, ಗೊರೂರು, ಬೆಟಗೇರಿ, ದೇವುಡು) ಜಾನಪದದತ್ತ ವಾಲಿದ ಮಾಸ್ತಿ ಅವರು ಭಾರತೀಯ ಸಂಸ್ಕೃತಿಯ ವಿಶಿಷ್ಟ ಮಾದರಿಗಳನ್ನು ತಮ್ಮ ಸಾಹಿತ್ಯ ಕೃತಿಗಳಲ್ಲಿ ನೀಡಿದವರು. ತಮ್ಮ ಬರವಣಿಗೆಯ ಪ್ರೇರಣೆ-ಆಶಯಗಳನ್ನು ತಮ್ಮ ಆತ್ಮಚರಿತ್ರೆ 'ಭಾವ'ದಲ್ಲಿ ದಾಖಲಿಸಿದ್ದುಂಟು. ಈ 'ಭಾವ'ದ ಸೋಪಜ್ಞತೆಯನ್ನು, ಮಾಸ್ತಿಯವರ ಮನೋಧರ್ಮವನ್ನು ಗುರುತಿಸುವಲ್ಲಿ ಹಂಪನಾ ಯಶಸ್ಸು ಕಂಡಿದ್ದಾರೆ. ಕರ್ನಾಟಕ ಸಂಸ್ಕೃತಿಯನ್ನು ಅರಿಯಲು, ತನ್ನ ಯುಗಧರ್ಮವನ್ನು ಅರಿಯಲು ನೆರವಾಗುವ ಭಾವದ ಅನನ್ಯತೆಯನ್ನು ಎತ್ತಿ ಹಿಡಿಯುವ ಬರಹ ಅಮೂಲ್ಯವಾದುದು.

ಕರ್ನಾಟಕದಲ್ಲಿ ನಾಣ್ಯಶಾಸ್ತ್ರ ಅಧ್ಯಯನಕ್ಕೆ ಬುನಾದಿ ಹಾಕಿಕೊಟ್ಟ ಕೆ.ಜಿ. ಕುಂದಣಗಾರರನ್ನು ಕುರಿತ ಬರಹ ಪರಿಚಯಾತ್ಮಕವಾದುದಾದರೂ ಭಾಷೆ, ಸಾಹಿತ್ಯ, ಸಂಸ್ಕೃತಿಯ ಮೇಲೆ ಅವರಿಗಿದ್ದ ಪಾಂಡಿತ್ಯವನ್ನು ಗುರುತಿಸುವಲ್ಲಿ ಹೇರಳವಾದ ಮಾಹಿತಿಯನ್ನು ಹಂಪನಾ ತಮ್ಮ ನೆನಪಿನ ಟಿಪ್ಪಣಿಯಿಂದ ಒದಗಿಸಿರುವುದು ಮಹತ್ವದ ಸಂಗತಿ. ಇಂಥ ವಿದ್ವತ್ಪರಂಪರೆ ಕಣ್ಮರೆಯಾಗುತ್ತಿದೆಯಲ್ಲಾ ಎಂಬ ಆತಂಕದ ಧ್ವನಿಯೂ ಈ ಬರಹದ ಅಂತರ್ಯದಲ್ಲಿ ಕೇಳಿಬರುತ್ತದೆ.

ಜನ್ನನ ಅನನ್ಯತೆಯ ವಿನ್ಯಾಸ, ಜೈನ ಸಮಾಜ ಮತ್ತು ಮತಾಂತರ ಪ್ರಾಚೀನ ಕನ್ನಡ ಪರಂಪರೆ ಮತ್ತು ಜೈನಸಾಹಿತ್ಯ, ರವಿದೇವಿಯಕ್ಕಳ ಶಾಸ್ತ್ರದಾನದ ಅನನ್ಯತೆ, ಬಸದಿಗಳು ಸಾಂಸ್ಕೃತಿಕ ತವನಿಧಿ, ವಡ್ಡಾರಾಧನೆ: ಸಾಂಸ್ಕೃತಿಕ ಮುಲುಕುಗಳು, ರಾಷ್ಟ್ರಕೂಟರ ಕಾಲದ ಪ್ರಾಚೀನ ಜಿನಾಲಯ ಸಂಶೋಧನೆ, ರಾಯಜಗಝಂಪ ಪ್ರಶಸ್ತಿಯ ಅನನ್ಯತೆ, ಕರ್ನಾಟಕದಲ್ಲಿ ಜೈನ ಧರ್ಮದ ಹೊಸ ಶೋಧಗಳು- ಇವೆಲ್ಲ ಜೈನ ಸಮಾಜ ಮತ್ತು ಸಂಸ್ಕೃತಿಗೆ ಸಂಬಂಧಿಸಿದ ಬರಹಗಳಾಗಿವೆ. ಕೃತಿಯಲ್ಲಿ ಈ ಗುಂಪಿನ ಬರಹಗಳದೇ ಒಂದು ತೂಕ. ಒಟ್ಟು ಕನ್ನಡ ಸಾಹಿತ್ಯದ ಮೇಲೆ ಜೈನಧರ್ಮ ಉಂಟು ಮಾಡಿದ ಪ್ರಭಾವ ಮತ್ತು ಪ್ರೇರಣೆಯನ್ನು ವಿವರಿಸುವ ಈ ಬರಹಗಳು ಕೇವಲ 'ಭೂತಕಾಲದ ಸಂಗತಿಗಳನ್ನು ಹೇಳುವುದಕ್ಕೆ ಮಾತ್ರ ಸೀಮಿತವಾದುದಲ್ಲ; ವರ್ತಮಾನದ ಸಂಗತಿಗಳನ್ನು ಸಂದರ್ಭೋಚಿತವಾಗಿ ತೆಕ್ಕೆಯಾಗಿಸಿಕೊಳ್ಳುವಲ್ಲಿ ಸಮಕಾಲೀನ ಸ್ಪಂದನಗಳೂ ಆಗಿವೆ. ಅನ್ಯಧರ್ಮೀಯರು ಜೈನಧರ್ಮದ ಮೇಲೆ ಆಕ್ರಮಣ ಮಾಡಿದಾಗ ಅಹಿಂಸಾ ನೆಲೆಯ ಜೈನ ಸಮಾಜ ನಿರಂತರವಾಗಿ ಕಾಪಾಡಿಕೊಂಡು ಬಂದ ಸಂಯಮವನ್ನು ವಿವರಿಸುತ್ತಲೇ ಪ್ರಸ್ತುತದ ಭಯೋತ್ಪಾದಕ ವಿವರಗಳನ್ನು ಹಂಪನಾ ಒದಗಿಸದೆ ಬಿಡುವುದಿಲ್ಲ. ಜನ್ನ ಕವಿ ಕಂಡುಕೊಂಡ ಋತು ಸತ್ಯವನ್ನ, ಮತಾಂತರ ಪ್ರಕ್ರಿಯೆಗೆ ಜೈನ ಸಮಾಜ ತೋರಿದ ಪ್ರತಿಕ್ರಿಯೆಯನ್ನು ಜೊತೆಗೆ ಮತಾಂತರ ಪರಿಕಲ್ಪನೆಯ ಬಗೆಗೆ ಭಾರತದ ಪ್ರತಿಕ್ರಿಯೆಯನ್ನು ಸಮಕಾಲೀನ ವಿವರಗಳೊಂದಿಗೆ ರಸಸ್ಪರ್ಶವಾಗುವ ರೀತಿಯಲ್ಲಿ ಹಂಪನಾ ವಿವರಿಸುವುದರ ಮೂಲಕ ಭಾರತೀಯ ಸಂಸ್ಕೃತಿಯ ಅಧ್ಯಯನಕ್ಕೆ ಜೈನಧರ್ಮ ವಿಸ್ತಾರವಾದ ಹಾಸನ್ನು ಸಿದ್ಧಗೊಳಿಸಿರುವ ರೀತಿಯತ್ತ ಓದುಗ ವಲಯದ ಗಮನವನ್ನು ಸೆಳೆಯುತ್ತಾರೆ. "ಕನ್ನಡವನ್ನು ಕನ್ನಡಿಗರನ್ನು ಚರಿತ್ರೆಯಿಂದ ಸಾಹಿತ್ಯ ಚರಿತ್ರೆಗೆ ಸರಿಸಿದವರು ಜೈನ ಲೇಖಕರು. ಕರ್ನಾಟಕದ ರಾಜರಿಗೆ ಧರ್ಮದ ಮತ್ತು ಕಾವ್ಯ ಧರ್ಮದ ರುಚಿ ಹತ್ತಿಸಿದವರು ಸಂಸ್ಕಾರ ಕೊಟ್ಟವರು ಜೈನರು" ಎಂದು ಹೇಳುತ್ತ ಪಂಪ, ರನ್ನ, ನಾಗಚಂದ್ರ, ಪೊನ್ನ ನಯಸೇನ, ಆಂಡಯ್ಯ ಮೊದಲಾದ ಕವಿವರೇಣ್ಯರ ವಿವರಗಳನ್ನು ಸಾಧನೆಗಳನ್ನು ವಿಪುಲವಾಗಿಯೇ ವಿವರಿಸಿದ್ದಾರೆ. ಜೊತೆಗೆ ಕನ್ನಡ ಕಾವ್ಯಾಂತರ್ಯದಲ್ಲಿಯೇ ಕನ್ನಡ ಸಾಹಿತ್ಯ ವಿಮರ್ಶೆ ರೂಪುಗೊಂಡ ಬಗೆಯನ್ನು ಬಗೆಬಗೆಯಾಗಿ ಬಣ್ಣಿಸಿದ್ದಾರೆ. ಹಾಗಾಗಿ ಜೈನ ಪರಂಪರೆ ಕರ್ನಾಟಕ ಪರಂಪರೆಯನ್ನು ಭಾರತೀಯ ಸಾಂಸ್ಕೃತಿಕ ಪರಂಪರೆಯ ಧಾರೆಗೆ ವಿರೋಧವಾಗದ ರೀತಿಯಲ್ಲಿ ಕೈಹಿಡಿದು ನಡೆಸಿದ ರೀತಿಯ ಅನನ್ಯತೆಯನ್ನು ಈ ಬರಹಗಳಲ್ಲಿ ಗುರುತಿಸಬಹುದು.

ಜಗತ್ತಿನ ಸೂಕ್ಷ್ಮಗಳನ್ನು ತಲ್ಲಣಗಳನ್ನು ಹಂಪನಾ ಹೇಗೆ ಗ್ರಹಿಸಬಲ್ಲರೆಂಬುದಕ್ಕೆ ಸಾಕಷ್ಟು ಸಾಮಗ್ರಿ ಬರಹಗಳಲ್ಲಿ ಲಭ್ಯವಿದೆ. ಅನ್ಯಧರ್ಮೀಯರ ಆಕ್ರಮಣವನ್ನು ನಿರೂಪಿಸುವಾಗ ರಾಮಜನ್ಮಭೂಮಿ ಬಾಬ್ರಿ ಮಸೀದಿಯ ಹಗರಣವನ್ನು ಉಲ್ಲೇಖಿಸುತ್ತಿದೆ. ಕೋಲಾರ ಜಿಲ್ಲೆಯ ಬಸದಿಗಳ ಬಗೆಗೆ ಮಾತನಾಡುತ್ತಲೇ ಭಾರತದ ಬಸದಿಗಳನ್ನು ಕುರಿತು ನೆನೆಯುತ್ತಾರೆ, ಜೈನ ಜಾನಪದದ ಸಂಗತಿಗಳನ್ನು ಹೊರ ಹಾಕುತ್ತಿದೆ. ಈ ಹಿಂದೆ ಸಾಕಷ್ಟು ಚರ್ಚೆಗೆ ಗ್ರಾಸವಾಗಿರುವ ವಸ್ತು ವಿಷಯ ಕುರಿತು ಬರಹಗಳಲ್ಲಿ ಆ ಚರ್ಚೆಯ ಮುಂದುವರಿದ ಬೆಳವಣಿಗೆಯಾಗಿ ಹಾಗೂ ಶೋಧನೆಯ ಹೊಸ ಗ್ರಹಿಕೆಗಳನ್ನು, ಫಲಿತಗಳನ್ನು ತಮ್ಮ ಬರಹಗಳಲ್ಲಿ ಹಂಪನಾ ಮೊದಲ ಬಾರಿಗೆ ನೀಡಿರುವ ಉದಾಹರಣೆಗಳಾಗಿವೆ; ಜನ್ನನ ಅನನ್ಯತೆಯ ನೆಲೆಗಳು, ಮತಾಂತರ ಸಂಗತಿಗಳು, ಬಸದಿಗಳ ವಿಷಯ, ಬಾಬಾನಗರ ಶಾಸನದ ಅನನ್ಯತೆ ಮತ್ತು ಬಿಜ್ಜಳನ ಮತ ನಿರ್ಣಯ- ಮುಂತಾದುವು ಕನ್ನಡ ಸಾಹಿತ್ಯ ಸಂಶೋಧನೆಗೆ ಅನನ್ಯವಾದ ಕೊಡುಗೆಗಳಾಗಿವೆ. ಹಲವು ಮಾರ್ಗಗಳಲ್ಲಿ ದೇಸಿಯನ್ನು ಅನ್ವೇಷಿಸುವ ಈ ಅಧ್ಯಯನದಲ್ಲಿ ಎಲ್ಲ ಕಾಲಕ್ಕೂ ಸಲ್ಲುವ ಬಗೆ ಇದೆ. ಹಿಂಸೆ-ಅಹಿಂಸೆಯ ಪರಿಕಲ್ಪನೆಗಳನ್ನು ವಿವರಿಸುವಲ್ಲಿ ಈ ಬರಹಗಳ ಹಿಂದೆ ಸಾಕಷ್ಟು ಓದಿನ ವಿಸ್ತಾರವಿದೆ. ಆಳವಾದ ಪಾಂಡಿತ್ಯವಿದೆ. ಎಲ್ಲ ಬರಹಗಳಲ್ಲೂ ಭಾಷಾ ವಿಜ್ಞಾನಿಯ ಬುದ್ಧಿ ಮತ್ತು ಮನಸ್ಸು ಕೆಲಸ ಮಾಡಿದೆ. ನಿಷ್ಪತ್ತಿಯಿಂದ ಹಿಡಿದು ಸರ್ವ ಸಂಗತಿಗಳನ್ನು ಬಗೆದು ನೋಡುವ ಪ್ರಯತ್ನವಿದೆ. ಭಾಷೆ, ಸಾಹಿತ್ಯ, ಚರಿತ್ರೆ, ವಾಸ್ತು, ಕಲೆ, ವಿಜ್ಞಾನ ಎಲ್ಲವನ್ನೂ ಪ್ರಾಸಂಗಿಕವಾಗಿ ತರುತ್ತ ವಿಶ್ವಕೋಶದ ಓದಿನ ಅನುಭವ ನೀಡುತ್ತವೆ. ಇಡೀ ಭಾರತೀಯ ಸಂಸ್ಕೃತಿಯ ಅನನ್ಯತೆಯನ್ನು ಎತ್ತಿ ಹಿಡಿಯುವ ಅಹಂಕಾರವಿಲ್ಲದ ಈ ಬರಹಗಳಲ್ಲಿ ಮಾನವೀಯತೆಯ ಅನ್ವೇಷಣೆಯೇ ಪ್ರಧಾನವಾಗಿದೆ. ಈ ಶೋಧನಾತ್ಮಕತೆಯಲ್ಲಿ ಅಂತರ್ಗತವಾಗಿಯೇ ವಿಮರ್ಶೆಯೂ ಮೂಡಿ ಬಂದಿರುವುದರಿಂದ ಹಂಪನಾರ ಈ ಬರಹಗಳು ಸಂಶೋಧನೆ ಮತ್ತು ವಿಮರ್ಶೆಯ ಗಡಿ ಗೆರೆಗಳನ್ನು ವಿಸ್ತರಿಸುವಲ್ಲಿಯೂ ನೆರವಾಗಬಲ್ಲವು. 'ವಡ್ಡಾರಾಧನೆ: ಸಾಂಸ್ಕೃತಿಕ ಮುಲುಕುಗಳು ಚಿಕ್ಕ ಲೇಖನವಾದರೂ ಜೈನ ಸಂಸ್ಕೃತಿಯ ಧೋರಣೆಯನ್ನು ಬಿಂಬಿಸುವ ಸಮಗ್ರ ಬರಹವಾಗಿದೆ.' ಜೈನ ಕಥನ ಪರಂಪರೆಯನ್ನು ವಡ್ಡಾರಾಧನೆ ಯಾಕೆ ಉಜ್ವಲ ಕೃತಿ ಮತ್ತು ಹೇಗೆ ಇದು ಶ್ರೇಷ್ಠ ಕಥೆಗಳ ಮಾಣಿಕ್ಯ ಕೋಶ ಆಗಿದೆ ಎಂಬುದನ್ನು ಸಾಂಸ್ಕೃತಿಕ ಮುಖಾಮುಖಿಯ ಸಂಘರ್ಷವಿರುವ ಕಥನ ಭಾಗದಲ್ಲಿ ಗ್ರಹಿಸಲಾಗಿದೆ. ಕೃತಿ ಒಳಗೊಂಡಿರುವ ಜಾನಪದ ಸತ್ವವನ್ನು ಹಾಗೂ ಜೈನ ಸಾಂಸ್ಕೃತಿಕ ಜಗತ್ತು ತನ್ನವರ ಬದ್ಧತೆಯೊಂದನ್ನೆ ಆಶ್ರಯಿಸದೆ ಸಾರ್ವತ್ರಿಕ ಸ್ವರೂಪಕ್ಕೂ ಬಾಗಿಲು ತೆರೆದಿರುವ ರೀತಿಯನ್ನು ಹಂಪನಾ ಸೊಗಸಾಗಿ ವಿಶ್ಲೇಷಿಸಿದ್ದಾರೆ. ಶಾಸನಗಳ ಆಧಾರದಿಂದ ನಿರ್ಧರಿಸಿದ ಮೈಲಾಪತೀರ್ಥ ಸ್ಥಳನಾಮ ಅಧ್ಯಯನ, ಜೈನ ದೇವತೆಗಳ ಹಾಗೂ ಮುಳುಗುಂದದ ಅಪ್ರಕಟಿತ ಶಾಸನಗಳ ಅಧ್ಯಯನ- ಮುಂತಾದವುಗಳಲ್ಲಿ ಹಂಪನಾ ಅವರ ಶ್ರಮ, ಪಾಂಡಿತ್ಯಪೂರ್ಣವಾದ ಶ್ರದ್ಧಾಸಕ್ತಿಗಳು ಬಾಷಾ ಪ್ರೌಢಿಮೆ ಎಲ್ಲವೂ ಒಮ್ಮಿಂದೊಮ್ಮೆಲೆ ಗೋಚರವಾಗಿ ಬಿಡುತ್ತವೆ.

ಅಡಗಿರುವುದನ್ನು ಪತ್ತೆ ಹಚ್ಚುವುದು, ಕಣ್ಮರೆಯಾಗಿರುವುದನ್ನು ನೆನಪಿಸುವುದು, ಅವಕೃಪೆಗೆ ಗುರಿಯಾದದ್ದಕ್ಕೆ ಮಾನ್ಯತೆಯನ್ನು ತಂದುಕೊಡುವುದು ಹಂಪನಾ ಬರಹಗಳ ವೈಶಿಷ್ಟ್ಯ. ಈ ಅನನ್ಯಕ್ಕೂ ಈ ಮಾತು ಅನ್ವಯವಾಗುತ್ತದೆ. ಸೃಜನಶೀಲ ಸಾಹಿತ್ಯಕ್ಕೆ ಆಕರವಾಗುವ ಸಂಪ್ರಬಂಧಗಳಿಗೆ ವಸ್ತುವಾಗುವ ಆಕರ್ಷಕ ವಸ್ತು ವಿಷಯಗಳು, ಸೋಜಿಗದ ಸಂಗತಿಗಳು ಈ ಅನನ್ಯದಲ್ಲಿ ಅಡಗಿವೆ. ಹಿಂಸೆ-ಅಹಿಂಸೆಯ ಪರಿಕಲ್ಪನೆಯ ಕೃತಿಯ ಆಶಯವನ್ನೂ ಬಿಂಬಿಸುವ ಸುಂದರ ರಕ್ಷಾಪುಟವೂ ಇದಕ್ಕಿದೆ. ಜೈನಕಥಾಕೋಶ, ವಡ್ಡಾರಾಧನೆ, ಯಕ್ಷಯಕ್ಷಿಯರು ಮತ್ತು ನೋಂಪಿಯ ಕಥೆಗಳ ಬಾಗಿನವನ್ನು ಕನ್ನಡ ಓದುಗರ ಮಡಿಲಿಗೆ ಇಟ್ಟಿರುವ ಹಂಪನಾ ಅವರು ಜೈನ ಸಾಹಿತ್ಯದ ತಾಯಿಬೇರುಗಳನ್ನು ಅನ್ವೇಷಿಸುವವರೆಗೆ ಅಪಾರವಾದ ಮತ್ತು ಮೌಲಿಕವಾದ ಕೃತಿಗಳನ್ನು ನೀಡುತ್ತ ಬಂದಿದ್ದಾರೆ. 'ಅನನ್ಯ'ವೂ ಮೌಲಿಕತೆಯನ್ನು ಹೆಚ್ಚಿಸುವ ಕೃತಿಯೇ ಆಗಿದೆ.

-ಡಾ. ಜಿ.ಆರ್. ತಿಪ್ಪೇಸ್ವಾಮಿ

ಕನ್ನಡಪ್ರಭ 4-5-2003



ಪ್ರೊ. ಹಂಪ. ನಾಗರಾಜಯ್ಯ ಅವರು ಕನ್ನಡ ಪುಸ್ತಕ ಪ್ರಾಧಿಕಾರಕ್ಕಾಗಿ ಸಿದ್ಧ ಪಡಿಸಿಕೊಟ್ಟ 'ಅನನ್ಯ' ಗ್ರಂಥವು ಹೆಸರಿಗೆ ತಕ್ಕುದಾಗಿದೆ. ಹಂಪನಾ ಎಂದೇ ಖ್ಯಾತನಾಮರಾದ ಪ್ರೊ. ಹಂಪ. ನಾಗರಾಜಯ್ಯ ಅವರು ಪ್ರಾಚೀನ ಸಾಹಿತ್ಯ ಮತ್ತು ವಿಶೇಷವಾಗಿ ಜೈನ ಸಾಹಿತ್ಯ-ಸಂಸ್ಕೃತಿ ಕ್ಷೇತ್ರಗಳಲ್ಲಿ ವಿಶೇಷವಾದ ಪರಿಶ್ರಮವುಳ್ಳವರೆಂಬುದು ಈಗಾಗಲೇ ಎಲ್ಲರಿಗೂ ತಿಳಿದಿರುವ ಸಂಗತಿ. ಜೈನಸಾಹಿತ್ಯ ಮತ್ತು ಸಂಸ್ಕೃತಿ ಕುರಿತು ಇಂಗ್ಲಿಷಿನಲ್ಲಿ ಬರೆದ ಬರಹ ಹಾಗೂ ಪ್ರಕಟಗೊಂಡಿರುವ ಪುಸ್ತಕಗಳು; ಕನ್ನಡದಲ್ಲಿ ಸಿದ್ಧಪಡಿಸಿ ಹಲವಾರು ಸಂಘ-ಸಂಸ್ಥೆಗಳ ಮೂಲಕ ಪ್ರಕಟಿಸಿರುವ ಬರಹ ಹಾಗೂ ಗ್ರಂಥಗಳು ಅವರ ವಿದ್ವತ್ತನ್ನೂ ಜೈನ ಸಾಹಿತ್ಯ ಸಂಸ್ಕೃತಿ ಕ್ಷೇತ್ರಗಳಲ್ಲಿ ಸಾಧಿಸಿರುವ ಪರಿಣತಿಯನ್ನೂ ತಿಳಿಸುತ್ತವೆ. ಜೈನ ಸಾಹಿತ್ಯ-ಸಂಸ್ಕೃತಿ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿರುವವರು ಈಗೀಗ ವಿರಳವಾಗುತ್ತಿದ್ದಾರೆ. ಈ ಕ್ಷೇತ್ರವು ಒಂದು ಕಡೆ ವಿದ್ವತ್ತನ್ನೂ ಮತ್ತೊಂದು ಕಡೆ ಬಹುಭಾಷಾವ್ಯಾಸಂಗವನ್ನೂ ಅಪೇಕ್ಷಿಸುತ್ತದೆ. ಪ್ರಾಕೃತ-ಸಂಸ್ಕೃತ ಭಾಷೆಗಳಲ್ಲಿ ಜೈನಸಾಹಿತ್ಯದ ತಲೆಬೇರುಗಳು ಅಡಗಿಕೂತಿವೆ. ಆದರೆ, ನವೋದಯ ಕಾಲದ ಜೈನ ವಿದ್ವಾಂಸರು ಮಾಡಿದ ಕೆಲಸಗಳನ್ನು ನೆನೆದರೆ- ಈಗಿನ ಕಾಲದಲ್ಲಿ ಅದು ಸೊರಗಿಹೋಗುತ್ತಿರುವುದು ವಿಷಾದನೀಯವೇ ಸರಿ. ಕನ್ನಡ ಸಂಸ್ಕೃತಿ ಮತ್ತು ಜೈನ ಸಾಹಿತ್ಯದ ಪಾರಸ್ಪರಿಕ ಬೆಲೆಗಳನ್ನು, ಮೌಲ್ಯಗಳನ್ನು ತಿಳಿಯುವ ಅಗತ್ಯವಿದೆಯಷ್ಟೆ. ಆ ಅಗತ್ಯಕ್ಕೆ ತಕ್ಕ ಶ್ರಮ ಇಂದು ನಮಗೆ ಕಾಣುತ್ತಿಲ್ಲ.

‘ಅನನ್ಯ’ ಗ್ರಂಥವು ಸಾಹಿತ್ಯ-ಸಂಸ್ಕೃತಿಗೆ ಸಂಬಂಧಿಸಿದ ಲೇಖನಗಳನ್ನು ಒಳಗೊಂಡಿದೆ. ಆಧುನಿಕ ಸಾಹಿತ್ಯವನ್ನು ಕುರಿತು ಮೂರು ಲೇಖನಗಳನ್ನು ಹೊರತುಪಡಿಸಿದರೆ ಉಳಿದೆಲ್ಲವೂ ಜೈನಸಮಾಜ ಮತ್ತು ಸಂಸ್ಕೃತಿಗೆ ಸೇರಿದ ಬರೆಹಗಳೇ ಆಗಿವೆ. ಈ ಬರೆಹಗಳು ಭೂತಕಾಲದ ವಿವರಗಳಲ್ಲಿ ಮಾತ್ರ ಮುಳುಗುವುದಿಲ್ಲ. ಅವುಗಳಲ್ಲಿ ವರ್ತಮಾನದ ವಿವರಗಳೂ ಸಂಗತಿಗಳೂ ಉಂಟು. ಕಾವ್ಯ, ಬಸದಿ, ಜೈನಾಲಯ, ಶಾಸನ, ಚರಿತ್ರೆ, ಮುಂತಾದುವು ಹಂಪನಾ ಅವರ ಬರೆಹಕ್ಕೆ ಆಹಾರವನ್ನು ಒದಗಿಸಿವೆ. ಇವೆಲ್ಲವೂ ಅವರಿಗೆ ಪ್ರಿಯವಾದ ವಿಷಯಗಳೇ ಆಗಿವೆ. ಇಲ್ಲಿಯ ಬರೆಹಗಳು ಹೊಸ ಬೆಳಕನ್ನು, ಹೊಸ ಶೋಧವನ್ನು ತಿಳಿಸಿಕೊಡುತ್ತವೆ. ಅವು ಕೇವಲ ಅಧ್ಯಯನದ ವಸ್ತುಗಳೇ? ಅಲ್ಲವೆಂಬುದೇ ಇತ್ಯರ್ಥ. ಇವು ಜೀವಂತ ಜೈನ ಸಮಾಜದೊಂದಿಗೆ ಆಕೃತಿಯನ್ನು ಪಡೆಯಲು ಯತ್ನಿಸುತ್ತವೆ. ಜನ್ನನ ಕಾವ್ಯ ಕುರಿತ ಒಟ್ಟಾರೆ ಮಾತುಗಳು ಕನ್ನಡ ಕಾವ್ಯಗಳ ಅಧ್ಯಯನಕ್ಕೆ ಹೊಸಮಾರ್ಗದ ಪ್ರವೇಶವನ್ನು ತೆರೆಯುತ್ತವೆ. ಬಸದಿಗಳ ಭೌತಿಕ ವಿವರಗಳನ್ನು ಮಾತ್ರ ಹೇಳದೆ, ಅವು ಸಾಂಸ್ಕೃತಿಕ ತವನಿಧಿಗಳಾಗಿರುವ ಬಗೆಯನ್ನೂ ಸಾಂಸ್ಕೃತಿಕ ತವನಿಧಿ ಎಂಬ ತತ್ತ್ವವನ್ನೂ ಸಾರುತ್ತವೆ. ಜೈನ ಸಮಾಜ ಮತ್ತು ಮತಾಂತರ ಎಂಬ ಲೇಖನವು ‘ಮತಾಂತರ’ ಎಂಬ ಆಧುನಿಕ ಪರಿಭಾಷೆಯನ್ನು ವ್ಯಾಖ್ಯಾನಿಸುತ್ತಲೇ ಜೈನ ಸಮಾಜ ಮತಾಂತರವನ್ನು ಒಪ್ಪಿರುವ ಬಗೆಯನ್ನು ತಿಳಿಸಿಕೊಡುತ್ತದೆ. ಇದು ಹಿಂದೂ ಮತಾಂತರ ಎಂಬ ಮಾತಿಗೆ ಹೊಸ ಪುರಾವೆಗಳನ್ನು ಒದಗಿಸಬಲ್ಲುದು. ಕಲ್ಲಿನಲ್ಲಿ ಕೆತ್ತಿರುವ ಶಾಸನಗಳು ಜೀವಂತ ಸಮಾಜದ ಸ್ಮೃತಿಗಳು. ಈ ಪ್ರಾಚೀನ ನೆನಪುಗಳು ಶಾಸನಗಳ ಮೂಲಕ ಅರಳಿವೆ. ಬಾಬಾನಗರ ಶಾಸನದ ಅನನ್ಯತೆ ಹುಡುಕುವಾಗ ಈ ಅಂಶ ಪ್ರಕಟಗೊಂಡಿದೆ.

ಅನನ್ಯ ಎಂಬ ಮಾತು ಇಲ್ಲಿಯ ಎಲ್ಲ ಲೇಖನಗಳಿಗೆ ಅನ್ವಯಿಸುತ್ತದೆ. ಅನ್ಯವಲ್ಲದ್ದು ಅನನ್ಯ. ಅದು ಬೆಡಗು, ಬಣ್ಣ, ಭಾಷೆ, ಎಲ್ಲ ವಿಚಾರಗಳಲ್ಲೂ ಬೇರೆಯದೇ. ಅನನ್ಯವು ಒಂದು ಸಮಾಜ-ಸಂಸ್ಕೃತಿಯ ತಾಯಿಬೇರು. ಅದು ತನ್ನ ಅಸ್ಮಿತತೆಯನ್ನು ಉಳಿಸಿಕೊಂಡೇ ಕಾಲಕಾಲದ ಪ್ರವಾಹದಲ್ಲಿ ನುಗ್ಗುತ್ತದೆ. ‘ಅನನ್ಯ’ ಆಗುವುದೇ ಒಂದು ದೊಡ್ಡ ಸಮಾಜದ, ಒಂದು ದೊಡ್ಡ ಸಂಸ್ಕೃತಿಯ, ಒಂದು ದೊಡ್ಡ ಭಾಷೆಯ ಮುಖ್ಯಗುರಿ. ಹಿರಿಯ ವಿದ್ವಾಂಸರಾದ ಪ್ರೊ. ಹಂಪನಾ ಅವರು ಈ ಲೇಖನಗಳ ಮೂಲಕ ಅನನ್ಯರಾಗಿದ್ದಾರೆ. ಇವರು ಹಳತು-ಹೊಸತು; ಕಾವ್ಯ-ಶಾಸ್ತ್ರ; ಪ್ರಾಚೀನ-ಅರ್ವಾಚೀನ; ಸಂಪ್ರದಾಯ-ಆಧುನಿಕತೆ-ಹೀಗೆ ಹಲವು ಮುಖಗಳಲ್ಲಿ ತಮ್ಮ ತಿಳಿವಳಿಕೆಯನ್ನು ಮಸೆದುಕೊಂಡವರು. ಪ್ರೊ. ಹಂಪನಾ ಅವರ ಹಿರಿಮೆ ಇರುವುದು ಇಂಥ ಕಡೆಗಳಲ್ಲೇ. ಹಳತನ್ನು ನೋಡಬಲ್ಲರು. ಅದರಂತೆ ಹೊಸತನ್ನು ಕಾಣಬಲ್ಲರು. ಪೂರ್ವವು ಎಷ್ಟು ಧೃಷ್ಟವೋ, ಪಶ್ಚಿಮವೂ ಅಷ್ಟೇ ಧೃಷ್ಟ. ಅನನ್ಯವು ದೃಷ್ಟಿ ಸೃಷ್ಟಿಗಳ ಅವಿರತ ಭೇದವನ್ನು ನಿರಾಕರಿಸುತ್ತದೆ. ಪ್ರೊ. ಹಂಪನಾ ಅವರು ತಮ್ಮ ಬರೆಹದಲ್ಲಿ ತೋರಿಸುವ ಶಾಸ್ತ್ರ ಲಾಲಿತ್ಯ, ಶಾಸ್ತ್ರ ಪಾಂಡಿತ್ಯ, ಅಪರೂಪದ್ದು. ಇದು ಎಲ್ಲರಿಗೂ ದಕ್ಕುವಂಥದ್ದಲ್ಲ. ಡಿ.ಎಲ್.ಎನ್. ಅವರಂಥ ಹಿರಿಯ ಪಂಡಿತ ಶ್ರೇಷ್ಠರ ಶಿಷ್ಯರಾಗಿದ್ದು ಅವರ ಸೂಕ್ಷ್ಮ

ಪಾಂಡಿತ್ಯವನ್ನು, ರಸಿಕ ಹೃದಯವನ್ನು ತಮ್ಮ ಬರೆಹಕ್ಕೆ ಧಾತುವಾಗಿ ಪ್ರೊ. ಹಂಪನಾ ಬಳಸಿಕೊಂಡಿರುವುದು ನನ್ನ ಮಾತಿಗೆ ಸಾಕ್ಷಿ!

ಇಲ್ಲಿಯ ಲೇಖನಗಳು ನಮಗೆ ಹೊಸ ಮಾರ್ಗಗಳನ್ನು ಹಾಕಿಕೊಡುತ್ತವೆ, ಹೊಸ ವಿಶ್ಲೇಷಣೆಗೆ ದಾರಿತೋರಿಸಿಕೊಡುತ್ತವೆ. ಹಳೆಯ ಸ್ಮೃತಿಗಳ ಜತೆ ವರ್ತಮಾನದ ಸ್ಮೃತಿಗಳೂ ಸೇರಬೇಕಾಗಿದೆಯಷ್ಟೆ. ಪ್ರೊ. ಹಂಪನಾ ಅವರ 'ಅನನ್ಯ'ವು ಈ ದಿಕ್ಕಿನಲ್ಲಿ ನಮಗೆ ಹೊಸ ಹೊಸ 'ಮಾರ್ಗ'ಗಳನ್ನು ತೆರೆಯಲು ಅನುವು ಮಾಡಿಕೊಡುತ್ತದೆಂಬ ನಂಬುಗೆ ನನ್ನದು! ಕನ್ನಡ ಸಂಸ್ಕೃತಿಪ್ರೇಮಿಗಳು ಈ ಗ್ರಂಥವನ್ನು ಮನಸಾರೆ ಬರಮಾಡಿಕೊಳ್ಳಬೇಕೆಂದು ನಾನು ಬೇಡುತ್ತೇನೆ. ಈ ಪುಸ್ತಕವು ಅಂದವಾಗಿ ಮುದ್ರಿತಗೊಂಡಿದೆ. ಇದಕ್ಕೆ ಕಾರಣರಾದ ಮುದ್ರಣ ಮಿತ್ರರನ್ನು ನೆನೆಯುತ್ತೇನೆ. ಪ್ರಕಟಣೆಗೆ ಸಮ್ಮತಿ ನೀಡಿದ ಪ್ರಾಧಿಕಾರದ ಸದಸ್ಯ ಮಿತ್ರರಿಗೆ, ಮುಖಪುಟ ವಿನ್ಯಾಸಕರಿಗೆ, ಈ ಪುಸ್ತಕವನ್ನು ನಿಮ್ಮ ಕೈಯಲ್ಲಿಡಲು ಒಪ್ಪಿಗೆ ನೀಡಿದ ಹಿರಿಯ ವಿದ್ವಾಂಸರಾದ ಪ್ರೊ. ಹಂಪನಾ ಅವರಿಗೆ ಪ್ರಾಧಿಕಾರದ ಪರವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

**-ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ**



# ಅಪ್ರತಿಮ ವೀರ ಚರಿತೆ

**ಗ್ರಂಥ ಸಂಪಾದನೆ**

| | | |
|---|---|---|
| ಡೆಮ್ಮೈ1/8ಆಕಾರ, ಪುಟಗಳು | : | 185+viii |
| ಪ್ರಥಮ ಮುದ್ರಣ | : | 1975 |
| ಸಹಸಂಪಾದಕರು | : | ಜಿ. ವರದರಾಜರಾವ್ |
| ಪ್ರಕಾಶಕರು | : | ಪಠ್ಯಪುಸ್ತಕ ವಿಭಾಗ, ಶಿಕ್ಷಣ ಇಲಾಖೆ. |

ಮೈಸೂರು ಒಡೆಯರಾದ ಚಿಕ್ಕದೇವರಾಜರ (1672-1704) ಕಾಲದಲ್ಲಿ ಪ್ರಸಿದ್ಧ ಕವಿ ತಿರುಮಲಾರ್ಯ (1645-1706). ಈತನು ಅಪ್ರತಿಮವೀರ ಚರಿತ, ಚಿಕ್ಕದೇವರಾಜ ವಿಜಯ, ಚಿಕ್ಕದೇವರಾಜ ವಂಶಾವಳಿ, ಚಿಕ್ಕದೇವರಾಜ ಶತಕ- ಇವನ್ನು ರಚಿಸಿದ್ದಾನೆ.

ಅಪ್ರತಿಮ ವೀರ ಚರಿತೆಯು ಅಲಂಕಾರ ಶಾಸ್ತ್ರಗ್ರಂಥ. ಇದರಲ್ಲಿ ನಾಲ್ಕು ಪ್ರಕರಣಗಳಿವೆ ಕಾವ್ಯ ಲಕ್ಷಣ, ಶಬ್ದಗುಣ, ಅರ್ಥಗುಣ, ರೀತಿ, ಶಯ್ಯೆ, ಪಾಕ, ವೃತ್ತಿ, ಅನುಪ್ರಾಸ, ಉಪಮೇಯಾದಿ ಅರ್ಥಾಲಂಕಾರ ಮತ್ತು ರಸಾಲಂಕಾರಗಳು- ಇದರಲ್ಲಿರುವ ವಿಷಯ. ಸಂಸ್ಕೃತ ಲಕ್ಷಣಶಾಸ್ತ್ರ ಗ್ರಂಥಗಳಿಂದ ಲಕ್ಷಣಗಳನ್ನು ತೆಗೆದುಕೊಂಡು ಅವಕ್ಕೆ ಕನ್ನಡದಲ್ಲಿ ವೃತ್ತಿಯನ್ನು ಬರೆದು ಸ್ವನಿರ್ಮಿತವಾದ ಉದಾಹರಣ ಪದ್ಯಗಳನ್ನು ಕೊಟ್ಟಿದ್ದಾನೆ. ಉದಾಹರಣ ಪದ್ಯಗಳು ಆಶ್ರಯದಾತನಾದ ಮೈಸೂರ ದೊರೆ ಚಿಕ್ಕದೇವರಾಜನ ಸ್ತುತಿರೂಪವಾಗಿವೆ.

ಪ್ರಸ್ತುತ ಗ್ರಂಥ ಸಂಪಾದಕರು ಅಲಂಕಾರಶಾಸ್ತ್ರ ಗ್ರಂಥಕ್ಕೆ ವಿಸ್ತಾರವಾದ ಪೀಠಿಕೆಯನ್ನೂ, ಟಿಪ್ಪಣಿಗಳನ್ನೂ, ಅನುಬಂಧಗಳನ್ನೂ ಅಭ್ಯಾಸಿಗಳಿಗೆ ಅನುಕೂಲವಾಗುವ ರೀತಿಯಲ್ಲಿ ಕೊಟ್ಟಿದ್ದಾರೆ.

ಸಂ.

# ಅಮೃತ ಶ್ರೀ

**ಸಂಪಾದಕರು**

| | | |
|---|---|---|
| ಕ್ರೌನ್ 1/4 ಆಕಾರ, ಪುಟಗಳು | : | 198+viii+xvi. |
| ಪ್ರಥಮ ಮುದ್ರಣ | : | 1988 |
| ಸಹಸಂಪಾದಕರು | : | ಸಿ. ಕೆ. ನಾಗರಾಜರಾವ್ |
| ಪ್ರಕಾಶಕರು | : | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು - 18. |

ಪುಟ್ಟ ಪ್ರಮಾಣದಲ್ಲಿ, ಪರಿಮಿತ ಧ್ಯೇಯೋದ್ದೇಶಗಳಿಂದ ಬಾಡಿಗೆ ಮನೆಯೊಂದರಲ್ಲಿ ಹುಟ್ಟಿದ ಕನ್ನಡ ಸಾಹಿತ್ಯ ಪರಿಷತ್ತು, ತನ್ನ ಸ್ವಂತ ಕಟ್ಟಡಗಳ ಸಮುಚ್ಚಯದಲ್ಲಿ ಅಚ್ಚುಕೂಟ, ಗ್ರಂಥ ಭಂಡಾರ, ಹಸ್ತಪ್ರತಿ ವಿಭಾಗ, ವಸ್ತು ಪ್ರದರ್ಶನ ವಿಭಾಗಗಳಿಗೆ ಆಶ್ರಯ ನೀಡಿ ಜಿಲ್ಲೆ ತಾಲ್ಲೂಕುಗಳವರೆಗೆ ಹಬ್ಬಿದೆ. ಹೀಗೆ ಕನ್ನಡ ನಾಡಿನ ಲಕ್ಷಾಂತರ ಅಮೃತ ಪುತ್ರರ, ಅಕ್ಷಯ ಕುಮಾರರ ಪ್ರೀತಿ ಪ್ರೇಮಗಳ ಪುತ್ಥಳಿಯಾಗಿ ಬೆಳೆದು ನಿಂತಿರುವ ಕನ್ನಡ ಸಾಹಿತ್ಯ ಪರಿಷತ್ತಿನ ಪರಂಪರೆಯ ಹಿನ್ನೆಲೆಯನ್ನೂ, ಸಾಧನೆಗಳನ್ನೂ ಸಂಗ್ರಹವಾಗಿಯೂ, ಕ್ರಮವಾಗಿಯೂ ಪರಿಚಯಿಸುವ ನಲವತ್ತು ಲೇಖನಗಳು ಇಲ್ಲಿವೆ. ಇದು ಸ್ಮರಣೀಯ ಹಾಗೂ ಆಕರ ಸ್ವರೂಪಿ ನೆನಪಿನ ಸಂಪುಟ. 'ಅಮೃತಶ್ರೀ' ತನ್ನ ಹೆಸರನ್ನು ಅನ್ವರ್ಥಗೊಳಿಸುವ ರೀತಿಯಲ್ಲಿದೆ.

ಸಂ.

## ಆಕಾಶ ಜಾನಪದ

**ಜಾನಪದ**

| | | |
|---|---|---|
| ಕ್ರೌನ್ 1/8 ಆಕಾರ, ಪುಟಗಳು, | : | 63 |
| ಪ್ರಥಮ ಮುದ್ರಣ | : | 1985 |
| ಪ್ರಕಾಶಕರು | : | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು- 18. |

ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠವು ಬೆಳಗಾವಿಯಲ್ಲಿ ಅಖಿಲ ಕರ್ನಾಟಕ 12ನೆಯ ಜಾನಪದ ಸಮ್ಮೇಳನವನ್ನು ಏರ್ಪಡಿಸಿತ್ತು. ಆಗಿನ ವಿಚಾರ ಸಂಕಿರಣದ ವಿಷಯ ಆಕಾಶ ಜಾನಪದವಾಗಿತ್ತು. ಸಮ್ಮೇಳನದ ಸಮಾರೋಪ ಭಾಷಣವೇ ಹಂಪನಾ ಅವರ 'ಆಕಾಶ ಜಾನಪದ' ಪುಸ್ತಕ. ಸೂರ್ಯ- ಚಂದ್ರ- ಗ್ರಹಣಗಳು- ಧೂಮಕೇತು- ಮೋಡ- ಗುಡುಗು- ಸಿಡಿಲು- ಮಿಂಚು-ಗಾಳಿ- ಮಳೆ- ಕಾಮನಬಿಲ್ಲು- ಮೊದಲಾದುವನ್ನು ಕುರಿತು ವಿವಿಧ ನಾಡಿನ, ಕಾಲದ ಜನಪದರ ನಂಬಿಕೆ, ಆಚರಣೆ ಕುರಿತು ಈ ಪುಸ್ತಕ ಮಾಹಿತಿಗಳನ್ನು ಒದಗಿಸುತ್ತದೆ. ಗಾದೆ- ಒಗಟುಗಳನ್ನೂ ಅಳವಡಿಸಲಾಗಿದೆ.

**ಅಭಿಪ್ರಾಯಗಳು:**

1. ಆಕಾಶ ಜಾನಪದ 63 ಪುಟಗಳ ಕಿರುಗ್ರಂಥ; ಗ್ರಂಥದ ಪರಿಮಿತಿಯಲ್ಲಿ ಆಕಾಶ ಜಾನಪದದಂತಹ ವಿಶಾಲ ಕ್ಷೇತ್ರವನ್ನು ಬರೆವ ಪ್ರಾಮಾಣಿಕ ಪ್ರಯತ್ನ ಮಾಡಿದ್ದಾರೆ. * ಆಕಾಶದ ಹಲವಾರು ಸಂಗತಿಗಳಿಗೆ ಸಂಬಂಧಿಸಿದಂತೆ ಪ್ರಪಂಚದ ಬೇರೆ ಬೇರೆ ಜನಾಂಗದವರು ಇರಿಸಿಕೊಂಡಿರುವ ನಂಬಿಕೆ. ಆಚರಣೆ ಸಂಪ್ರದಾಯ, ಅದೇ ವಿಷಯಗಳನ್ನು ಕುರಿತು ವಿಜ್ಞಾನ, ಪುರಾಣ, ಶಿಷ್ಟಪದ ಸಾಹಿತ್ಯಗಳು ನೀಡುವ ದಾಖಲೆ- ಇವೆಲ್ಲವುಗಳನ್ನು ಈ ಗ್ರಂಥದಲ್ಲಿ ಸಂಗ್ರಹಿಸಲಾಗಿದೆ. ವಿಶಾಲ - ಆಳ ಅಧ್ಯಯನದಿಂದ ಮಾತ್ರ ಹೀಗೆ ವಿಪುಲ ವಿಷಯಗಳನ್ನು ಸಂಗ್ರಹಿಸಲು ಸಾಧ್ಯವಾಗುವುದು.

**- ಪ್ರೊ. ನೀಲಗಿರಿ ತಳವಾರ**

2. ಜನಪದ ವಿದ್ವಾಂಸರು ಗಮನಹರಿಸದ ಕ್ಷೇತ್ರವೊಂದರ ಕಡೆಗೆ ಅನ್ವೇಷಣಾ ಕುತೂಹಲ ಹುಟ್ಟುವಂತೆ ಮಾಡಿರುವುದು ಈ ಪುಟ್ಟ ಕೃತಿಯ ದೊಡ್ಡ ಸಾಧನೆ. ಅಷ್ಟು ಮಾತ್ರವಲ್ಲ, ಕೃತಿಯಲ್ಲಿ ಪ್ರಸ್ತಾಪಿಸಲ್ಪಟ್ಟಿರುವ ಸಂಗತಿಗಳ ಜಾಡು ಹಿಡಿದು ಅಧ್ಯಯನ ಮುಂದುವರಿಸುವವರಿಗೆ ಇದು ಉತ್ತಮ ಮಾದರಿಯಾಗಿದೆ. ಅವಜ್ಞೆಗೊಳಗಾದ ಹಲವು ಕನ್ಯಾಕ್ಷೇತ್ರಗಳಿಗೆ ಹಂಪನಾ ಅವರ ಅನ್ವೇಷಣಾಮತಿ ಲಗ್ಗೆಹಾಕಿರುವುದು ಕನ್ನಡ ಜಾನಪದ ಅಧ್ಯಯನಕ್ಕಾಗಿರುವ ದೊಡ್ಡ ಲಾಭ.

**- ಡಾ. ಶ್ರೀಕಂಠ ಕೂಡಿಗೆ**

# ಆತ್ಮತತ್ವ ವಿಚಾರ

**ಅನುವಾದ**

ಡೆಮ್ಮಿ 1/8 ಆಕಾರ, ಪುಟಗಳು : 180+viii
ಪ್ರಥಮ ಮುದ್ರಣ : 1971,
ಪ್ರಕಾಶಕರು : ರತ್ನಾಕರ ಮಂಡಲಿ,
ಜಯನಗರ, ಬೆಂಗಳೂರು

ಮೂಲ ಗುಜರಾತಿ ಭಾಷೆಯಲ್ಲಿ ಶ್ರೀಮದ್ ವಿಜಯಲಕ್ಷ್ಮಣಸೂರೀಶ್ವರ ಮಹಾರಾಜರು ನೀಡುತ್ತಿದ್ದ ಪ್ರವಚನಗಳನ್ನು ಶತಾವಧಾನಿ ಪಂ. ಶ್ರೀ ಕೀರ್ತಿವಿಜಯಗಣಿ ಅವರು ಸಂಗ್ರಹಿಸಿ ಪ್ರಕಟಿಸಿದರು. ಅದರ ಇಂಗ್ಲಿಷ್ ಅನುವಾದವನ್ನು ಪ್ರೊ. ಘನಶ್ಯಾಮ ಜೋಶಿ ಹೊರತಂದರು. ಈ ಕನ್ನಡ ಅನುವಾದಕ್ಕೆ ಇಂಗ್ಲಿಷ್ ಪುಸ್ತಕವೇ ಆಕರ. ಇದು ಕೇವಲ ಸಂಗ್ರಹಾನುವಾದ ವಾದರೂ ಇದರಲ್ಲಿ 33 ಪ್ರವಚನಗಳು ಅಳವಟ್ಟಿವೆ. ಇದು ಶ್ವೇತಾಂಬರ ಪರಂಪರೆಯ ಗ್ರಂಥ ವಾದರೂ ಜೈನಧರ್ಮ ತತ್ವಗಳನ್ನೂ, ಆತ್ಮನಿಗೆ ಸಂಬಂಧಿಸಿದ ವಿಚಾರಗಳನ್ನೂ ದೃಷ್ಟಾಂತಗಳ ಮೂಲಕ ನಿರೂಪಿಸಿದೆ. ಜಾತಿ- ಮತ- ಧರ್ಮಗಳ ಅಂತರವಿಲ್ಲದೆ ಎಲ್ಲರೂ ಓದಿ ಸ್ಪಂದಿಸ ಬಹುದಾದ ಸರ್ವಜನಸುಲಭ ಗ್ರಾಹ್ಯ ರೀತಿಯಲ್ಲಿ ಉಪದೇಶವಿದೆ. ನಯಸೇನನ ಧರ್ಮಾಮೃತ, ವೃತ್ತ ವಿಲಾಸನ ಧರ್ಮಪರೀಕ್ಷೆ ಕಾವ್ಯಗಳ ಧಾಟಿಯಲ್ಲಿರುವ ಈ ಗ್ರಂಥದ ಉಪಕಥೆಗಳು ರಂಜನೀಯವಾಗಿವೆ.

**ಅಭಿಪ್ರಾಯಗಳು:**

1. ಮೂಲ ಶೀರ್ಷಿಕೆಯನ್ನು ಹಾಗೇ ಉಳಿಸಿಕೊಂಡಿರುವರು. ಮೂಲ ಗ್ರಂಥದ ಗಾತ್ರವನ್ನು ಕಾಲು ಭಾಗಕ್ಕೆ ಇವರು ಇಳಿಸಿದ್ದರೂ ಗ್ರಂಥದ ಪಾತ್ರಕ್ಕಾಗಲೀ ನೇತ್ರಕ್ಕಾಗಲೀ (ದರ್ಶನ) ಊನ ಬಾರದಂತೆ ಚಾಕಚಕ್ಯತೆಯಿಂದ ಇವರು ಕನ್ನಡಿಸಿರುವುದು ಅನುವಾದ ಕಾರ್ಯಕ್ಕೆ ಮಾರ್ಗ ಹಾಕಿಕೊಟ್ಟಂತಿದೆ.

ಒಟ್ಟಿನಲ್ಲಿ ಈ ಗ್ರಂಥ ಅನುವಾದವಾಗಿ ಕಾಣುವುದೇ ಇಲ್ಲ. ಇಲ್ಲಿಯ ಭಾಷೆ ಸಹಜವಾಗಿದೆ, ಸುಂದರವಾಗಿದೆ. ಕನ್ನಡದ ಓಟ ಮತ್ತು ಮಾಟ ಎಲ್ಲೂ ಕೆಟ್ಟಿಲ್ಲ. ಕನ್ನಡದ ಕಂಪು ಪ್ರಾರಂಭದಿಂದ ಕೊನೆಯ ತನಕ ಹರಿದಿದೆ. ಭಾಷೆ ಎಲ್ಲೂ ಕೃತಕವಾಗಿಲ್ಲ, ನೀರಸವಾಗಿಲ್ಲ. ಮೂಲ ಗ್ರಂಥದ ಸಾರವನ್ನು ಅನುವಾದಕರು ಹೀರಿ, ರಕ್ತಗತ ಮಾಡಿಕೊಂಡು ಅಚ್ಚ ಕನ್ನಡವಾಗಿಸಿರುವರು.

**--ಪ್ರೊ. ಜಿ. ಬ್ರಹ್ಮಪ್ಪ**

2. ನಿಜವಾದ ಅನುವಾದಕ ಹಂಪನಾ ಅವರನ್ನು ನೋಡುವುದಾದರೆ ಮತ್ತು ಗುರುತಿಸುವುದಾದರೆ, 'ಆತ್ಮ ತತ್ವ ವಿಚಾರ' ಮತ್ತು 'ವೀರ ಜಿನೇಂದ್ರ ಚರಿತೆ' ಕೃತಿಗಳನ್ನು ಅಗತ್ಯವಾಗಿ ನೋಡಬೇಕು. * ಅಂತರಾರ್ಥವನ್ನು ಗುರುತಿಸುವಲ್ಲಿ, ಮೂಲವನ್ನು ಸಜೀವವಾಗಿ ಭಾಷೆಯಿಂದ ಹಿಡಿಯುವಲ್ಲಿ ಅನುವಾದಕರು ತುಂಬಾ ಶ್ರಮಿಸಿದ್ದನ್ನು ಕಾಣುತ್ತೇವೆ.

**-- ಪ್ರೊ. ಟಿ. ಎಸ್. ಪ್ರಭಾಕರ್**

# ಆನಂದರ ಆಯ್ದ ಕಥೆಗಳು

**ಹೊಸಗನ್ನಡ - ಗ್ರಂಥಸಂಪಾದನೆ**

| | | |
|---|---|---|
| ಕ್ರೌನ್1/8 ಆಕಾರ, ಪುಟಗಳು | : | 258+viii |
| ಪ್ರಥಮ ಮುದ್ರಣ | : | 1985 |
| ಪ್ರಕಾಶಕರು | : | ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು |

ಕರ್ನಾಟಕ ಸರ್ಕಾರ ಮೈಸೂರಲ್ಲಿ ಏರ್ಪಡಿಸಿದ ಪ್ರಥಮ ವಿಶ್ವ ಕನ್ನಡ ಸಮ್ಮೇಳನದ ನೆನಪಿಗಾಗಿ ಆ ಸಂದರ್ಭದಲ್ಲಿ ಪ್ರಕಟಿಸಿದ ಪುಸ್ತಕ ಮಾಲೆಯಲ್ಲಿನ ಒಂದು ಪುಸ್ತಕ. ಹೊಸಗನ್ನಡದ ಕಥೆಗಾರರಲ್ಲಿ ಆನಂದರದು ದೊಡ್ಡ ಹೆಸರು. ಆನಂದರ ಪ್ರಾತಿನಿಧಿಕ ಸ್ವರೂಪದ್ದಾಗಬಲ್ಲ ಹನ್ನೊಂದು ಕಥೆಗಳನ್ನು ಈ ಸಂಕಲನದಲ್ಲಿ ಸೇರಿಸಿದೆ:

ನಾನು ಕೊಂದ ಹುಡುಗಿ, ಭವತಿ ಭಿಕ್ಷಾಂದೇಹಿ, ಸರಸಿಯ ಗೊಂಬೆ, ಮಾಟಗಾತಿ, ಹೆಂಡತಿಯ ಕಾಗದ, ಚಂದ್ರಗ್ರಹಣ, ರಾಧೆಯ ಕ್ಷಮೆ, ಪದ್ಮಪಾಕ, ನಾವೂ ಹಾಗೆಯೇ ಮತ್ತು ರಘುವತೀ ಪ್ರಲಾಪ ಮುಂತಾದ ಉತ್ತಮ ಕಥೆಗಳು ಈ ಸಂಕಲನದಲ್ಲಿವೆ.

ಸಂ.

# ಉಪಾಧ್ಯೆ ಡಾ. ಆ. ನೇ.

**ಬದುಕು - ಬರಹ ಚಿತ್ರಣ**

| | | |
|---|---|---|
| ಕ್ರೌನ್ 1/8 ಆಕಾರ, ಪುಟಗಳು | : | 46+ix |
| ಪ್ರಥಮ ಮುದ್ರಣ | : | 1996 |
| ಪ್ರಕಾಶಕರು | : | ಜೈನ ಅಧ್ಯಯನ ಸಂಸ್ಥೆ, ಶ್ರವಣಬೆಳಗೊಳ-573135 |

'ಆಧುನಿಕ ಜೈನ ಪುಣ್ಯ ಪುರುಷರು' ಗ್ರಂಥಮಾಲೆಯ ಪ್ರಥಮ ಪುಷ್ಪವಾಗಿ ಹೊರಬಂದಿದೆ ಈ ಪುಸ್ತಕ. ಅಂತರರಾಷ್ಟ್ರೀಯ ಖ್ಯಾತಿಯ ಘನತೆವೆತ್ತ ಸಂಶೋಧಕ ದಿಗ್ಗಜ ಡಾ. ಆದಿನಾಥ ನೇಮಿನಾಥ ಉಪಾಧ್ಯೆ. ಅವರ ಖಾಸಾ-ನಿಕಟ ಶಿಷ್ಯರಾದ ನಾಗರಾಜಯ್ಯನವರು ತಟಸ್ಥ ಭೂಮಿಕೆಯಲ್ಲಿ ನಿಂತು ಈ ಮೌಲಿಕ ಗ್ರಂಥವನ್ನು ಬರೆದಿರುವುದು ಜೀವನ ಚರಿತ್ರಕಾರರಿಗೆ ಒಂದು ಮಾದರಿ. ಮುಖ್ಯವಾಗಿ ಆ. ನೇ. ಉಪಾಧ್ಯೆಯವರ ಬಾಳಿನೊಂದಿಗೇ ಬೆಸೆದು ಬಂದ ಬರವಣಿಗೆಯ ಶಿಸ್ತನ್ನು ಗುರುವೃಂದವನ್ನು, ವಿದ್ವನ್ಮಿತ್ರ ಪರಿವಾರವನ್ನು, ಕೊಲ್ಲಾಪುರ ವಾಸವನ್ನು, ಪ್ರೌಢ ಗ್ರಂಥ ರಚನೆಯ ವಾಙ್ಮಯ ತಪಸ್ಸನ್ನು, ವಿದೇಶ ಪ್ರವಾಸವನ್ನು, ಪ್ರಾಚ್ಯ ಸಮ್ಮೇಳನ ಹಾಗೂ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನದ ಹಿನ್ನೆಲೆಯನ್ನು ಈ ಕಿರುಹೊತ್ತಗೆಯು ಕನ್ನಡಿಯಾಗಿ ಬಿಂಬಿಸಿದೆ.

ಆ. ನೇ. ಉಪಾಧ್ಯೆ ಅವರ ದೀರ್ಘಕಾಲಿಕ ಪಂಡಿತ ಮಿತ್ರರಾದ ಪ್ರೊ. ಕೆ. ಜಿ. ಕುಂದಣಗಾರರಿಗೆ ಈ ಪುಸ್ತಕವನ್ನು ಅರ್ಪಿಸಲಾಗಿದೆ.

**ಅಭಿಪ್ರಾಯ :**

ಡಾ. ಆ. ನೇ. ಉಪಾಧ್ಯೆಯವರು ಕರ್ನಾಟಕದ ಅಗ್ರಗಣ್ಯ ಸಂಶೋಧಕ ವಿದ್ವಾಂಸರು, ಕನ್ನಡವನ್ನು ರಾಷ್ಟ್ರೀಯ ಮಟ್ಟದಲ್ಲಿ ಬೆಳಗಿದವರು. ಅವರ ಸಂಪರ್ಕ ಪ್ರೇರಣೆಗಳನ್ನು ಪಡೆದ ಇನ್ನೊಬ್ಬ ಪ್ರಸಿದ್ಧ ಸಂಶೋಧಕ ವಿದ್ವಾಂಸ ಡಾ. ಹಂಪನಾ ಅವರು ಈ ಕೃತಿಯ ಮೂಲಕ ಡಾ. ಉಪಾಧ್ಯೆ ಅವರ ಸಾಧನೆಗಳನ್ನು ಪರಿಚಯಿಸಿದ್ದಾರೆ. ಇದರಿಂದ ಸಹಜವಾಗಿಯೇ ಕೃತಿಯ ಮೌಲಿಕತೆ ಹೆಚ್ಚಿದೆ. ಸ್ವತಃ ಸಂಶೋಧಕರಾಗಿರುವ ಡಾ. ಹಂಪನಾ ಅವರು ಡಾ. ಉಪಾಧ್ಯೆ ಅವರ ಸಂಶೋಧನೆಯ ಎಲ್ಲ ಮಗ್ಗಲುಗಳನ್ನೂ ಸ್ಪಷ್ಟವಾಗಿ ತೆರೆದು ತೋರಿದ್ದಾರೆ. ವಸ್ತುನಿಷ್ಠವಾದ ಧೋರಣೆ, ತಿಳಿಯಾದ ಭಾಷೆ, ಸೊಗಸಾದ ನಿರೂಪಣೆಗಳಿಂದಾಗಿ ಪ್ರಸ್ತುತ ಕೃತಿ ಪಂಡಿತ ಪಾಮರರಿಬ್ಬರಿಗೂ ರುಚಿಸುವಂಥದಾಗಿದೆ.

**--ಡಾ. ಎಸ್. ಎ. ದಿಬ್ಬದ, 'ಬೆನ್ನುಡಿ'ಯಿಂದ**

# ಕನ್ನಡದ ಮೂವರು ಕಟ್ಟಾಳುಗಳು

ಸಂಪಾದಕರು

| | | |
|---|---|---|
| ಕ್ರೌನ್ 1/8 ಆಕಾರ, ಪುಟಗಳು | : | 4+16+24+21=65 |
| ಪ್ರಥಮ ಮುದ್ರಣ | : | 1968 (1-11-1968) |
| ಪ್ರಕಾಶಕರು | : | ಹಿಂದ್ ವಿದ್ಯಾರ್ಥಿ ಯುವಕ ಸಮ್ಮೇಲ<br>ಮಲ್ಲೇಶ್ವರಂ,<br>ಬೆಂಗಳೂರು |

ಇದರಲ್ಲಿ ಕೆಂಗಲ್ ಹನುಮಂತಯ್ಯ, ದೇ. ಜವರೇಗೌಡ ಮತ್ತು ನಟ ರಾಜಕುಮಾರ್ ಅವರ ಜೀವನ- ಸಾಧನೆ ಕುರಿತು ಕ್ರಮವಾಗಿ ಶೀವೋತ್ತಮ ಕಲ್ಲೆ, ಸಾಶಿ. ಮರುಳಯ್ಯ, ಹಂಪ. ನಾಗರಾಜಯ್ಯ ಮತ್ತು ರಾಮಣ್ಣ ಕೋಡಿಹೊಸಳ್ಳಿ- ಇವರು ಬರೆದ ಲೇಖನಗಳಿವೆ. ರಾಜ್ಯೋತ್ಸವ ದಿನದಂದು ಮೇಲ್ಕಂಡ ಈ ಮೂವರು ಮಹನೀಯರನ್ನು ಸನ್ಮಾನಿಸಿದ ಸಂದರ್ಭಕ್ಕೆ ಹೊರತಂದ ಗ್ರಂಥ. ಮೂವರು ಕಟ್ಟಾಳುಗಳ ಫೋಟೋಗಳೂ ಇವೆ.

**ನೋಡಿ: ಭಾರತದ ಭಾಷಾ ಸಮಸ್ಯೆ- ಎಂಬ ಶೀರ್ಷಿಕೆಯಲ್ಲಿ ನೀಡಿರುವ ವಿವರಣೆ.**

ಸಂ.

## ಕರ್ನಾಟಕದ ಜಾತ್ರೆಗಳು

| | | |
|---|---|---|
| ಡೆಮ್ಮೈ 1/8 ಆಕಾರ, ಪುಟಗಳು | : | 84+viii |
| ಪ್ರಥಮ ಮುದ್ರಣ | : | 1985 (10-1-85) |
| ಪ್ರಕಾಶಕರು | : | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-18. |

ಜಾನಪದ ಬತ್ತದ ತೊರೆ. ಸದಾ ಹರಿಯುವ ಆ ತುಂಬು ಹೊಳೆಯ ಒಂದು ಮುಖ್ಯ ಭಾಗವೆಂದರೆ ಜಾತ್ರೆ. ಜಾತ್ರೆಯಿಲ್ಲದ ಹಳ್ಳಿಯಿಲ್ಲ. ಕರ್ನಾಟಕದ ಕೆಲವು ಪ್ರಮುಖ ಜಾತ್ರೆಗಳನ್ನೂ ಜಾತ್ರೆಯ ಜಾನಪದೀಯ ಸ್ವರೂಪ ವೈಭವವನ್ನೂ ಸಚಿತ್ರವಾಗಿ ಈ ಪುಸ್ತಕ ತೋರಿಸಿದೆ. ಜಾತ್ರೆಗಳನ್ನು ಕುರಿತು ಕನ್ನಡದಲ್ಲಿ ಹೊರಬಂದ ಮೊದಲ ಮದುವಣಗಿತ್ತಿಯೆಂದು ಈ ಗ್ರಂಥ ಕೀರ್ತಿಗಳಿಸಿದೆ. ಕುವೆಂಪು ವಿಶ್ವವಿದ್ಯಾನಿಲಯದವರು ಬಿ. ಆರ್. ಪ್ರಾಜೆಕ್ಟಿನ ಬಯಲಲ್ಲಿ ಏರ್ಪಡಿಸಿದ ವಿಚಾರ ಸಂಕಿರಣವನ್ನು ಉದ್ಘಾಟಿಸಿ ಮಾಡಿದ ಉಪನ್ಯಾಸವೇ ಈ ಪುಸ್ತಕ.

"5-8 ವರ್ಷದ ಹುಡುಗನಾಗಿದ್ದ ಅವಧಿಯಲ್ಲಿ ಪ್ರೀತಿಯಿಂದ ತಮ್ಮ ಹೆಗಲಮೇಲೆ ಕುಳ್ಳಿರಿಸಿ, ಜಾತ್ರೆಗಳಲ್ಲಿ ಸುತ್ತಾಡಿಸಿ ಖುಷಿಪಡಿಸಿ, ಜಾತ್ರೆಯ ನೆನಪು ಅಚ್ಚಳಿಯದಂತೆ ನಿಲ್ಲಲು ನೆರವಾಗಿ ಎಂದೋ ಸತ್ತ ನನ್ನ ಹಳ್ಳಿಯ ತಳವಾರರಿಗೆ, ಕಮಾನು ಕಟ್ಟಿ ಹುಲ್ಲು ಹಾಸಿ ಕಂಬಳಿ ಹೊದಿಸಿ ಜಾತ್ರೆಯ ಸಹಸ್ರಾರು ರಾಸುಗಳ ನಡುವೆ ಓಡಾಡಿಸಿ ಬೆರಗು ಹುಟ್ಟಿಸಿ ಇಂದು ಕಣ್ಮರೆಯಾಗಿರುವ ರೈತ ಕುಳಗಳಿಗೆ ಕೃತಜ್ಞತೆಯ ಭಾವದಿಂದ'' ಈ ಪುಸ್ತಕವನ್ನು ಅರ್ಪಿಸಿರುವುದು ಔಚಿತ್ಯದಿಂದ ಕೂಡಿದೆ.

**ಅಭಿಪ್ರಾಯಗಳು:**

1. ಪ್ರೊ. ಹಂಪ ನಾಗರಾಜಯ್ಯನವರ 'ಕರ್ನಾಟಕದ ಜಾತ್ರೆಗಳು' ಎನ್ನುವ ಗ್ರಂಥವು ಈ ವಿಷಯದಲ್ಲಿ ಕನ್ನಡದಲ್ಲಿ ಬಂದಿರುವ ಪ್ರಥಮ ಪ್ರಮುಖ ಅಧ್ಯಯನ ಗ್ರಂಥ. ಜಾತ್ರೆಗಳ ಶಬ್ದದ ಸ್ವರೂಪ, ಜಾತ್ರೆ ಶಬ್ದದ ಐತಿಹಾಸಿಕ ಉಲ್ಲೇಖ- ಇವುಗಳನ್ನು ಈ ಗ್ರಂಥದಲ್ಲಿ ಸಂಶೋಧನಾತ್ಮಕವಾಗಿ ವಿವೇಚಿಸಲಾಗಿದೆ. ಅನೇಕ ಜಾತ್ರೆಗಳ ಅಪೂರ್ವ ಛಾಯಾ ಚಿತ್ರಗಳು ಈ ಗ್ರಂಥದ ಮಹತ್ವವನ್ನು ಹೆಚ್ಚಿಸಿವೆ.

**-ಡಾ. ಬಿ. ಎ. ವಿವೇಕ ರೈ**

2. ಜಾತ್ರೆ ನಮ್ಮ ಸಮಷ್ಟಿ ಬದುಕಿನ ಒಂದು ಸಂಕೀರ್ಣ, ಸಾಮಾಜಿಕ ಧಾರ್ಮಿಕ ಸಂಗತಿಗಳಿಂದ ಸಮನ್ವಿತವಾದ ಸಾಂಸ್ಕೃತಿಕ ಸತ್ಯ. ಕರ್ನಾಟಕದ ಜಾತ್ರೆಗಳು ವಿಷಯಕ್ಕೆ ಸಂಬಂಧಿಸಿದ ಅಧ್ಯಯನ ಕ್ಷೇತ್ರ ಕನ್ನೆನೆಲ. ಇದಕ್ಕೆ ಗುದ್ದಲಿ ಪೂಜೆ ಮಾಡಿದವರಲ್ಲಿ ಮತ್ತು ಅದರ ಉತ್ಖನನಕ್ಕೆ ಸಮರ್ಥವಾಗಿ ಕೈ ಹಾಕಿದವರಲ್ಲಿ ಬಹುಶಃ ಪ್ರೊ. ಹಂಪನಾ ಅವರೇ ಮೊದಲಿಗರು. ಒಬ್ಬ ಭಾಷಾ ಶಾಸ್ತ್ರಜ್ಞ ಜಾನಪದಕ್ಕೆ ಸಂಬಂಧಿಸಿದ, ವಿಶೇಷತಃ ಜಾನಾಂಗಿಕ ಸಂಸ್ಕೃತಿಗೆ ಸಂಬಂಧಿಸಿದ ಇಂಥ ಅಧ್ಯಯನ ಕೈಗೊಂಡಾಗ ಅದು ಎಷ್ಟೆಲ್ಲ ಸಾಧ್ಯತೆಗಳನ್ನು ಅನಾವರಣಗೊಳಿಸುತ್ತದೆ ಎನ್ನುವುದಕ್ಕೆ ಹಂಪನಾ ಅವರ 'ಕರ್ನಾಟಕ ಜಾತ್ರೆಗಳು' ಪುಸ್ತಕವೇ ಸಾಕ್ಷಿ.

**--ಡಾ. ದೇವೇಂದ್ರಕುಮಾರ ಹಕಾರಿ**

3. ಜಾತ್ರೆಯ ಸ್ವರೂಪ, ವಿವಿಧ ಸಾಂಸ್ಕೃತಿಕ ಮಾಹಿತಿಯನ್ನು ಹಲವು ದಿಕ್ಕುಗಳಲ್ಲಿ ಒಗ್ಗೂಡಿಸಿ ಅರ್ಥೈಸುವ ಪ್ರಯತ್ನವೇ ಹಂಪನಾ ಅವರ 'ಕರ್ನಾಟಕದ ಜಾತ್ರೆಗಳು' ಕೃತಿ*

* ಈ ಪುಸ್ತಕ ಜಾತ್ರೆಗಳನ್ನು ಅಧ್ಯಯನ ಮಾಡುವವರಿಗೆ ಒಂದು ಪುಟ್ಟ ಕೈಪಿಡಿಯಂತಿದೆ. ಬೃಹತ್ ಸಂಪುಟವೊಂದರ ಬರವಣಿಗೆಗೆ ಪ್ರೇರಣೆಯೊದಗಿಸಬಹುದಾದ ಸಾಮಗ್ರಿ ಚಿಂತನೆಯ ಎಳೆಗಳು ಇದರಲ್ಲಿ ಒಗ್ಗೂಡಿವೆ.

**-- ಡಾ. ಶ್ರೀಕಂಠ ಕೂಡಿಗೆ**

# ಕರ್ನಾಟಕ ಮತ್ತು ಜೈನಧರ್ಮ

**ಕರ್ನಾಟಕದ ಜೈನ ಕ್ಷೇತ್ರಗಳ ಕೈಪಿಡಿ**

| | | |
|---|---|---|
| ಕ್ರೌನ್1/8 ಆಕಾರ, ಪುಟಗಳು | : | 48 |
| ಪ್ರಥಮ ಮುದ್ರಣ | : | 1981 ಐದು ಸಾವಿರದ ಪ್ರತಿಗಳು |
| ಪ್ರಕಾಶಕರು | : | ಐ. ಬಿ. ಹೆಚ್. ಪ್ರಕಾಶನ, ಬೆಂಗಳೂರು |
| ದ್ವಿತೀಯ ಮುದ್ರಣ | : | 1983, ಐದು ಸಾವಿರ ಪ್ರತಿಗಳು. |

ಕರ್ನಾಟಕಕ್ಕೂ ಜೈನ ಧರ್ಮಕ್ಕೂ ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘ ಕಾಲದಿಂದ ತುಂಬಾ ನಿಕಟವಾದ ಸಂಬಂಧವಿದೆ. ಕನ್ನಡ ಸಾಹಿತ್ಯಕ್ಕೂ, ವಾಸ್ತು- ಶಿಲ್ಪ- ಚಿತ್ರ ಕಲೆಗಳಿಗೂ, ಧರ್ಮ ಸಮನ್ವಯಕ್ಕೂ ಶಾಸ್ತ್ರ ಸಾಹಿತ್ಯಕ್ಕೂ ಜೈನರ ಕೊಡುಗೆ ಬಹಳ ದೊಡ್ಡದು. ಕನ್ನಡ ನಾಡಿನ ಚರಿತ್ರೆಯಲ್ಲಿ ಹಾಸು ಹೊಕ್ಕಾಗಿ ಹೆಣೆದುಕೊಂಡಿರುವ ಈ ಸಂಬಂಧ ಸ್ವರೂಪವನ್ನೂ, ಇದರ ಫಲಿತಗಳನ್ನೂ, ಪ್ರಮುಖವಾದ ಶ್ರವಣಬೆಳಗೊಳ, ಕೊಪ್ಪಳ, ಹೊಂಬುಜ, ಹಲಸಿ, ಐಹೊಳೆ, ಬಾದಾಮಿ, ಮೊದಲಾದ ಜೈನ ಕೇಂದ್ರಗಳನ್ನೂ ಈ ಪುಟ್ಟ ಪುಸ್ತಕದಲ್ಲಿ ಸೂಕ್ತ ಚಿತ್ರಗಳೊಡನೆ ನಿರೂಪಿಸಲಾಗಿದೆ. ಪ್ರಥಮ ವಿಶ್ವ ಕನ್ನಡ ಸಮ್ಮೇಳನದ ಸಂದರ್ಭದಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಇವರಿಂದ, ಐಬಿಎಚ್ ಪ್ರಕಾಶದವರ ನೆರವಿನೊಡನೆ 1983ರ ಆವೃತ್ತಿ ಪ್ರಕಟವಾಗಿದೆ.

**ಅಭಿಪ್ರಾಯ :**

ಜೈನಧರ್ಮವು ಕರ್ನಾಟಕದಲ್ಲಿ ಯಾವ ಯಾವ ಕಾಲದಲ್ಲಿ ಹೇಗೆಲ್ಲಾ ನೆಲೆಗೊಂಡು ಕಾಲಕ್ರಮದಲ್ಲಿ ಅದು ರಾಜಕೀಯ, ಸಾಮಾಜಿಕ, ಕಲೆ ಹಾಗೂ ಸಾಹಿತ್ಯ ಕ್ಷೇತ್ರಗಳಲ್ಲಿ, ಇತರ ಧರ್ಮಾವಲಂಬಿಗಳೊಡನೆ ಹೇಗೆ ಅನ್ಯೋನ್ಯ ಸಂಬಂಧ ಬೆಳೆಸಿ ಪ್ರವರ್ಧಮಾನಕ್ಕೆ ಬಂದಿತು-ಮುಂತಾದ ವಿಷಯವನ್ನು ಡಾ. ಹಂಪನಾ ಈ ಪುಟ್ಟ ಪುಸ್ತಿಕೆಯಲ್ಲಿ ಸರಳವಾಗಿ, ಸಂಕ್ಷಿಪ್ತವಾಗಿ ಅವಲೋಕಿಸಿದ್ದಾರೆ**. ಕರ್ನಾಟಕದಲ್ಲಿ ಜೈನಧರ್ಮ ಎಲ್ಲಾ ಕ್ಷೇತ್ರಗಳಲ್ಲೂ ಬೀರಿರುವ ಪ್ರಭಾವದ ಒಂದು ಪಕ್ಷಿನೋಟ ಈ ಪುಟ್ಟ ಪುಸ್ತಕ ನೀಡುತ್ತದೆ. ಲೇಖಕರ ವಿಷಯದಲ್ಲಿರುವ ಅಪಾರ ಪಾಂಡಿತ್ಯ, ಶ್ರದ್ಧೆ ಹಾಗೂ ಸರಳ ನಿರೂಪಣಾ ಶೈಲಿಯಿಂದ, ಆದಷ್ಟು ಹೆಚ್ಚು ವಿಚಾರಗಳನ್ನು, ಕಿರಿದರಲ್ಲಿ ಪಿರಿದನ್ನು ಅಡಗಿಸಲು ಸಫಲರಾಗಿದ್ದಾರೆ.

**--ಡಾ. ವಿ. ಗೋಪಾಲಕೃಷ್ಣ**

# ಕಮ್ಮಟದ ಕಿಡಿಗಳು

**ಸಂಶೋಧನ ಕೃತಿ**

| | | |
|---|---|---|
| ಡೆಮ್ಮಿ 1/8 ಆಕಾರ, ಪುಟಗಳು | : | 290+viii |
| ಪ್ರಥಮ ಮುದ್ರಣ | : | 1980 |
| ಪ್ರಕಾಶಕರು | : | ವಾಗ್ದೇವಿ ಎಂಟರ್‌ಪ್ರೈಸರ್ಸ್, ಶಿವರಾಂಪೇಟೆ, ಮೈಸೂರು-1 |

ಕನ್ನಡದಲ್ಲಿ ಶಬ್ದಾರ್ಥ ಜಿಜ್ಞಾಸೆಗೆ ಮೀಸಲಾದ ಬೆರಳೆಣಿಕೆಯ ಕೆಲವೇ ಮೌಲಿಕ ಕೃತಿಗಳಲ್ಲಿ ಇದೊಂದು. ಹಳೆಗನ್ನಡ ನಡುಗನ್ನಡ ಕಾವ್ಯಗಳಲ್ಲಿಯೂ ಶಾಸನಗಳಲ್ಲಿಯೂ ಸಿಗುವ ಅನೇಕ ಅಪೂರ್ವ ಕ್ಲಿಷ್ಟ ಶಬ್ದಗಳ ನಿಷ್ಪತ್ತಿ ಮತ್ತು ಅರ್ಥವನ್ನು, Etymology and semantics ದೃಷ್ಟಿಯಿಂದ ವಿವೇಚಿಸಿದ್ದಾರೆ, ಹಂಪನಾ ಬೇರೆ ಬೇರೆ ಪತ್ರಿಕೆಗಳಲ್ಲಿ [ಸಾಹಿತ್ಯ ಪರಿಷತ್ ಪತ್ರಿಕೆ, ಪ್ರಬುದ್ಧ ಕರ್ನಾಟಕ, ಸಾಧನೆ ಇತ್ಯಾದಿ] ಪ್ರಕಟಿಸಿದ್ದ ಲೇಖನಗಳು ಈ ಸಂಕಲನದಲ್ಲಿ ಸೇರ್ಪಡೆಯಾಗಿವೆ.

ಈ ಕೃತಿಯನ್ನು ಲೇಖಕರು ತಮ್ಮ ಪ್ರೀತಿಯ ಗುರುಗಳಾದ ಡಾ. ಡಿ. ಎಲ್. ನರಸಿಂಹಾಚಾರ್ ಅವರಿಗೆ ಅರ್ಪಿಸಿರುವುದು ಯೋಗ್ಯವಾಗಿದೆ.

ಈ ಪುಸ್ತಕಕ್ಕೆ ದೇವರಾಜ್ ಬಹದ್ದೂರ್ ಬಹುಮಾನ ಬಂದಿದೆ.

ಸಂ.

## ಕವಿವರ ಕಾಮಧೇನು

**ಸಂಶೋಧನ ಕೃತಿ**

ಡೆಮ್ಮೈ 1/8 ಆಕಾರ, ಪುಟಗಳು : 138+vi

ಪ್ರಥಮ ಮುದ್ರಣ : 1996

ಪ್ರಕಾಶಕರು : ರತ್ನತ್ರಯ ಪ್ರಕಾಶನ, ಮೈಸೂರು- 570023

ದಾನಚಿಂತಾಮಣಿ ಅತ್ತಿಮಬ್ಬೆಯ ತಾಯಿ ಮತ್ತು ತಂದೆ ಕಡೆಯ ಹಾಗೂ ಗಂಡನ ಕಡೆಯ ವಂಶವೃಕ್ಷವನ್ನೂ, ಮಗ ಅಣ್ಣಿಗದೇವನ ವಿಚಾರವನ್ನೂ, ಈಕೆಯ ಆಶ್ರಯದಲ್ಲಿದ್ದ ರನ್ನಕವಿಯ ವಿಚಾರವನ್ನೂ ಸವಿವರವಾಗಿ, ಶಾಸನಗಳ ಆಧಾರಗಳಿಂದ ತೋರಿಸಿಕೊಟ್ಟಿರುವ ಸಂಶೋಧನ ಗ್ರಂಥ. ಇದುವರೆಗೆ ಅತ್ತಿಮಬ್ಬೆಯ ವಿಚಾರವಾಗಿ ಇಷ್ಟು ವಿಸ್ತಾರವಾಗಿ, ತಲಸ್ಪರ್ಶಿಯಾಗಿ, ಪ್ರೌಢವಾಗಿ ಸಂಶೋಧನ ಗ್ರಂಥ ಒಂದೂ ಪ್ರಕಟವಾಗಿರಲಿಲ್ಲವೆಂಬುದು ಈ ಪುಸ್ತಕದ ವೈಶಿಷ್ಟ್ಯವನ್ನು ಹೇಳುತ್ತದೆ. ಅತ್ತಿಮಬ್ಬೆಯ ಜೀವನ- ಸಾಧನೆಗಳನ್ನು ಉದ್ದಕ್ಕೂ ಚರಿತ್ರೆಯ ಗಟ್ಟಿ ನೆಲಗಟ್ಟಿನ ಮೇಲೆ ನಿಲ್ಲಿಸಲಾಗಿದೆ.

**ಅಭಿಪ್ರಾಯಗಳು:**

1. ಸಾಧಾರಣವಾಗಿ ನಾನು ಬೇರೆಯವರ ಸಂಶೋಧನ ಕೃತಿಗಳನ್ನು ಓದುವುದಿಲ್ಲ. ಆದರೆ ಹಂಪನಾ ಅವರು ರಚಿಸಿರುವ ಕವಿವರ ಕಾಮಧೇನು ಅತ್ತಿಮಬ್ಬೆ ಕೃತಿಯನ್ನು ಓದಲು ಕೈಗೆ ತೆಗೆದುಕೊಂಡವನು ಅದನ್ನು ಸಂಪೂರ್ಣವಾಗಿ ಓದಿ ಮುಗಿಸುವವರೆಗೂ ಕೆಳಗಿಡಲು ಮನಸ್ಸೇ ಬರಲಿಲ್ಲ. ಅಷ್ಟು ಚೆನ್ನಾಗಿ ಆ ಕೃತಿ ಓದಿಸಿಕೊಂಡು ಹೋಗುತ್ತದೆ. ಅತ್ತಿಮಬ್ಬೆಯ ಬದುಕಿನ ಜತೆಗೆ ಅಂದಿನ ನಾಡಿನ ಚರಿತ್ರೆಯೂ ಮಿಳಿತವಾಗಿರುವುದರಿಂದ ಅತ್ತಿಮಬ್ಬೆಯ ಬಗ್ಗೆ ಕೃತಿ ರಚಿಸುವುದು ಒಂದು ಸವಾಲು. ಈ ಸವಾಲನ್ನು ಸ್ವೀಕರಿಸುವುದರ ಜತೆಗೆ ಶಾಸನ ಸಾಹಿತ್ಯ ಹಾಗೂ ಕಾವ್ಯಗಳ ಆಕರವನ್ನೂ ಹಂಪನಾ ಅವರು ಬಳಸಿರುವುದರಿಂದ ಈ ಕೃತಿ ಹೆಚ್ಚು ಮೌಲಿಕವಾಗಿದೆ.

**-- ಡಾ. ಕೆ. ವಿ. ರಮೇಶ್**

(ಪುಸ್ತಕ ಬಿಡುಗಡೆಯ ಸಮಾರಂಭದ ಭಾಷಣದಿಂದ) 6.9.96.

2. ಅತ್ತಿಮಬ್ಬೆಯು ಹಂಪನಾ ಅವರ ಮನಸ್ಸಿನಲ್ಲಿ ಮೊದಲಿನಿಂದಲೂ ತುಂಬಿಕೊಂಡಿದ್ದಾಳೆ. ಆಕೆಯ ಬಗ್ಗೆ ಹಂಪನಾ ಅವರ ಪ್ರೀತಿ ಅನನ್ಯವಾದದ್ದು. ಆಕೆಯ ಬಗೆಗಿನ

ತಮ್ಮ ಪ್ರೀತಿಯನ್ನು ಬಚ್ಚಿಡದೆ ಹಲವು ಬಾರಿ ಆಕೆಯ ಬಗ್ಗೆ ಬರೆದಿದ್ದಾರೆ. ಹಿಂದೆಯೂ ಅತ್ತಿಮಬ್ಬೆಯ ಬಗ್ಗೆ ಒಂದು ಪುಸ್ತಕವನ್ನು ಬರೆದಿದ್ದರು. ಈಗ ಕವಿವರ ಕಾಮಧೇನು ಕೃತಿಯನ್ನು ಬರೆದಿದ್ದಾರೆ. ಬಹುಶಃ ಮುಂದೆಯೂ ಆಕೆಯ ಬಗ್ಗೆ ಬರೆದರೂ ಬರೆಯಬಹುದು. ಅಷ್ಟರ ಮಟ್ಟಿಗೆ ಅತ್ತಿಮಬ್ಬೆ ಹಂಪನಾ ಅವರ ಹೃದಯದಲ್ಲಿ ಸ್ಥಾನ ಪಡೆದಿದ್ದಾಳೆ. ಅತ್ತಿಮಬ್ಬೆಯ ಬಗ್ಗೆ ಅತ್ಯಂತ ಆಪ್ತವಾಗಿ ಹಂಪನಾ ಇಲ್ಲಿ ಬರೆದಿದ್ದಾರೆ.

**--ಡಾ. ಟಿ. ವಿ. ವೆಂಕಟಾಚಲಶಾಸ್ತ್ರಿ**

(ಪುಸ್ತಕ ಬಿಡುಗಡೆ ಸಮಾರಂಭದ ಭಾಷಣದಿಂದ) 6-9-96.

3. ಅನೇಕ ಹೊಸ ವಿಷಯಗಳನ್ನು ನೇರವಾಗಿ, ಧ್ವನಿಪೂರ್ಣವಾಗಿ ಪ್ರತಿಪಾದಿಸುವ 'ಕವಿವರ ಕಾಮಧೇನು' ಈ ಕೃತಿ, ಕರ್ನಾಟಕದ ಇತಿಹಾಸ ಮತ್ತು ಸಾಹಿತ್ಯ ಕ್ಷೇತ್ರಗಳಿಗೆ ಒಂದು ವಿನೂತನ ಸೇರ್ಪಡೆಯೆನಿಸಿದೆ.

**-- ಡಾ. ಮಧು ವೆಂಕಾರೆಡ್ಡಿ**



# ಕವಿ ಬಂಧುವರ್ಮ: ಜಿಜ್ಞಾಸೆ

**ಸಂಶೋಧನ ಕೃತಿ**

ಡೆಮ್ಮೈ1/8 ಆಕಾರ, ಪುಟಗಳು : 148+4

ಪ್ರಥಮ ಮುದ್ರಣ : 1993

ಪ್ರಕಾಶಕರು : ವಿದ್ಯಾನಿಧಿ ಪ್ರಕಾಶನ, ಗದಗ - 562 102

ಮೈಸೂರು ವಿಶ್ವವಿದ್ಯಾನಿಲಯದ ಸಂಪತ್ರಿಕೆಯಾದ ಪ್ರಬುದ್ಧ ಕರ್ನಾಟಕ, ಕನ್ನಡ ಸಾಹಿತ್ಯ ಪರಿಷತ್ತಿನ ಸಾಹಿತ್ಯ ಪರಿಷತ್ ಪತ್ರಿಕೆ, ಕರ್ನಾಟಕ ವಿಶ್ವವಿದ್ಯಾನಿಲಯದ ಕರ್ನಾಟಕ ಭಾರತಿ ಹಾಗೂ ಬೆಂಗಳೂರು ವಿಶ್ವವಿದ್ಯಾಲಯದ ಸಾಧನೆ - ಈ ನಿಯತ ಕಾಲಿಕಗಳಲ್ಲಿ ಪ್ರಕಟವಾದ ಕೆಳಕಂಡ 5 ಸಂಲೇಖನಗಳು ಈ ಸಂಶೋಧನ ಗ್ರಂಥದಲ್ಲಿವೆ:

1. ಬಂಧುವರ್ಮನ ಇತಿವೃತ್ತ
2. ಬಂಧುವರ್ಮನ ನಾಲ್ಕು ಟಿಪ್ಪಣಿಗಳು
3. ಬಂಧುವರ್ಮನ ಜೀವ ಸಂಬೋಧನೆಯಲ್ಲಿ ಸಗರನ ಕಥೆ
4. ಜೀವಸಂಬೋಧನೆ -ಧನ್ಯಕುಮಾರ ಚರಿತೆ
5. ಬಂಧುವರ್ಮ- ಪೊನ್ನ ಸಂತುಲನ.

ಕನ್ನಡದ ಮಹತ್ವದ ಕವಿ ಬಂಧುವರ್ಮನ ಸ್ವಂತಿಕೆ, ಕಥನ ಕಲೆ, ಆಕರಗಳು, ಇತಿವೃತ್ತ, ಕವಿಯ ಪ್ರಭಾವ, ಶೈಲಿಯ ವಿಶಿಷ್ಟತೆ, ಕನ್ನಡ ಸಾಹಿತ್ಯದಲ್ಲಿ ಕವಿಯ ಸ್ಥಾನ ನಿರ್ದೇಶನ- ಇವು ಈ ಗ್ರಂಥದಲ್ಲಿ ಪ್ರತಿಪಾದಿತವಾಗಿವೆ. ಬಂಧುವರ್ಮ ಕವಿಯನ್ನು ಕುರಿತು ಪ್ರಥಮಬಾರಿಗೆ ಕವಿ-

ಕಾವ್ಯ ವಿಮರ್ಶೆ ಮಾಡಿದವರು ಹಂಪ. ನಾಗರಾಜಯ್ಯ. ಬೊಮ್ಮಣ ಕವಿಯ ನಾಗಕುಮಾರ ಷಟ್ಪದಿಯನ್ನು ದೊಡ್ಡ ಪ್ರಮಾಣದ (1978) ಪೀಠಿಕೆಯಲ್ಲಿ ಫಣಿಕುಮಾರ ಕಥಾ ಸಾಹಿತ್ಯ (1978) ಗ್ರಂಥದಲ್ಲೂ ಹಂಪನಾ ಅವರು ಬಂಧುವರ್ಮನ ವೈಶಿಷ್ಟ್ಯದತ್ತ ಗಮನ ಸೆಳೆದಿದ್ದರು.

ಈ ಸಂಶೋಧನ ಗ್ರಂಥವನ್ನು ತಮ್ಮ ತಮ್ಮನಾದ ಹಂಪ. ಧರಣೇಂದ್ರಯ್ಯನವರ ಮಗ ಬಿ. ಎಚ್. ಡಿ. ಪಾರ್ಶ್ವನಾಥನು 18ನೆಯ ವಯಸ್ಸಿನಲ್ಲಿ ಅಕಾಲ ಮರಣ ಹೊಂದಿದ ನೋವಿನ ನೆನಪಿಗಾಗಿ ಅರ್ಪಣೆ ಮಾಡಿದ್ದಾರೆ.

ಸಂ.

# ಕುವೆಂಪು-ಜೋಶಿ

**ಸಂಪಾದಕರು**

[ಕನ್ನಡದ ರಾಷ್ಟ್ರಕವಿ ಕುವೆಂಪು ಮತ್ತು ಗುಜರಾತಿ ಮಹಾಕವಿ ಜೋಶಿ ಅವರ ಬಗೆಗೆ ಪರಿಚಯಾತ್ಮಕ ಕೃತಿ.]

| | | |
|---|---|---|
| ಗೌರವ ಸಂಪಾದಕರು | : | ಪ್ರೊ. ಜಿ. ಬ್ರಹ್ಮಪ್ಪ. |
| ಕ್ರೌನ್ 1/8 ಆಕಾರ, ಪುಟಗಳು | : | 58+xii |
| ಪ್ರಥಮ ಮುದ್ರಣ | : | 1969 (5-1-69) |
| ಪ್ರಕಾಶಕರು | : | ಹಿಂದ್ ವಿದ್ಯಾರ್ಥಿ ಯುವಕ ಸಮ್ಮೇಲ<br>ಮಲ್ಲೇಶ್ವರಂ, ಬೆಂಗಳೂರು-3 |

1968ರಲ್ಲಿ ಭಾರತೀಯ ಜ್ಞಾನಪೀಠ ಪ್ರಶಸ್ತಿಯನ್ನು ಕುವೆಂಪು ಮತ್ತು ಉಮಾಶಂಕರ ಜೋಶಿ ಸಂಯುಕ್ತವಾಗಿ ಪಡೆದರು. ಆ ಸಂತೋಷದ ಸವಿನೆನಪಿಗೆ ಹೊರತಂದ ಪರಿಚಯ ಪುಸ್ತಕವಿದು. ಇದರ ಅರಿಕೆಯನ್ನು ಪ್ರೊ. ಜಿ. ಬ್ರಹ್ಮಪ್ಪ ಬರೆದಿದ್ದಾರೆ. ಕುವೆಂಪು ಮತ್ತು ಜೋಶಿ- ಇವರಿಬ್ಬರನ್ನು ಕುರಿತು ಹಂಪ. ನಾಗರಾಜಯ್ಯ (25+11) 36ಪುಟ ಬರೆದಿದ್ದಾರೆ. ಹೇಮಾವತಿ ಕುವೆಂಪುರವರನ್ನು ಕುರಿತು ಪ್ರೊ. ಕಮಲಾ ಹಂಪನಾ ಅವರೂ, ಜ್ಞಾನಪೀಠದ ಪರಿಚಯವನ್ನು ಕುರಿತು ಕಲ್ಲೆ ಶಿವೋತ್ತಮರೂ ಲೇಖನ ಬರೆದಿದ್ದಾರೆ. ಗಾತ್ರದಲ್ಲಿ ಪುಟ್ಟದಾದರೂ ಸಾಹಿತ್ಯ ವಿಮರ್ಶೆಯ ದೃಷ್ಟಿಯಿಂದ ಈ ಕೃತಿ ಗಣ್ಯ ಸ್ಥಾನ ಹೊಂದಿದೆ.

ಸಂ.

# ಕೆಲವು ನೋಂಪಿಯ ಕಥೆಗಳು

**ಗ್ರಂಥ ಸಂಪಾದನೆ**

| | | |
|---|---|---|
| ಡೆಮ್ಮೈ 1/8 ಆಕಾರ, ಪುಟಗಳು | : | 88+viii |
| ಪ್ರಥಮ ಮುದ್ರಣ | : | 1976 |
| ಪ್ರಕಾಶಕರು | : | ವಿವೇಕೋದಯ ಗ್ರಂಥಮಾಲೆ, ಗುಡಿಬಂಡೆ. |

ಜೈನ ಸಮಾಜದಲ್ಲಿ ವ್ರತಗಳನ್ನು 'ನೋಂಪಿ' ಎಂಬ ಹೆಸರಿನಿಂದ ಆಚರಿಸುತ್ತಾರೆ. ಸಾವಿರಾರು ವರ್ಷಗಳಿಂದ ಆಚರಿಸಿಕೊಂಡು ಬಂದಿರುವ ನೂರಾರು ಹೆಸರಿನ ನೋಂಪಿಗಳ ಹುಟ್ಟು, ಬೆಳವಣಿಗೆ, ಹರಹು, ಹಿನ್ನೆಲೆ, ಹೊಸತನ, ಹಿರಿಮೆ, ಧಾರ್ಮಿಕತೆ, ಭಾಷಾತ್ಮಕ ಪರಿಚಯವನ್ನು ಹಂಪನಾ ಅವರು ಪ್ರೌಢವಾಗಿ ವಿವೇಚಿಸಿದ್ದಾರೆ. ನೋಂಪಿ ಕಥೆಗಳನ್ನು ಕುರಿತು ಇಷ್ಟು ತಲಸ್ಪರ್ಶಿಯಾಗಿ, ಖಚಿತವಾಗಿ ಬರವಣಿಗೆ ಮೊತ್ತ ಮೊದಲಿಗೆ ಈ ಗ್ರಂಥದಲ್ಲಿ ಹೊಸದಾಗಿ ಬಂದಿರುವುದು ಈ ಪುಸ್ತಕದ ಚಾರಿತ್ರಿಕ ಮಹತ್ವವನ್ನು ತೋರಿಸುತ್ತದೆ.

ಈ ಕೃತಿಗೆ ಬೆಂಗಳೂರು ವಿಶ್ವವಿದ್ಯಾನಿಲಯವು ನಗದು ಬಹುಮಾನ ನೀಡಿದೆ.

ಈ ಪುಸ್ತಕವನ್ನು ಡಾ. ಆ. ನೇ. ಉಪಾಧ್ಯೆ ಮತ್ತು ಮಿರ್ಜಿ ಅಣ್ಣಾರಾಯ ಅವರಿಗೆ ಅರ್ಪಣೆ ಮಾಡಲಾಗಿದೆ. ಸಮಗ್ರ ನೋಂಪಿಯ ಕಥೆಗಳ ಸಂಗ್ರಹದ ಪರಿಚಯ ಕುರಿತು ಇದೇ ಪುಸ್ತಕದಲ್ಲಿ ನೋಡಿ.

**ಅಭಿಪ್ರಾಯ:**

ಈ ನೋಂಪಿಗಳು ಸೃಷ್ಟಿಯಾದ ವಾತಾವರಣ, ಅವು ಬೆಳೆದು ಬಂದ ಬಗೆ, ಅವುಗಳ ಸ್ವರೂಪ, ಸ್ಥಾನ, ಉದ್ದೇಶ, ಅರ್ಥವಂತಿಕೆ ಮುಂತಾದ ಪ್ರತಿಯೊಂದು ಅಂಶವನ್ನೂ ಈ ಗ್ರಂಥದ ಸವಿಸ್ತಾರವಾದ ಪ್ರಸ್ತಾವನೆಯಲ್ಲಿ ಹಂಪನಾ ನಿರೂಪಿಸಿದ್ದಾರೆ. ಈ ಪ್ರಸ್ತಾವನೆ ಸಂಶೋಧನಾತ್ಮಕವಾದ ಅತ್ಯಂತ ಮೌಲಿಕ ಬರಹ. ಈ ವಿಸ್ತಾರವಾದ ಹಿನ್ನೆಲೆಯಿಲ್ಲದಿದ್ದರೆ ನೋಂಪಿಗಳನ್ನು ಅರ್ಥ ಮಾಡಿಕೊಳ್ಳುವುದು ಕಷ್ಟ. ಜೈನ ಸಾಹಿತ್ಯದ ಒಂದು ವಿಶಿಷ್ಟ ಪ್ರಕಾರವಾಗಿ ಬೆಳೆದು ಬಂದಿರುವ ನೋಂಪಿಕಥೆಗಳ ಸವಿವರವಾದ ಅಭ್ಯಾಸವನ್ನೂ ಇಲ್ಲಿ ಮಾಡಲಾಗಿದೆ. *ಹಂಪನಾ ಅವರು ಜೈನಧರ್ಮ ಮತ್ತು ಸಾಹಿತ್ಯಗಳ ಬಗೆಗೆ ಆಳವಾದ ಪಾಂಡಿತ್ಯ ಹೊಂದಿರುವುದನ್ನು ಈ ವಿಶ್ಲೇಷಣೆ ಮನಗಾಣಿಸುತ್ತದೆ. * ಇವುಗಳನ್ನು **ಗಂಭೀರವಾಗಿ ಅಧ್ಯಯನಿಸಿದವರಲ್ಲಿ ಹಂಪನಾರೇ ಮೊದಲಿಗರು ಎಂಬುದರಲ್ಲಿ ಸಂದೇಹವಿಲ್ಲ.**

**-- ಡಾ. ಕೆ. ಆರ್. ಸಂಧ್ಯಾರೆಡ್ಡಿ**

# ಕೃಷ್ಣ ಪಾಂಡವರು

**ಅನುವಾದ**

| | | |
|---|---|---|
| ಕ್ರೌನ್ 1/8 ಆಕಾರ, ಪುಟಗಳು | : | 96+iii |
| ಪ್ರಥಮ ಮುದ್ರಣ | : | 1971 |
| ಪ್ರಕಾಶಕರು | : | ಐಬಿಎಚ್ ಪ್ರಕಾಶನ, ಬೆಂಗಳೂರು-560 009 |

ಮೂಲ ಇಂಗ್ಲಿಷಿನಲ್ಲಿ ಮಕ್ಕಳಿಗಾಗಿ ಬರೆದ ಹದಿನೈದು ಪ್ರಸಂಗಗಳು ಈ ಕೃತಿಯಲ್ಲಿವೆ. ಇವು ಮಹಾಭಾರತ ಮೂಲದಿಂದ ಬಂದಿವೆ. ಎಲ್ಲವೂ ಕೃಷ್ಣ- ಪಾಂಡವರಿಗೆ ಸಂಬಂಧಪಟ್ಟಿವೆ. ಕೃಷ್ಣನ ಹುಟ್ಟು ಹಬ್ಬ, ರುಕ್ಮಣಿಯೊಡನೆ ಮದುವೆ, ರುಕ್ಮಿಣಿ-ಸತ್ಯಭಾಮೆ, ನಾರದನ ಪಜೀತಿ, ಐರಾವತ ಧರೆಗಿಳಿಯಿತು, ಮೋಸದ ಜೂಜು, ಅರ್ಜುನನ ತಪಸ್ಸು- ಮೊದಲಾದ ಇಲ್ಲಿನ ಭಾಗಗಳು ಭಾರತೀಯರ ಜನಮನಕ್ಕೆ ಚಿರಪರಿಚಿತವಾದ ಪ್ರಸಂಗಗಳ ಸುಂದರ ಚಿತ್ರಣ ಇಲ್ಲಿದೆ.

**ಅಭಿಪ್ರಾಯ:**

ಮೆಚ್ಚುವ ಅಂಶವೆಂದರೆ ಅನುವಾದವನ್ನು ಕುರಿತದ್ದು. ಕನ್ನಡಕ್ಕೆ ಸರಿ ಹೊಂದುವ ವಾಕ್ಯ ರಚನೆ, ಮೂಲ ಭಾವದ ಯಥಾನುಸರಣೆ, ಭಾವ-ಭಾವನೆಗಳ ನೇರ ಭಟ್ಟಿತನದಲ್ಲಿ ಹಂಪನಾ ಅವರ ಸಾಮರ್ಥ್ಯ ಹುದುಗಿದೆ. ಭಾಷೆಗೆ ಸಂಬಂಧಿಸಿ ಹೇಳುವುದಾದರೆ ಪುಟ್ಟ ಪುಟ್ಟ ಮಹಾವಾಕ್ಯಗಳು ಮಕ್ಕಳು ನೆನಪಿಟ್ಟುಕೊಳ್ಳಲು ಸಹಕಾರಿಯಾಗಿವೆ. ಸರಳ, ಸುಂದರ, ಹಾಗೂ ಸುಲಲಿತವಾಗಿ ಅನುವಾದಗೊಂಡಿರುವ ಪ್ರಸ್ತುತ ಕೃತಿ ಮಕ್ಕಳ ಗ್ರಂಥಾಲಯದಲ್ಲಿ ಅಗತ್ಯವಾಗಿ ಸೇರ್ಪಡೆಯಾಗಬೇಕಾದುದಾಗಿದೆ.

--ಡಾ. ಪದ್ಮಾ ಶೇಖರ್

# ಕೈವಾರ ಸಾಹಿತ್ಯ ಸಮ್ಮೇಳನ

**ಸಂಪಾದಕರು**

ಡೆಮ್ಮಿ 1/8 ಆಕಾರ, ಪುಟಗಳು : 278+vi

ಪ್ರಥಮ ಮುದ್ರಣ : 1984

ಪ್ರಕಾಶಕರು : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-18.

ಕೋಲಾರ ಜಿಲ್ಲೆಯ ಪ್ರಸಿದ್ಧ ಯಾತ್ರಾಸ್ಥಳವಾದ ಕೈವಾರದಲ್ಲಿ 1984 ಮಾರ್ಚಿ 22, 23, 24ರಂದು ಮೂರು ದಿನಗಳು ಅಖಿಲ ಭಾರತ 56ನೆಯ ಕನ್ನಡ ಸಾಹಿತ್ಯ ಸಮ್ಮೇಳನ ನಡೆಯಿತು. ಈ ಸಮ್ಮೇಳನದಲ್ಲಿ ಏರ್ಪಾಡಾಗಿದ್ದ ಎಲ್ಲಗೋಷ್ಠಿಗಳ ಪ್ರಬಂಧಗಳೂ ಕವಿತೆಗಳೂ ಇದರಲ್ಲಿವೆ. ಸಮ್ಮೇಳನದ ಅಧ್ಯಕ್ಷರಾಗಿದ್ದವರು ಎ. ಎನ್. ಮೂರ್ತಿರಾವ್. ಜನಪ್ರಿಯ ಸಾಹಿತ್ಯ ಮತ್ತು ಅಭಿರುಚಿ, ಕಾವ್ಯ- ಹೊಸದೃಷ್ಟಿ, ನಾನು ಮತ್ತು ನನ್ನ ಸಾಹಿತ್ಯ, ಕವಿಗೋಷ್ಠಿ, ಸಾಹಿತ್ಯ ಮತ್ತು ಇತರ ಜ್ಞಾನ ಕ್ಷೇತ್ರಗಳು- ಎಂಬ ಅಯ್ದು ಗೋಷ್ಠಿಗಳು ಏರ್ಪಾಟಾಗಿದ್ದುವು.

ಈ ಸಮ್ಮೇಳನದ ಸ್ವಾಗತ ಸಮಿತಿ ಅಧ್ಯಕ್ಷರು ಎಂ. ಎಸ್. ರಾಮಯ್ಯ. ಕನ್ನಡ ಸಾಹಿತ್ಯ ಪರಿಷತ್ತಿನ ಪುರೋಭಿವೃದ್ಧಿಗಾಗಿ ಬಹುಮುಖವಾದ ಕೃಪಾಶ್ರಯವನ್ನಿತ್ತು ನೆರವಾದ, ಕರ್ನಾಟಕದ ರತ್ನಸಿಂಹಾಸನಾಧೀಶ್ವರರೆಂದು ಖ್ಯಾತರಾಗಿದ್ದ ಮತ್ತು ಮೈಸೂರು ಸಂಸ್ಥಾನದ ಮಹಾರಾಜರಾಗಿದ್ದ ಶ್ರೀ ನಾಲ್ವಡಿ ಕೃಷ್ಣರಾಜೇಂದ್ರ ಒಡೆಯರ ಶತಮಾನೋತ್ಸವದ ಸವಿನೆನಪಿಗೆ ಈ ಸಮ್ಮೇಳನ ಸಂಪುಟವನ್ನು ಅರ್ಪಣೆ ಮಾಡಲಾಗಿದೆ.

ಸಂ.

## ಕೊಪ್ಪಳ ಶಾಸನಗಳು

ಡೆಮ್ಮಿ 1/8 ಆಕಾರ, ಪುಟಗಳು : 190

ಪ್ರಥಮ ಮುದ್ರಣ : 1998

ಪ್ರಕಾಶಕರು : ರತ್ನತ್ರಯ ಪ್ರಕಾಶನ, ಮೈಸೂರು

**ಶಾಸನ ಸಂಗ್ರಹ**

ಶ್ರವಣ ಬೆಳ್ಗೊಳದ ನಂತರ ದೊಡ್ಡ ಜೈನ ಕ್ಷೇತ್ರವೆಂದು ಕೊಪ್ಪಳ ಪ್ರಸಿದ್ಧಿ. ಆದರೆ ಈ ಪ್ರಸಿದ್ಧಿಯನ್ನು ಸಾಬೀತು ಮಾಡಲಿಕ್ಕೆ ಯಾವ ಆಧಾರವೂ ಇರಲಿಲ್ಲ. ನಿಮ್ಮ ಈ ಪುಸ್ತಕದಿಂದ ಸರಿಯಾದ ಆಧಾರ ಸಿಕ್ಕಿದೆ. ನನಗೆ ಈ ಪುಸ್ತಕದ ಬಗ್ಗೆ ಆಸ್ಥೆ ಹೆಚ್ಚಾಗುವುದಕ್ಕೆ ಕಾರಣ ಸೋಮದೇವ ಸೂರಿಯ ಸಮಾಧಿ ಅಲ್ಲಿತ್ತೆನ್ನುವ ಪುರಾವೆ ಅಲ್ಲಿ ಸಿಕ್ಕಿರುವುದರಿಂದ. ಇದಲ್ಲದೆ ಗಂಗರ ಪ್ರಾಬಲ್ಯ ಅಲ್ಲಿಯೂ ಇತ್ತೆನ್ನುವುದು ಹೊಸ ವಿಷಯವೇ. ಅವರೇ ಅಣ್ಣಿಗೇರಿಯಲ್ಲಿಯೂ ಒಂದು ಬಸದಿಯನ್ನು ಕಟ್ಟಿದ್ದು ಅದು ಅನೇಕ ಶತಮಾನಗಳು ಊರ್ಜಿತ ಸ್ಥಿತಿಯಲ್ಲಿತ್ತು. ಕೊಪ್ಪಳ ಶಾಸನಗಳು ಒಂದು ವಿದ್ವತ್ ಸಾಹಸ, ಸಾಧನೆ. ಅದನ್ನು ಪ್ರಕಟಿಸಿ ಶಾಸನ ಅಧ್ಯಯನಕ್ಕೆ ಉಪಕಾರ ಮಾಡಿದ್ದೀರಿ. ನೀವು ನಮ್ಮ ತಲೆಮಾರಿನವರಿಗೆ 'ಮಾಡೆಲ್' ಶಾಸನ ತಜ್ಞರು.

**ಡಾ. ಎಚ್. ಆರ್. ರಘುನಾಥಭಟ್**

ಧಾರವಾಡ

ಕೊಪ್ಪಳದ ಎಲ್ಲ ಶಾಸನಗಳನ್ನು ಒಂದೆಡೆ ತಂದು ಒಳ್ಳೆಯ ಕೆಲಸ ಮಾಡಿದ್ದೀರಿ. ಜೈನ ಧರ್ಮದ ಇತಿಹಾಸದ ಅಭ್ಯಾಸಕ್ಕೆ ಇದು ಬಹಳ ಉಪಯುಕ್ತವಾಗಿದೆ. ಅಭಿನಂದನೆಗಳು.

**ಡಾ. ಶ್ರೀನಿವಾಸ ರಿತ್ತಿ**

ಧಾರವಾಡ

ನಿಮ್ಮ ಪುಸ್ತಕಗಳೆಲ್ಲಾ ಸುಂದರ ಮುದ್ರಣ, ಆಕರ್ಷಕ ಚಿತ್ರಗಳು, ಹೊಸ ವಿಷಯ ಇವುಗಳಿಗೆ ಹೆಸರುವಾಸಿಯಾಗಿವೆ. ನಿಮ್ಮ ಸಂಶೋಧನೆಯು ಅವ್ಯಾಹತವಾಗಿ ನಡೆದಿದೆ. ನಡೆಯಲಿ ಹೀಗೆ ನಿಮ್ಮ ಸಂಶೋಧನೆ.

***ಪ್ರೊ. ಜಿ. ಎಸ್. ದೀಕ್ಷಿತ್**

ಧಾರವಾಡ

## Koppala Shashanagalu

The present book, for the first time presents before us the text of all epigraphs so far traced at Koppal. After presenting each text, the author gives the summary of that inscription, and then gives extra explanation wherever necessary. The extra explanation is of greater importance because here the author explains us - the importance of places referred to in that inscription, special linguistic usages, greatness of personalities mentioned in that inscription etc.

The book has 24 photographs related to inscriptions, Jain sculptures and historical sites at Koppal.

The book has a good introductory chapter also. The history of the place is explained here.

**Dr. S. P. Padmaprasad**
Madhugiri



# ಗಡಿನಾಡು ಗಾಂಧಿ

**ಜೀವನ ಚರಿತ್ರೆ**

| | | |
|---|---|---|
| ಕ್ರೌನ್ 1/8 ಆಕಾರ, ಪುಟಗಳು | : | 106 |
| ಪ್ರಥಮ ಮುದ್ರಣ | : | 1974 |
| ಸಹ ಲೇಖಕರು | : | ಶಿವೋತ್ತಮ ಕಲ್ಲೆ |
| ಪ್ರಕಾಶಕರು | : | ಹಿಂದ್ ವಿದ್ಯಾರ್ಥಿ ಯುವಕ ಸಮ್ಮೇಲ. ಮಲ್ಲೇಶ್ವರಂ, ಬೆಂಗಳೂರು. |

ಸ್ವಾತಂತ್ರ್ಯ ಹೋರಾಟಗಾರರ ಸಾಲಿನಲ್ಲಿ ಎತ್ತರದವರು 'ಗಡಿನಾಡು ಗಾಂಧಿ' ಬಿರುದಾಂಕಿತರಾದ ಖಾನ್ ಅಬ್ದುಲ್ ಗಫಾರ್‌ಖಾನ್. ಅವರು ಗಾಂಧೀಜಿಯವರ ನಿಕಟವರ್ತಿ. 'ಭಾರತರತ್ನ' ಪ್ರಶಸ್ತಿ ಪಡೆದವರು. ಅವರ ನಿಷ್ಕಾಮಸೇವೆ, ತ್ಯಾಗಮನೋಭಾವ ಸತ್ಯ ಅಹಿಂಸೆಗಳನ್ನು ಅನುಸರಿಸಿದ ಸಂಕಲ್ಪಜೀವನ, ಅನ್ಯಾಯದ ವಿರುದ್ಧ ಹೋರಾಟ, ಸೆರೆಮನೆವಾಸ- ಇವು ಚರಿತ್ರಾರ್ಹವಾಗಿವೆ. ಗಾಂಧೀಜಿಯುವರು ಖಾನರನ್ನು 'ದೇವಮಾನವ'ನೆಂದು ಕರೆದರು. ಪ್ರಾಯಶಃ ಗಾಂಧೀಜಿಯವರ ನಂತರ ಸಮಗ್ರ ಭಾರತವೇ ಇನ್ನೊಬ್ಬ ಮಾನವ ಮಹಾತ್ಮನಿಗೆ ತೋರಿದ ಭಕ್ತಿ ಪ್ರೀತಿಗಳನ್ನು ಗಫಾರ್‌ಖಾನರಿಗೆ ತೋರಿದ ಪ್ರಮಾಣದಲ್ಲಿ ಮತ್ತಾರಿಗೂ ತೋರಿಸಲಿಲ್ಲ. ಗಫಾರ್‌ಖಾನರಂತೆ ವಿಶ್ವಕುಟುಂಬಿಗೆ ವಿಶ್ವದಲ್ಲಿ ಎಲ್ಲಿ ಸ್ಥಾನವಿಲ್ಲ? 1969ರಲ್ಲಿ ಅವರು ಭಾರತಕ್ಕೆ, (ಕರ್ನಾಟಕಕ್ಕೂ) ಬಂದಿದ್ದ ಸಂದರ್ಭದಲ್ಲಿ ಹೊರತಂದ ಪುಸ್ತಕವಿದು. ಜೀವನ ಚರಿತ್ರೆಯೊಂದಿಗೆ ಚಿತ್ರಗಳೂ ಸೇರ್ಪಡೆಯಾಗಿವೆ.

**ಅಭಿಪ್ರಾಯಗಳು:**

1.ಈ ಪುಟ್ಟ ಪುಸ್ತಕದಲ್ಲಿ ಕೆಲವು ಚಿತ್ರಗಳು ನಮ್ಮ ಗಮನ ಸೆಳೆಯುತ್ತವೆ- ನಂದಲಾಲ್ ಬಸುರವರು ಮರದಲ್ಲಿ ಕೆತ್ತಿರುವ ಗಫಾರ್‌ಖಾನರ ಚಿತ್ರ, ಜಾಕೀರ್ ಹುಸೇನರೊಂದಿಗಿರುವ ಚಿತ್ರ, ವಾರ್ಧಾದಲ್ಲಿರುವ ಚಿತ್ರ, ಗಾಂಧಿ-ಖಾನರ ಚಿತ್ರ- ಇವುಗಳು ಈ ಪುಸ್ತಕದ ಸೌಂದರ್ಯವನ್ನು ಹೆಚ್ಚು ಮಾಡಿವೆ. ಗಫಾರಖಾನರ ಜೀವನ ಒಂಬತ್ತು ವಿಭಾಗಗಳಲ್ಲಿ ಚಿತ್ರಿತವಾಗಿದೆ- ಮಹಾತ್ಮ ಕಂಡ ದೇವಿಮಾನವ, ಹುಟ್ಟು, ಹಿನ್ನೆಲೆ, ಎಳವೆ- ಕಲಿಕೆ, ಜನಸೇವೆಯ ದೀಕ್ಷೆ, ಗಾಂಧಾರ ಸಂಸ್ಕೃತಿ ನಾಗರಿಕತೆ, ಬ್ರಿಟನ್ ಸರಹದ್‌ನೀತಿ, ಸಾರ್ವಜನಿಕ ಜೀವನ ಪ್ರಾರಂಭ, ಗಾಂಧೀಜಿಯ ಸಾನಿಧ್ಯದಲ್ಲಿ, ವಿಭಜನೆ, ಪಕ್‌ಸುನ್ ಹೋರಾಟ. ಪುಸ್ತಕದ ಭಾಷೆ ಸರಳವಾಗಿದ್ದು ವ್ಯಾಸಂಗಕ್ಕೆ ಅನುಕೂಲಕರವಾಗಿದೆ. ಗಫಾರ್‌ಖಾನರ ಹಿರಿಯ ಜೀವನದ, ಹೋರಾಟದ ಬದುಕನ್ನು ಸ್ವಾರಸ್ಯವಾಗಿ ಸಮಗ್ರವಾಗಿ ಚಿತ್ರಿಸುವುದರಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆ.

**--ಬಿ. ಜಯಪ್ಪ**

2. ಖಾನ್‌ಅಬ್ದುಲ್ ಗಫಾರ್‌ಖಾನ್ ಅವರ ರಾಜಕೀಯ ಜೀವನದ ಇತಿಹಾಸವನ್ನು ನಿರೂಪಿಸುವ 'ಗಡಿನಾಡುಗಾಂಧಿ' ಹೊತ್ತಿಗೆ ಜೀವನಚರಿತ್ರೆಯಲ್ಲಿ ಮೈಲಿಗಲ್ಲು.

**--ಸಿ. ಹನುಮಂತರಾಯಪ್ಪ**

# ಗೋಕಾಕ ಡಾ. ವಿ. ಕೃ.

**ಪ್ರಚಾರೋಪನ್ಯಾಸ ಕೃತಿ**

| | | |
|---|---|---|
| ಡೆಮ್ಮಿ 1/6 ಆಕಾರ, ಪುಟಗಳು | : | 66+viii |
| ಪ್ರಥಮ ಮುದ್ರಣ | : | 1984 |
| ಪ್ರಕಾಶಕರು | : | ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ |

1984ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗವು ಕನಕಪುರದಲ್ಲಿ ಏರ್ಪಡಿಸಿದ 'ಕವಿ- ಕಾವ್ಯ- ಚಿಂತನ' ಉಪನ್ಯಾಸ ಮಾಲೆಯಲ್ಲಿ ಹಂಪ. ನಾಗರಾಜಯ್ಯನವರು ನೀಡಿದ ಉಪನ್ಯಾಸ ಕೃತಿಯಿದು. ಕರ್ನಾಟಕವನ್ನು ರಾಷ್ಟ್ರೀಯ ಮಟ್ಟಕ್ಕೇರಿಸಿದ ಡಾ. ವಿನಾಯಕ ಕೃಷ್ಣ ಗೋಕಾಕರ ವ್ಯಕ್ತಿತ್ವ, ಬದುಕು ಬರಹ ಕುರಿತು ಆತ್ಮೀಯವಾದ ಒಂದು ಪಕ್ಷಿನೋಟ ಇದರಲ್ಲಿದೆ. ಗೋಕಾಕರ ಸಮಗ್ರ ಕೃತಿಗಳನ್ನು ಕುರಿತ ಕಿರು ಪರಿಚಯ ಇಲ್ಲಿ ಸಿಗುತ್ತದೆ.

**ಅಭಿಪ್ರಾಯ:**

ವಿ. ಕೃ. ಗೋಕಾಕ್ ಒಂದು ಸಂಕ್ಷಿಪ್ತ ಜೀವನ ಚರಿತ್ರೆಯಲ್ಲ. ಹಾಗೆ ಜೀವನ ಚರಿತ್ರೆಯಾಗಿದ್ದರೆ ಗೋಕಾಕರನ್ನು ಹತ್ತಿರದಿಂದ ಬಲ್ಲ ಹಂಪನಾ ತಮ್ಮ ಚುರುಕು ಶೈಲಿಯಿಂದ ಒಂದು ಅತ್ಯುತ್ತಮ ಚರಿತ್ರೆಯನ್ನು ಬರೆಯಬಹುದಿತ್ತು. ಈ ಹೊತ್ತಿಗೆಯಲ್ಲಿರುವುದು ವಿನಾಯಕ ಎಂಬ ಕಾವ್ಯನಾಮದಿಂದ ಖ್ಯಾತರಾದ ಗೋಕಾಕರ ಕವಿಕಾವ್ಯ ಚಿಂತನೆ, ನಮ್ಮ ಒಬ್ಬ ಮಹತ್ವದ ಕವಿಯ ಕೃತಿಗಳನ್ನು ಕುರಿತು ಸಂಕ್ಷಿಪ್ತ ಪರಿಚಯ. ** ಭಾರತ ಸಿಂಧು ರಶ್ಮಿಯ ಬಗ್ಗೆ ಹಂಪನಾ ಅವರಿಗೆ ಗೌರವಿದೆ, ಪ್ರೀತಿಯಿಲ್ಲ. ಆ ಪ್ರೀತಿ ಪ್ರಾಶಸ್ತ್ಯವನ್ನು ಅವರು ವಿನಾಯಕರ ಸಮುದ್ರ ಗೀತೆಗಳು ಕಾವ್ಯಕ್ಕೆ ಕೊಡುತ್ತಾರೆ.* ಈ ಚಿಕ್ಕ ಹೊತ್ತಿಗೆ ನಮ್ಮ ಒಬ್ಬ ಮಹತ್ವದ ಕವಿಯ ಸಾಹಿತ್ಯ ಕೃಷಿಯ ಸಮರ್ಥ ಪರಿಚಯ ಮಾಡಿಕೊಡುತ್ತದೆ.

**--ಪ್ರೊ. ಎಚ್. ವಿ. ನಾಗೇಶ್**

# ಗೋವಿಂದ ಪೈ

**ಬದುಕು- ಬರಹ ಪರಿಚಯ**

| | | |
|---|---|---|
| ಕ್ರೌನ್1/8 ಆಕಾರ, ಪುಟಗಳು | : | 106+iv |
| ಪ್ರಥಮ ಮುದ್ರಣ | : | 1976 ಜನವರಿ |
| ದ್ವಿತೀಯ ಮುದ್ರಣ | : | 1981 ಡಿಸೆಂಬರ್ |
| ಸಹಲೇಖಕರು | : | ಕಾವ್ಯ ಜೀವಿ (ಡಾ. ಎಸ್. ಪಿ. ಪದ್ಮಪ್ರಸಾದ್) |
| ಪ್ರಕಾಶಕರು | : | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-18 |

ಕವಿಯಾಗಿ, ಸಂಶೋಧಕರಾಗಿ, ಬಹುಭಾಷಾ ತಜ್ಞರಾಗಿ, ನಾಟಕಕಾರರಾಗಿ ದೊಡ್ಡ ಹೆಸರಾದ ಮಂಜೇಶ್ವರ ಗೋವಿಂದ ಪೈಯವರ ಬಾಳನ್ನೂ, ಬರವಣಿಗೆಯನ್ನೂ ಪರಿಚಯಿಸುವುದರೊಂದಿಗೆ ಅಲ್ಲಲ್ಲಿ ತಕ್ಕ ವಸ್ತುನಿಷ್ಠ ವಿಮರ್ಶೆಯೂ ಇರುವ ಪುಸ್ತಕವಿದು. ಇವರು ಗೋವಿಂದ ಪೈ, ಕಾವ್ಯಮಯ ಬದುಕು, ಸಾರಸ್ವತ ತಪಸ್ವಿ, ಧೀಮಂತ ಸಂಶೋಧಕ, ಕಾವ್ಯರ್ಷಿಯ ಕೊನೆಯ ದಿನಗಳು ಎಂಬ ಅಯ್ದು ಅಧ್ಯಾಯಗಳಿವೆ.

**ಅಭಿಪ್ರಾಯ:**

ಪೈಯವರು ಹುಟ್ಟಿ ಬೆಳೆದ ವಿಶೇಷ ಪರಿಸರ, ಹಳ್ಳಿಯ ಸಹಜ ಸೌಂದರ್ಯ ಹಾಗೂ ನಿಸರ್ಗದ ವರ್ಣನೆ.... ತನ್ನದೇ ಆದ ಹೊಸ ಮಾರ್ಗ ಹಿಡಿದು ಬಂಡಾಯವೆಬ್ಬಿಸಿದರೆಂಬುದನ್ನು ಸೊಗಸಾಗಿ ಒಡಮೂಡಿಸಿದ್ದಾರೆ, ಹಿರಿಯ ಕಿರಿಯ ಎಂಬ ಭೇದ- ಭಾವನೆಗಳು ಇರಲಿಲ್ಲವೆಂಬುದನ್ನು ಉದಾಹರಣೆ ಸಹಿತ ಹೇಳಿದ್ದಾರೆ- ತಮ್ಮದೇ ಆದ ವೈವಿಧ್ಯಗಳನ್ನು ಕನ್ನಡ ಸಾಹಿತ್ಯದಲ್ಲಿ ತಂದರೆಂದು ಲೇಖಕರು ಹಂತಹಂತವಾಗಿ ವಿಶ್ಲೇಷಿಸಿದ್ದಾರೆ.

**--ಸಿ. ಹನುಮಂತರಾಯಪ್ಪ**

# ಗೊಮ್ಮಟ - ಬಾಹುಬಲಿ

**ಸಂಶೋಧನ ಕೃತಿ**

| | | |
|---|---|---|
| ಡೆಮ್ಮೆ 1/8 ಆಕಾರ, ಪುಟಗಳು | : | 48 |
| ಪ್ರಥಮ ಮುದ್ರಣ | : | 1981 |
| ಪ್ರಕಾಶಕರು | : | ಬಾಪ್ಕೊ ಪ್ರಕಾಶನ, ಬೆಂಗಳೂರು-81. |

ಗೊಮ್ಮಟ, ಗೋಮಟೇಶ್ವರ ಎಂಬ ಹೆಸರಿನಿಂದ ಜನಪ್ರಿಯನಾಗಿರುವ ಪುರಾಣ ಪುರುಷನ ಹೆಸರು ಬಾಹುಬಲಿ (ಭುಜಬಲಿ). ಈತನು ಆದಿತೀರ್ಥಂಕರರಾದ ಪುರುದೇವ (ಋಷಭನಾಥ)ನ ಮಗ; ಭರತನು ಹಿರಿಯ- ಅಣ್ಣ, ಬಾಹುಬಲಿ ಕಿರಿಯ - ತಮ್ಮ. ಈ ಪುಸ್ತಕದಲ್ಲಿನ ಏಳು ಅಧ್ಯಾಯಗಳಲ್ಲಿ ಬಾಹುಬಲಿಯ ಪೌರಾಣಿಕ ಹಿನ್ನೆಲೆ, ಸಾಂಸಾರಿಕ ಚಿತ್ರ, ಸಾಹಿತ್ಯ ಮತ್ತು ಶಿಲ್ಪದಲ್ಲಿ ಒಡಮೂಡಿದ ಹಿನ್ನೆಲೆಯೂ ವಿಸ್ತಾರವಾಗಿ ಬಂದಿದೆ. ಕರ್ನಾಟಕದಲ್ಲಿ ಬಾಹುಬಲಿ (ಗೊಮ್ಮಟ) ಶಿಲ್ಪ ಎಲ್ಲೆಲ್ಲಿ ಕಾಣಿಸಿಕೊಂಡಿದೆ ಎಂಬುದರ ಐತಿಹಾಸಿಕ ಸಮೀಕ್ಷೆಯೂ ಸಿಗುತ್ತದೆ. ಹೊಸಗನ್ನಡ ಕವಿಗಳು ಈ ಗೊಮ್ಮಟ ಶಿಲ್ಪದ ಭವ್ಯತೆಗೆ ಕಾವ್ಯ ರೂಪದಲ್ಲಿ ಹೇಗೆ ಸ್ಪಂದಿಸಿದ್ದಾರೆಂಬುದರ ವಿವರಣೆಯೂ ಸಿಗುತ್ತದೆ.

**ಅಭಿಪ್ರಾಯ:**

ಗೊಮ್ಮಟ-ಬಾಹುಬಲಿಯ ಚಿತ್ರವು ಓದುಗರ ಮುಂದೆ ದಟ್ಟವಾಗಿ ನಿಲ್ಲುವಂತೆ ಮಾಡುವ ಪ್ರಯತ್ನ ಹಂಪನಾ ಅವರದು. ಈ ಕೃತಿ ಅವರ ಕಡೆಯಿಂದ ರೂಪುಗೊಂಡ ಒಂದು ಸಂಕೃತಿ, ಜಿನ ಸಂಸ್ಕೃತಿಯ ಸುಪುಷ್ಪಕೃತಿ.

--ಪ್ರೊ. ಎಂ. ಜಿ. ನಾಗರಾಜ್

# ಚಂದ್ರಕೊಡೆ

**ಸಂಶೋಧನೆ**

ಡೆಮ್ಮಿ 1/8 ಆಕಾರ, ಪುಟಗಳು : xvi+676
ಪ್ರಥಮ ಮುದ್ರಣ : 1997
ಪ್ರಕಾಶಕರು : ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಅಭಿಪ್ರಾಯ :**

**1.** ನೀವು ನೀಡಿದ ಕೃತಿಗಳಲ್ಲಿ 'ಚಂದ್ರ ಕೊಡೆ'ಯ ಲೇಖನ ಓದಿ ಮುಗಿಸಿದ್ದೇನೆ. ಪುಟಪುಟಗಳಲ್ಲಿ ನಿಮ್ಮ ವಿದ್ವತ್ತು ಶ್ರಮ ಮಡುಗಟ್ಟಿ ನಿಂತಿವೆ.

**ಡಾ. ಎಂ. ಎಂ. ಕಲಬುರ್ಗಿ**
೧೩.೧೧.೯೮ರ ಪತ್ರದ ಒಕ್ಕಣೆ

**2. ಸಂಶೋಧನಾ ರಂಗಕ್ಕೆ ಹೊಸ ಚೈತನ್ಯ ; ಜೈನಧರ್ಮದ ಬಹುಮುಖ ಪರಿಚಯ**

ಪ್ರಾಚೀನ ಕನ್ನಡ ಸಾಹಿತ್ಯ, ವಿಶೇಷವಾಗಿ ಜೈನ ಸಾಹಿತ್ಯ ಮತ್ತು ಸಂಸ್ಕೃತಿಯನ್ನು ಅಧ್ಯಯನ ಮಾಡಿರುವ, ಮಾಡುತ್ತಿರುವ ಸಂಶೋಧಕರಲ್ಲಿ ಡಾ. ಹಂಪ ನಾಗರಾಜಯ್ಯನವರು ಪ್ರಮುಖರು. ಈ ಸಂಕಲನದ ಮೂಲಕ ಡಾ. ಹಂಪನಾ ಅವರ ಶಾಸನಗಳ ಬಗೆಗಿನ ಆಸಕ್ತಿ, ಅಧ್ಯಯನ ಸಾಧನೆ, ಗಳಿಸಿರುವ ಸಿದ್ಧಿಗಳು ವ್ಯಕ್ತವಾಗುತ್ತವೆ. ಈ ಸಂಕಲನದ ಬಹುಪಾಲು ಸಂಪ್ರಬಂಧಗಳ ಅಧ್ಯಯನ ಕೇಂದ್ರ ಬಿಂದು ಜೈನ ಸಾಹಿತ್ಯ, ಧರ್ಮ ಮತ್ತು ಸಂಸ್ಕೃತಿ ಶ್ರೀಯುತರು ಆತ್ಮ ನಿವೇದನೆಯಲ್ಲಿ ಹೇಳಿಕೊಂಡಿರುವಂತೆ "ಈ ಸಂಕಲನದಲ್ಲಿ ಸೇರಿರುವ ಬಹುಮಟ್ಟಿನ ಲೇಖನಗಳು ಹೊಚ್ಚ ಹೊಸದಾಗಿ ಬರೆದವುಗಳು. ಈ ಪುಸ್ತಕದಲ್ಲಿ ಶೇ. 75ಕ್ಕೂ ಹೆಚ್ಚು ಭಾಗ ಅಪ್ರಕಟಿತ ಲೇಖನಗಳು". ಇತ್ತೀಚೆಗೆ ಹಲವಾರು ಸಂಶೋಧಕರು, ವಿಮರ್ಶಕರು ಹೊರತರುತ್ತಿರುವ ಲೇಖನಗಳ ಸಂಕಲನಗಳನ್ನು ನೋಡಿದರೆ, ಅವು ಬಹುಪಾಲು ಪ್ರಕಟವಾಗಿರುವಂಥವೇ. ಬಹುಪಾಲು ಏನು ಬಂತು! ಎಲ್ಲವೂ ಪ್ರಕಟವಾದುವೇ ಆಗಿರುತ್ತವೆ. ಇನ್ನೂ ವಿಚಿತ್ರವೆಂದರೆ ಅವರದೇ ಸಂಕಲನಗಳಲ್ಲಿ ಪ್ರಕಟವಾಗಿರುವಂಥವೂ ಮತ್ತೆ ಬೇರೊಂದು ಸಂಕಲನದಲ್ಲಿ ಕಾಣಸಿಗುತ್ತವೆ. ಆ ರೀತಿ ಮುದ್ರಿಸುವುದಕ್ಕೆ ಸಮರ್ಥನೆಯಾಗಿ ಕೊಡುವ ಕಾರಣಗಳೇನೇ ಇರಲಿ ಹೊಸದನ್ನು ಬಯಸುವವನಿಗೆ ನಿರಾಸೆಯಾಗುತ್ತದೆ. ಈ ದೃಷ್ಟಿಯಿಂದ ಈ ಸಂಕಲನ ಆಸಕ್ತನಿಗೆ ಹತ್ತು ಹಲವು ಹೊಸ ಅಂಶಗಳನ್ನು ನೀಡುತ್ತದೆ. ಅಂದ ಮಾತ್ರಕ್ಕೆ ಇಲ್ಲಿನ ಎಲ್ಲಾ ಹೊಸ ಲೇಖನಗಳೂ ಶ್ರೇಷ್ಠ ಸರ್ವ ಸಮ್ಮತವಾದುದೆಂದಾಗಲೀ ಅರ್ಥವಲ್ಲ. ಓದುಗನಿಗೆ ಹೊಸದನ್ನು ನೀಡಬೇಕು ಎಂಬ ಅವರ ಕಳಕಳಿ ಮೆಚ್ಚತಕ್ಕದ್ದು.

ಇದುವರೆಗೆ ಸಂಶೋಧಕರು ಅಷ್ಟಾಗಿ ಗುರುತಿಸದ ಹಲವಾರು ವಂಶಗಳ, ಗೋತ್ರಗಳ, ಕುಲಗಳ, ಮನೆತನಗಳ ವಿವರಗಳನ್ನೂ ಅವರು ನೀಡಿದ ಸಾಂಸ್ಕೃತಿಕ ಕಾಣಿಕೆಯನ್ನು ಗುರುತಿಸಿ ವಿವರಿಸುವ ಪ್ರಯತ್ನವನ್ನು ಮೊಟ್ಟ ಮೊದಲ ಬಾರಿಗೆ ಮಾಡಿದ್ದಾರೆ. ಆರಕ್ಕಿಂತಲೂ ಹೆಚ್ಚಿನ ಸಂಪ್ರಬಂಧಗಳು ಈ ಬಗ್ಗೆ ಚರ್ಚಿಸುತ್ತವೆ. ಈ ಎಲ್ಲ ಅಧ್ಯಯನದಲ್ಲಿನ ಒಂದು ದೊಡ್ಡ ಗೊಂದಲವೆಂದರೆ, 'ಕುಲ', 'ವಂಶ', 'ಮನೆತನ' ಎಂಬ ಪದಗಳನ್ನು ಕೆಲವು ಕಡೆ ಒಂದೇ ಅರ್ಥದಲ್ಲಿ ಕೆಲವು ಕಡೆ ವಿಭಿನ್ನಾರ್ಥದಲ್ಲಿ ಬಳಸಿರುವುದು (ಈ ಗೊಂದಲ ಮೂಲ ಶಾಸನಗಳಲ್ಲಿಯೂ ಇವೆ). ಆ ಸಿಕ್ಕು ಬಿಡಿಸುವುದರತ್ತ ಗಮನ ಹರಿಸಿದ್ದರೆ ಮಾನವಶಾಸ್ತ್ರಜ್ಞರ, ಸಮಾಜ ಶಾಸ್ತ್ರಜ್ಞರ ಗಮನವನ್ನೂ ಸೆಳೆಯಬಹುದಿತ್ತು. ಒಂದು ಕುಲದಲ್ಲಿ ಹಲವಾರು ಗೋತ್ರಗಳವರು ಇರಬಹುದು. ಆದರೆ ಒಂದು ವಂಶದಲ್ಲಿ ಹಲವಾರು ಗೋತ್ರಗಳಿರುವುದು ಅಸಾಧ್ಯ. ಆದರೆ ಒಂದೇ ಗೋತ್ರದಲ್ಲಿ ಹಲವಾರು ಮನೆತನ, ವಂಶಗಳು ಇರುವ ಸಾಧ್ಯತೆಯಿದೆ. 'ವಾಜಿ' ಎಂಬುದು ಕುಲವೆ ವಂಶವೇ ಸ್ಪಷ್ಟವಾಗುವುದಿಲ್ಲ. ಅದು ವಂಶವಾದರೆ ಕಾಶ್ಯಪ, ಕೌಂಡಿನ್ಯ, ಭಾರದ್ವಾಜ, ಮಾಂಧಾತ, ಶ್ರೀವತ್ಸ, ಸಂಖ್ಯಾಯನ ಮತ್ತು ಹಾರೀತ ಎಂಬ ಏಳು ಗೋತ್ರಗಳಿರುವುದು ಸಾಧ್ಯವಿಲ್ಲ. ಆದರೆ ಅದು 'ಕುಲ' ಅಥವಾ 'ಜಾತಿ'ಯಾದರೆ ಸಾಧ್ಯ. ಮೇಲೆ ಹೇಳಿದ ಗೋತ್ರಗಳ ನಡುವೆ ವಿವಾಹ ಸಂಬಂಧಗಳುಂಟು. ಮೇಲಾಗಿ ಈ ಏಳೂ ಗೋತ್ರಗಳು ಯಾವುದೇ ಪ್ರವರದಲ್ಲಿ ಐಕ್ಯವಾಗುವುದಿಲ್ಲ. ಎರಡು, ಮೂರು ಗೋತ್ರಗಳು ಪ್ರವರೈಕ್ಯವಾಗಿರುವ ನಿದರ್ಶನವುಂಟು. ಅಂಥವರ ನಡುವೆ ವಿವಾಹ ಸಂಬಂಧ ನಿಷಿದ್ಧ.

ಪಂಪನ ಪೂರ್ವಜರ ಜಾತಿಯನ್ನು ಕುರಿತು ಬರೆಯುತ್ತಾ "ಪಂಪನ ವತ್ಸ ಗೋತ್ರವೂ ಇದೇ ವಾಜಿ ವಂಶದ ಕುಡಿ ಇದ್ದಿರಬಹುದು. ಪಂಪನ (ತಾಯಿ ಅಬ್ಬಣಬ್ಬೆಯ ತಂದೆ) ತಾತ ಜೋಯಿಸ ಸಿಂಘನೂ ವಾಜಿ ವಂಶದವನೇ ಇರಬೇಕು" ಎಂಬುದಾಗಿ ಅಭಿಪ್ರಾಯ ಪಡುತ್ತಾರೆ. ವಂಶವೆಂದರೆ ಒಂದೇ ಮೂಲ ಪುರುಷನಿಂದ ಬಂದದ್ದು ಎಂಬುದು ಪ್ರಸಿದ್ಧಾರ್ಥ. ಆದ್ದರಿಂದ ಆ ವಂಶದವರೆಲ್ಲರೂ ಸೋದರ ಸೋದರಿಯರು. ಅವರ ನಡುವೆ ವಿವಾಹ ಸಂಬಂಧಗಳು ನಿಷಿದ್ಧ. ಹೀಗಿರುವಾಗ ಪಂಪನ ತಂದೆ, ಪಂಪನ ತಾಯಿಯ ತಂದೆ ಒಂದೇ ವಂಶದವರು ಹೇಗಾಗುತ್ತಾರೆ? ಇವರೆಲ್ಲರೂ ಜೈನರಾಗುವುದಕ್ಕಿಂತ ಮುನ್ನ ಬ್ರಾಹ್ಮಣರು. ಧರ್ಮವೊಂದನ್ನು ಬಿಟ್ಟು ಉಳಿದೆಲ್ಲಾ ದೇಶಾಚಾರವನ್ನು ಉಳಿಸಿಕೊಂಡಿದ್ದವರೆ; ಹಾಗಲ್ಲದಿದ್ದರೆ ಹಿಂದಿನ ಬ್ರಾಹ್ಮಣ್ಯದ ಎಲ್ಲಾ ದೇಶಾಚಾರಗಳನ್ನೂ ಮೀರಿದ್ದರೆ ಎಂಬ ಪ್ರಶ್ನೆ ಎದುರಾಗುತ್ತದೆ.

ಕರ್ನಾಟಕದಲ್ಲಿನ ದಿಗಂಬರ ಜೈನ ಧರ್ಮದ ಬಗ್ಗೆ ನಡೆದಿರುವಷ್ಟು ಸಂಶೋಧನೆ ಯಾಪನೀಯ ಸಂಘದ ಬಗ್ಗೆ ನಡೆದಿಲ್ಲ. ಆ ದೃಷ್ಟಿಯಿಂದ ಈ ಸಂಕಲನದಲ್ಲಿರುವ ಹಲವಾರು ಲೇಖನಗಳು ಯಾಪನೀಯ ಸಂಘ, ಕೇಂದ್ರಗಳ ಬಗ್ಗೆ ಇವೆ. ಹತ್ತು ಹಲವಾರು ಕಡೆಗಳಿಂದ ಮಾಹಿತಿಯನ್ನು ಸಂಗ್ರಹಿಸಿ ವಿಶ್ಲೇಷಿಸಿದ್ದಾರೆ. ಹಲವಾರು ಸಂಪ್ರಬಂಧಗಳಲ್ಲಿ ಚದುರಿ ಹೋಗಿರುವ ಮಾಹಿತಿಯನ್ನು ಒಟ್ಟು ಕೂಡಿಸಿ ಕರ್ನಾಟಕದ ಯಾಪನೀಯ ಪಂಥದ ಚಿತ್ರ ನೀಡಿದ್ದರೆ ಹೆಚ್ಚು ಉಪಯುಕ್ತವಾಗುತ್ತಿತ್ತು; ಅಷ್ಟೇ ಅಲ್ಲ ಹಲವಾರು ಪುನರುಕ್ತಿಗಳು ತಪ್ಪುತ್ತಿದ್ದುವು.

'ಶಾಸನಗಳಲ್ಲಿ ಜೈನ ತೀರ್ಥಗಳು'- ಎಂಬ ಸಂಪ್ರಬಂಧ ತುಂಬಾ ಮೌಲಿಕವಾದುದು. ಸುಮಾರು ಮೂವತ್ತ ಮೂರು ತೀರ್ಥಕ್ಷೇತ್ರಗಳನ್ನು ಗುರುತಿಸಿದ್ದಾರೆ. 'ತೀರ್ಥಕ್ಷೇತ್ರ' 'ತೀರ್ಥಯಾತ್ರೆ' ಎಂಬಲ್ಲಿನ ಪದಗಳಲ್ಲಿ ತೀರ್ಥ ಎಂಬುದು ನೀರಿನ ಸೆಲೆಯನ್ನೂ ತಿಳಿಸುತ್ತದೆ ಎಂಬುದನ್ನು ಗುರುತಿಸಬೇಕು. ಮೊದಲಿಗೆ ಧಾರ್ಮಿಕ ಕ್ಷೇತ್ರಗಳು ಸಹಜ ನೀರಿನ ಸೆಲೆಯಿದ್ದ ಕಡೆಗಳಲ್ಲಿಯೇ ಇರುತ್ತಿದ್ದಿರಬೇಕು. ನಂತರದ ಕಾಲದಲ್ಲಿ ನೀರಿನ ಸೆಲೆಯಿಲ್ಲದ ಜಾಗಗಳಲ್ಲಿ ಕೃತಕವಾದ ನೀರಿನ ಸೆಲೆಗಳ ಕೊಳ, ಪುಷ್ಕರಿಣಿಗಳನ್ನು ನಿರ್ಮಿಸುವ ಸಂಪ್ರದಾಯ ಬೆಳೆದು ಬಂತು. ಈ ಸಂಪ್ರದಾಯವನ್ನು ಕರ್ನಾಟಕದ ಎಲ್ಲಾ ಧರ್ಮಗಳವರೂ ಅನುಸರಿಸಿದರು. ಸಾಮಾನ್ಯವಾಗಿ ಪುಷ್ಕರಣಿ ಇಲ್ಲದ ಪುಣ್ಯಕ್ಷೇತ್ರವೇ ಇಲ್ಲವೆಂದು ಹೇಳಬಹುದು. ಡಾ. ಹಂಪನಾ ಅವರಲ್ಲಿ ಅಪಾರವಾದ ಮಾಹಿತಿಯನ್ನು ಸಂಗ್ರಹಿಸುವ ಶ್ರದ್ಧೆ, ಕಠಿಣಶ್ರಮ, ನಿರಂತರ ಅಧ್ಯಯನ ಮತ್ತು ಸಂಯಮವನ್ನು ಗುರುತಿಸಬಹುದು. ಆದರೆ ಮಾಹಿತಿಯನ್ನು ವಿಶ್ಲೇಷಿಸುವಾಗ ಅಧ್ಯಯನದ ಅನುಮಾನಗಳನ್ನು ದಾಖಲಿಸುವಾಗ ಸಂಯಮ ತೋರದೆ ಆತುರ ಪಡುವ, ಸಮಸ್ಯೆಗಳ ವಿವಿಧ ಮುಖಗಳನ್ನೆ ನೋಡುವ ಸಂಯಮ ಕಳೆದುಕೊಂಡು ಬಿಡುತ್ತಾರೆ. ಒಟ್ಟಿನ ಮೇಲೆ ಈ ಪುಟ್ಟ ಲೇಖನ ಹತ್ತು ಹಲವಾರು ಅಂಶಗಳನ್ನು ಕುರಿತು ಯೋಚಿಸುವಂತೆ ಮಾಡುತ್ತದೆ. ನಿಜಕ್ಕೂ "ಅಂಥದೊಂದು ಅಧ್ಯಯನಕ್ಕೆ ಭೂಮಿಕೆಯಾಗುವ ಸಂಕ್ಷಿಪ್ತರೂಪದ ಪ್ರಯತ್ನ" ಎಂಬುದರಲ್ಲಿ ಅನುಮಾನವಿಲ್ಲ.

ಈ ಸಂಕಲನದಲ್ಲಿನ 'ಕನಕ ದಾಸರ ಕೀರ್ತನೆಗಳ ಕಳವು'- ಎಂಬ ಲೇಖನ ಉಳಿದೆಲ್ಲ ಲೇಖನಗಳಿಂದ ಭಿನ್ನವಾದುದು. ಪ್ರತ್ಯೇಕವಾದುದು. ಹಂಪನಾ ಅವರ ಸಾತ್ವಿಕ ರೋಷ ಆವೇಶಗಳನ್ನು ಇದರಲ್ಲಿ ಗಮನಿಸಬಹುದು. ಈ ಲೇಖನದಲ್ಲಿನ ಸಾತ್ವಿಕ ರೋಷ ಆವೇಶಗಳೆಲ್ಲಾ ಸಂಪಾದಕರ ಬಗ್ಗೆಯೇ ಹೊರತು ಪುರಂದರರ ಬಗ್ಗೆ ಅಲ್ಲ. ಒಬ್ಬರ ಕೀರ್ತನೆಯನ್ನು ಮತ್ತೊಬ್ಬರ ಹೆಸರಿನಲ್ಲಿ ಬಳಕೆಗೆ ತರುವವರ ಬಗ್ಗೆ ಸಿಟ್ಟಿದೆ. ಕೇವಲ ಸಿಟ್ಟಲ್ಲ, ಅದರ ಹಿಂದೆ ಆಳವಾದ ಅಧ್ಯಯನವೂ ಇದೆ. ಸಂಪ್ರಬಂಧಕ್ಕೆ ಶೀರ್ಷಿಕೆಯನ್ನು ನೀಡುವಾಗ ಆ ಸಿಟ್ಟು ಮೂಲದಿಂದ ರೂಪುಗೊಂಡ 'ಕಳವು' ಎಂಬ ಪದ ಪ್ರಯೋಗ ಅದರ ಇಡೀ ಅಧ್ಯಯನವನ್ನು ಮರೆಮಾಡುವ ಅಪಾಯವಿದೆ. ಸಂಶೋಧಕನ ಧೋರಣೆ ಜನರನ್ನು ಎಚ್ಚರಗೊಳಿಸುವ, ಸುಶಿಕ್ಷಿತರನ್ನಾಗಿ ಮಾಡುವತ್ತ ಒಲಿದಿರಬೇಕು. ಪುರಂದರರು ರಚಿಸಿದರೆಂದು ಹೇಳಲಾದ ಕೀರ್ತನೆಗಳೆಲ್ಲಾ ಅವರದಲ್ಲ. ಅವರ ಮಗ, ಹೆಂಡತಿ ಮತ್ತು ಅವರ ಮನೆಯ ಆಳು ರಚಿಸಿದ್ದಾರೆ. ಅದರಿಂದಲೇ ಅಂಕಿತದಲ್ಲಿ ಒಡೆಯ ಪ್ರರಂದರ; ತಂದೆ ಪುರಂದರ; ವರದ ಪುರಂದರ ಎಂಬ ಬೇರೆ ಬೇರೆ ಅಂಕಿತಗಳು ಬಂದಿರುವುದು. ಅವರ ಅಂಕಿತ ಪುರಂದರ ವಿಠ್ಠಲವಷ್ಟೇ- ಎಂಬ ವಾದವು ಲೋಕದಲ್ಲಿ ಪ್ರಚಾರದಲ್ಲಿದೆ. ಇಂಥ ಅಂಶಗಳನ್ನೂ ಚರ್ಚೆಗೆ ತಂದಿದ್ದರೆ ಅವರ ವಾದಕ್ಕೆ ಮತ್ತಷ್ಟು ಪುಷ್ಟಿ ದೊರೆಯುತ್ತಿತ್ತು.

ಇದೇ ರೀತಿಯ ಸಾತ್ವಿಕ ರೋಷ 'ಮಹಾ ಪುರಾಣದ ಮಹತ್ವ' ಎಂಬ ಸಂಪ್ರಬಂಧದಲ್ಲಿಯೂ ಕಾಣಿಸಿಕೊಂಡಿದೆ. "ಮಣಿಹವೆಂಬೊಂದು ಗ್ರಂಥದಲ್ಲಿ" "ಕನ್ನಡಕ್ಕೆ ಸೇವೆ ಸಲ್ಲಿಸಿದ ಗ್ರಂಥ ಸಂಪಾದನಕಾರರನ್ನು ಪರಿಚಯಿಸುವ ವಿಭಾಗದಲ್ಲಿ ಈ ಮಣಿಹವನ್ನು

ಅಣಿಗೊಳಿಸಿದ ಜಾಣರು ಬಿ. ಪದ್ಮರಾಜ ಪಂಡಿತರನ್ನೂ, ತೋವಿನಕೆರೆ ರಾಯಂಣ ವಾಗ್ಮಿಯನ್ನೂ, ಎರ್ತೂರು ಶಾಂತಿರಾಜ ಶಾಸ್ತ್ರಿಗಳನ್ನೂ, ಎಸ್. ಬೊಮ್ಮರಸ ಪಂಡಿತರನ್ನೂ- ಕೇವಲ ಜೈನರೆಂಬ ಜಾತಿ ಕಾರಣಕ್ಕಾಗಿ ಕೈಬಿಟ್ಟು ಅನ್ಯಾಯವೆಸಗಿರುತ್ತಾರೆಂಬ ಗುಮಾನಿಗೆ ಬಲವಾದ ಕಾರಣಗಳಿವೆ. ಇಲ್ಲವಾದರೆ ಇವರಿಗಿಂತ ಕಡಿಮೆ ಕೆಲಸ ಮಾಡಿದ ಒಬ್ಬಿಬ್ಬರನ್ನು ಪರಿಚಯಿಸಿ ಇಷ್ಟು ಅಗಾಧವಾದ ಕೆಲಸ ಮಾಡಿದ ಗ್ರಂಥ ಸಂಪಾದನ ಪ್ರಾಜ್ಞರನ್ನು ಉಪೇಕ್ಷಿಸಿದ್ದಕ್ಕೆ ಕಾರಣವೇ ಇಲ್ಲ'' (ಪು. 309) ಎಂಬ ತೀರ್ಮಾನಕ್ಕೆ ಬಂದು ''ಈ ಬಗೆಯ ನಿರ್ಲಕ್ಷ್ಯವನ್ನು ಅಹಿಂಸಾವಾದಿಗಳಾದ ಜೈನರು ಹೇಗೊ ಸಹಿಸಿಕೊಳ್ಳುತ್ತಾರೆಂಬ ತಾತ್ಸಾರ ಬುದ್ಧಿ ಒಳ್ಳೆಯದಲ್ಲ. ಜಾಣರಾದ ಸಣ್ಣ ಜನರು ಹೆಸರಿಸದೆ ಹೋದ ಮಾತ್ರಕ್ಕೆ ಶಾಸ್ತ್ರಿಗಳ ಸೇವೆಯ ಮಹತ್ವವೇನೂ ತಗ್ಗುವುದಿಲ್ಲ'' ಎಂದು ತುಂಬಾ ಖಾರವಾಗಿ ಲೇಖನವನ್ನು ಮುಗಿಸುತ್ತಾರೆ. ತಪ್ಪು ಆಗಿರುವುದು ನಿಜ. ಆ ಬಗ್ಗೆ ಎರಡು ಮಾತಿಲ್ಲ. ಆಗಿರುವ ಪ್ರಮಾದಕ್ಕೆ ಇಲ್ಲದ ಬಣ್ಣ ಕಟ್ಟುವುದು ಆರೋಗ್ಯಪೂರ್ಣವಾದುದೆ?

ಈ ಸಂಕಲನದಲ್ಲಿರುವ ಕೆಲವಾರು ಸಂಪ್ರಬಂಧಗಳು ಕನ್ನಡ ತುಲನಾತ್ಮಕ ಅಧ್ಯಯನ ಕ್ಷೇತ್ರವನ್ನು ವಿಸ್ತರಿಸುವಲ್ಲಿ ಯಶಸ್ವಿಯಾಗಿವೆ. ಪಂಪ-ಜಿನಸೇನ, ಚಾರುದತ್ತನ ಕಥೆ: ಮೂಲ ಚೂಲ ಇವು ಮೌಲಿಕವಾದುವು. ''ಕನ್ನಡದಲ್ಲಿರುವ ವಿಪುಲ ಸಾಮಗ್ರಿ, ಹಿಂದಿಯಲ್ಲಿ, ಇಂಗ್ಲಿಷ್‌ನಲ್ಲಿ ಬರೆಯುವ ವಿದ್ವಾಂಸರಿಗೆ ಸುಲಭವಾಗಿ ಸಿಗುತ್ತಿಲ್ಲ. ಕನ್ನಡ ಸಾಹಿತ್ಯದ ಸರಿಯಾದ ಪರಿಚಯ ಕನ್ನಡೇತರ ಭಾಷೆಗಳಿಗೆ ಆಗಿಲ್ಲದಿರುವ ಅಲ್ಲಿನ ಸಂಶೋಧನೆ ಇರ್ಮ್ಮೊಗನಾದ ನ್ಯೂನತೆಗಳಿಂದ ಕೂಡಿದೆ. ಈ ಕೊರತೆಯನ್ನು ನಿವಾರಿಸುವಲ್ಲಿ ಕನ್ನಡೇತರ ಭಾಷೆ ಬಲ್ಲ ಕನ್ನಡ ವಿದ್ವಾಂಸರು ಪ್ರಯತ್ನಶೀಲರಾಗಬೇಕಾಗಿದೆ''- ಎಂಬ ಹಂಪನಾ ಅವರ ಮನವಿಯತ್ತ ನಮ್ಮ ವಿದ್ವಾಂಸರು ಗಮನ ಹರಿಸುವ ಅಗತ್ಯವಿದೆ.

ಈ ಸಂಕಲನದಲ್ಲಿ ಕೊಡೆಗಳನ್ನು ಕುರಿತೇ ಮೂರು ಸಂಪ್ರಬಂಧಗಳಿವೆ. ಈ ಸಂಕಲನಕ್ಕೆ ಶೀರ್ಷಿಕೆಯಾಗಿರುವ 'ಚಂದ್ರಕೊಡೆ'ಯನ್ನು ವಿವರಿಸುತ್ತಾ ''ಚಂದ್ರಕೊಡೆಯೆಂದರೆ ಕೇವಲ ನವಿಲುಗರಿಗಳಿಂದ ಮಾಡಿದ ಕೊಡೆಯಲ್ಲ. ಅದು ನವಿಲುಗರಿಯ ಕಣ್ಣುಗಳಿಂದ ಮಾಡಿದ ಕೊಡೆ''- ಎಂಬುದಾಗಿ ಅದರ ಅರ್ಥವನ್ನು ಗ್ರಹಿಸಬೇಕೆಂದು ಹೇಳುತ್ತಾರೆ. ಪ್ರಾಚೀನ ಕರ್ನಾಟಕದಲ್ಲಿ 'ಕೊಡೆ'ಯನ್ನು ಪಡೆಯುವುದು ಅಧಿಕಾರದ ಸಂಕೇತ; ಬಿರುದು, ಅದು ಒಂದು ರೀತಿಯ 'ಭೋಗ' ಕೂಡ. ತೆಲುಗು ಜಾನಪದ ಕಥೆಗಳಲ್ಲಿ ವೀರನ ಬಳಿ ಚಂದ್ರಕೊಡೆ, ಸೂರ್ಯಕೊಡೆಗಳಿದ್ದುವಾಗಿ ನಿರೂಪಣೆ ದೊರೆಯುತ್ತದೆ. ಸೂರ್ಯ ಕೊಡೆ ಎಂದರೆ ಹಗಲಲ್ಲಿ, ಚಂದ್ರಕೊಡೆ ಎಂದರೆ ರಾತ್ರಿಯಲ್ಲಿ ಹಿಡಿಯುವ ಕೊಡೆ ಎಂಬರ್ಥ ಅಲ್ಲಿದೆ. ಹಗಲು ದೀವಟಿಗೆಯ ಮರ್ಯಾದೆಯ ಸಂಕೇತ. ಈ ಹಿನ್ನೆಲೆಯಲ್ಲಿಯೇ 'ಅಲ್ಪನಿಗೆ ಐಶ್ವರ್ಯ ಬಂದರೆ ಅರ್ಧರಾತ್ರಿಯಲ್ಲಿ ಕೊಡೆ ಹಿಡಿದ' ಎಂಬ ಗಾದೆ ಹುಟ್ಟಿರುವುದು. ಅಂದರೆ, ಚಂದ್ರಕೊಡೆ ಎಂಬುದಕ್ಕೆ ನವಿಲುಗರಿಯ ಕಣ್ಣುಗಳಿಂದ ಮಾಡಿದ ಕೊಡೆ ಎಂಬುದು ಅದರ ನಿರ್ಮಾಣವನ್ನು ಕುರಿತು ಹೇಳುತ್ತದೆಯಷ್ಟೆ. ರಾತ್ರಿಯ ವೇಳೆ ಹಿಡಿಯುವ 'ಕೊಡೆ' ಎಂಬುದು ಅದರ ಸಾಂದರ್ಭಿಕ ಅರ್ಥ.

'ಸೀಗುರಿ' ಎಂಬ ಒಂದು ಬಗೆಯ ಕೊಡೆಯನ್ನು ಕುರಿತು ಬರೆಯುತ್ತಾ ಚಾಳುಕ್ಯ ರಾಜ ಅಹವಮಲ್ಲ ದಡಿಗನಿಗೆ 'ಕೊಡೆ, ಅಡಪ, ಮಂದಳ, ಸೀಗುರಿ' ನೀಡಿದ ಎಂಬುದಾಗಿ ತಿಳಿಸುತ್ತಾ ಮಂದಳವೆಂಬುದನ್ನು 'ಮನೆದಾಣ'- ಎಂಬುದಾಗಿ ಅರ್ಥೈಸುತ್ತಾರೆ. ಇಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದದ್ದು, ಈ ನಾಲ್ಕು ಗೌರವ ಸೂಚಕ ಬಿರುದುಗಳು. ಅವುಗಳನ್ನು ದಡಿಗ ತನ್ನೊಂದಿಗೆ ಕೊಂಡೊಯ್ಯಬಹುದಾದ್ದು. ಈ ನಾಲ್ಕರಲ್ಲಿ ಮೂರು 'ಜಂಗಮ'ವಾಗಿದ್ದು ಒಂದು 'ಸ್ಥಾವರ'ವಾಗುವುದು ಹೇಗೆ ಸಾಧ್ಯ? ಆದ್ದರಿಂದ ಇಲ್ಲಿ 'ಮಂದಳ' ಎಂಬುದನ್ನು 'ಆಸನ' 'ಹಾಸುಗೆ'- ಎಂಬರ್ಥದಲ್ಲಿ ಸ್ವೀಕರಿಸುವುದು ಸೂಕ್ತವೆಂದು ತೋರುತ್ತದೆ. ಹಾಗೆಯೇ ಕನ್ನಡ ಸಾಹಿತ್ಯದಲ್ಲಿ ದೊರೆಯುವ ಹಲವು ನಿದರ್ಶನಗಳನ್ನು ಗಮನಿಸಿದರೆ 'ಸೀಗುರಿ' ಎಂಬುದಕ್ಕೆ ಚಾಮರ ಎಂಬ ಅರ್ಥವೇ ಹೆಚ್ಚು ಸೂಕ್ತವೆಂದ ತೋರುತ್ತದೆ. ದಡಿಗನಿಗೆ ನೀಡಿದ ನಾಲ್ಕು ಕೊಡುಗೆಗಳಲ್ಲಿ ಮೊದಲನೆಯದು 'ಕೊಡೆ'ಯೂ ಆಗಿರುವಾಗ ಮತ್ತೊಂದು ಕೊಡೆಯನ್ನು ನೀಡುವ ಅಗತ್ಯವೇನು? ಆ 'ಸೀಗುರಿ' ಕೊಡೆಯೇ ಆದರೆ ಚಂದ್ರ ಕೊಡೆಯ ಹಾಗೆ ವಿಶೇಷಾರ್ಥವೇನಾದರೂ ಇದೆಯಾ ಎಂಬುದನ್ನು ಚರ್ಚಿಸುವ ಅಗತ್ಯವಿತ್ತು.

'ಜೈನ ಪ್ರತಿಸಂಸ್ಕೃತಿಯ ನಿರ್ಮಾಣ ಮತ್ತು ಅಸ್ಪೃಶ್ಯತೆ', 'ದೇಶೀ ಸ್ತ್ರೀವಾದದ ಉದ್ಘಾಟಕಿ ಅತ್ತಿಮಬ್ಬೆ'- ಎಂಬೆರಡು ಸಂಪ್ರಬಂಧಗಳು ಹೊಸ ನಿಟ್ಟಿನಿಂದ ವಿಶ್ಲೇಷಿಸುವಂಥದ್ದಾಗಿದ್ದು ಆ ಬಗ್ಗೆ ನಮ್ಮನ್ನು ಆಳವಾಗಿ ಯೋಚಿಸುವಂತೆ ಪ್ರೇರೇಪಿಸುತ್ತವೆ.

'ಶಾಸನಗಳಲ್ಲಿ ಬಸದಿಗಳು' ಎಂಬ ಪಕ್ಷಿನೋಟದ ಲೇಖನ ಹಂಪನಾ ಅವರ ವ್ಯಾಪಕ ಅಧ್ಯಯನಕ್ಕೆ ಹಿಡಿದ ಕನ್ನಡಿ. 'ಶಾಸನಗಳಲ್ಲಿ ಶಾಪಾಶಯ ಮರೆಯಾದ ಮಾತು' ಎಂಬ ಲೇಖನದಲ್ಲಿ ಈ ಶಾಪಾಶಯಗಳಲ್ಲಿ ಇದ್ದ ಒಂದು ನಿರ್ದಿಷ್ಟ ಧಾರ್ಮಿಕ ಒತ್ತನ್ನು ಕಿತ್ತು ಹಾಕಿರುವುದು ಕ್ರಮೇಣ ಇರುವ ಮಾರ್ಪಾಟು. ಜೈನ ಪರವಾಗಿ ಇದ್ದ ಮಾತುಗಳನ್ನು ಪಕ್ಕಕ್ಕೆ ಸರಿಸಿ ಆಮೇಲೆ ಅದು ಮತ್ತೆ ಜೀವ ಪಡೆಯದಂತೆ ಆಗಿದ್ದು ಚಾರಿತ್ರಿಕ ವಿಸ್ಮಯ'- ಎಂಬುದಾಗಿ ಹೇಳುತ್ತಾರೆ. ಇಲ್ಲಿ ಹಂಪನಾ ಅವರು ಸ್ವಲ್ಪ ಆತುರ ಪಟ್ಟಂತೆ ತೋರುತ್ತದೆ. ಶಾಪಾಶಯ ಗಳನ್ನು ಹಾಕಿಸುವ ಮುಖ್ಯ ಉದ್ದೇಶವೆಂದರೆ ನೀಡಲಾಗಿರುವ ದಾನವನ್ನು ಯಾರೂ ಅಪಹರಿಸದಂತೆ, ಜನರ ಧಾರ್ಮಿಕ ನಂಬಿಕೆಗಳ ಮೂಲಕವೇ ಕಾಪಾಡುವುದು. ಪ್ರಬಲರಾದವರು ದಾನವನ್ನು ಅಪಹರಿಸುತ್ತಾರೆ. ಜೈನರು ಪ್ರಬಲರಾಗಿದ್ದಾಗ ಜೈನ ಪರವಾದ ಮಾತುಗಳಿದ್ದುವು. ಅದರೊಂದಿಗೆ ವೈದಿಕ ಧಾರ್ಮಿಕ ನಂಬಿಕೆಗಳಿಗೆ ಸಂಬಂಧಿಸಿದ ಮಾತುಗಳೂ ಇದ್ದುವು. ಜೈನ ಪ್ರಾಬಲ್ಯ ಕಡಿಮೆಯಾದಂತೆ ಅವರಲ್ಲಿ ಅಪಹರಣಕಾರರೂ ಕಡಿಮೆಯಾದರು. ಜೈನ ಧರ್ಮಕ್ಕೆ ನೀಡಿದ ದತ್ತಿಯನ್ನು ಜೈನರು ಅಪಹರಿಸುವ ಸ್ಥಿತಿಯಲ್ಲಿರಲಿಲ್ಲ. ಬೇರೆಯ ಧರ್ಮದವರೇ ಅಪಹರಿಸುವ ಪ್ರಯತ್ನ ಮಾಡುತ್ತಿದ್ದರು. ಈ ಕಾರಣದಿಂದಲೇ ಬಹುಪಾಲು ಜೈನ ಶಾಸನಗಳಲ್ಲಿ ವೈದಿಕ ಧರ್ಮದ ಪರವಾದ ಶಾಪಾಶಯಗಳಿದೆಯೇ ಹೊರತು ಬೇರೆ ಕಾರಣವಿಲ್ಲ. ಕರ್ನಾಟಕದಲ್ಲಿ ಮುಸ್ಲಿಂರ ಪ್ರಾಬಲ್ಯ ಹೆಚ್ಚಾದಂತೆ ಶಾಪಾಶಯ ಭಾಗಗಳಲ್ಲಿ ಅವರ ಧಾರ್ಮಿಕ ನಂಬಿಕೆಗಳೂ ಕಾಣಿಸಿಕೊಂಡವು. ಜನ ಈ ರೀತಿಯ ಶಾಪಗಳಿಗೆ ಅಂಜದೇ ಹೋದಾಗ ಅಪಹರಿಸುವವರನ್ನು ಅಶ್ಲೀಲವಾದ ಬೈಗುಳಗಿಂದ ಹೆದರಿಸಿದ ನಿದರ್ಶನವೂ ಉಂಟು. ಆದ್ದರಿಂದ ಮರೆಯಾದ ಮಾತುಗಳಿಗೆ ವಿಪರೀತಾರ್ಥವನ್ನು ಕಲ್ಪಿಸುವುದು ಚಾರಿತ್ರಿಕ ಸತ್ಯವಾಗಲಾರದು.

ಈ ಸಂಕಲನದಲ್ಲಿ ಕೇವಲ ಶಾಸನಗಳ ವಿಶ್ಲೇಷಣೆ ಮಾತ್ರವಲ್ಲ. ಹಲವಾರು ಹೊಸ ಶಾಸನಗಳನ್ನೂ ಪ್ರಕಟಿಸಿ ಇತಿಹಾಸದ ಮೇಲೆ ಹೊಸ ಬೆಳಕನ್ನು ಬೀರಿದ್ದಾರೆ. ಪ್ರತಿಯೊಂದು ಸಂಪ್ರಬಂಧದ ಹಿಂದೆಯೂ ಆಳವಾದ ಅಧ್ಯಯನವಿದೆ, ಶ್ರಮವಿದೆ. ಹಲವಾರೆಡೆಗಳಲ್ಲಿ ಉತ್ತಮವಾದ ಅನುಮಾನಗಳನ್ನು ದಾಖಲಿಸುತ್ತಾರೆ. ಆದರೆ ಪದವಿಟ್ಟಳಿಪದೊಂದಗ್ಗಳಿಕೆ ಯಿಂದಾಗಿ ಕೆಲವಾರು ಅಚಾತುರ್ಯಗಳು ನಡೆದಿವೆ. " ಪಂಪನ ತಂದೆ ಭೀಮಪಯ್ಯ ಜೈನನಾಗುವ ಮೊದಲು ಶೈವಸ್ಮಾರ್ತನಾಗಿದ್ದನು" ಎಂಬುದಾಗಿ ಒಂದೆಡೆ ಹೇಳುತ್ತಾರೆ. 'ಸ್ಮಾರ್ತ' ಎಂದರೆ ಸ್ಮೃತಿಗಳಲ್ಲಿ ನಂಬಿಕೆಯಿರುವವನು ಎಂದರ್ಥ. ಇಂದು ವೈಷ್ಣವ, ಶ್ರೀವೈಷ್ಣವರಲ್ಲದ ಬ್ರಾಹ್ಮಣರನ್ನು ಸ್ಮಾರ್ತರೆಂದು ಕರೆಯುವ ರೂಢಿ ಬಂದಿದೆ. ಇವರಲ್ಲಿ ಶಿವ-ವಿಷ್ಣುಗಳ ನಡುವೆ ಭೇದವಿಲ್ಲ. 'ಸ್ಮಾರ್ತ'ರೆಂದು ಗುರುತಿಸುವ ರೂಢಿ ಬಂದದ್ದು ಶ್ರೀವೈಷ್ಣವ, ವೈಷ್ಣವ ಪಂಥಗಳು ಮೂಡಿದ ನಂತರವೇ. ಅದಕ್ಕೆ ಮುನ್ನ ಎಲ್ಲರೂ 'ಸ್ಮಾರ್ತ'ರೇ. 'ಶೈವ ಬ್ರಾಹ್ಮಣ' 'ಶಿವದ್ವಿಜ', 'ಶಿವಬ್ರಾಹ್ಮಣ' ಎಂಬ ಪ್ರಯೋಗಗಳು ಶಾಸನಗಳಲ್ಲಿ ಮತ್ತು ಕಾವ್ಯಗಳಲ್ಲಿ ದೊರೆಯುತ್ತವೆ. ಇವರು ವೈದಿಕರಲ್ಲ. ಕೇವಲ ದೇವಾಲಯದ ಅರ್ಚಕರು. ಇವರು ಯಜ್ಞ ಯಾಗಾದಿಗಳನ್ನು ಮಾಡಿದ ನಿದರ್ಶನಗಳಿಲ್ಲ. ಪಂಪನ ತಾತ ನೂರಾರು ಯಜ್ಞಗಳನ್ನು ಮಾಡಿದ ಸೋಮಯಾಜಿ. ಅವರು ಶೈವ ಬ್ರಾಹ್ಮಣರಲ್ಲ. ಬ್ರಾಹ್ಮಣರಷ್ಟೇ.

ತಮ್ಮ ಹಲವಾರು ವರ್ಷಗಳ ಅಧ್ಯಯನದ ಫಲವನ್ನು ಈ ಸಂಕಲನದ ಮೂಲಕ ಪ್ರಕಟಿಸಿರುವ ಡಾ. ಹಂಪನಾ ಅವರು ಕನ್ನಡ ಸಂಶೋಧನಾ ರಂಗಕ್ಕೆ ಹೊಸ ಚೈತನ್ಯವನ್ನು ತುಂಬಿದ್ದಾರೆ. ಅವರ ಅಧ್ಯಯನಾಸಕ್ತಿ. ಅದಕ್ಕಾಗಿ ಅವರು ವಹಿಸುವ ಶ್ರಮ ಅನುಸರಣೀಯವಾದುದು. ಎಲ್ಲದಕ್ಕೂ ಮಿಗಿಲಾದ ಸಂಗತಿಯೆಂದರೆ, ಎಂಥ ಕಠಿಣ ವಿಷಯವನ್ನಾದರೂ ಸರಳವಾಗಿ, ನೇರವಾಗಿ ಎದುರಿನವರಿಗೆ ಅರ್ಥವಾಗುವಂತೆ ಹೇಳಬಲ್ಲರು. ಎಲ್ಲೆಲ್ಲಿಯೂ ಆರೋಪಿಸಿಕೊಂಡ ಶ್ರೀಮದ್ಗಾಂಭೀರ್ಯ ಕಾಣುವುದಿಲ್ಲ. ಬದಲಾಗಿ ಲವಲವಿಕೆ ಕಂಡು ಬರುತ್ತದೆ. ತಮಗೆ ಅನ್ಯಾಯವೆಂದು ತೋಚಿದ ಕಡೆ ಸಾತ್ವಿಕವಾಗಿ ಗುಡುಗುತ್ತಾರೆ. ವ್ಯಂಗ್ಯದಿಂದ ತಿವಿಯುತ್ತಾರೆ. ನಿರಂತರವಾದ ಅಧ್ಯಯನವೊಂದೇ ನಮ್ಮನ್ನು ಸದಾ ಜೀವಂತವಿಡುತ್ತದೆ- ಎಂಬ ಅಂಶವನ್ನು ಈ ಸಂಕಲನದ ಮೂಲಕ ಧ್ವನಿಸಿರುವ ಡಾ. ಹಂಪ ನಾಗರಾಜಯ್ಯನವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ಪುಸ್ತಕವನ್ನು ಅಂದವಾಗಿ ಮುದ್ರಿಸಿ ಪ್ರಕಟಿಸಿರುವ ಕನ್ನಡ ವಿಶ್ವವಿದ್ಯಾಲಯದ ಪ್ರಯತ್ನ ಮೆಚ್ಚತಕ್ಕದ್ದಾಗಿದೆ. ಜೈನಧರ್ಮದ ಬಗ್ಗೆ ಸಂಶೋಧನೆ ಮಾಡುವವರಿಗೆ ಈ ಸಂಕಲನ ಹಲವಾರು ಆಕರಗಳನ್ನೂ, ಸಮಸ್ಯೆಗಳನ್ನೂ, ಪೂರಕ ಸಾಮಗ್ರಿಯನ್ನು ನೀಡುತ್ತದೆ. ಸಾಮಾನ್ಯ ಆಸಕ್ತಿಯಿರುವವರಿಗೂ ಈ ಸಂಕಲನ ನಿರಾಶೆ ಮಾಡುವುದಿಲ್ಲ. ಕರ್ನಾಟಕದಲ್ಲಿನ ಜೈನಧರ್ಮದ ಅನೇಕ ಮುಖಗಳನ್ನು ಪರಿಚಯಿಸುತ್ತದೆ.

**-ಡಾ. ಆರ್. ಶೇಷಶಾಸ್ತ್ರಿ**

ಪ್ರಜಾವಾಣಿ, 23-5-1999

# ಚಂದ್ರ ಕೊಡೆ : ಉತ್ಕೃಷ್ಟ ಸಂಶೋಧನ ಗ್ರಂಥ

ಹಂಪಿಯ ಕನ್ನಡ ವಿಶ್ವವಿದ್ಯಾಲಯ ತಿಳುವಳಿಕೆಯ ಪರಿಪೇಕ್ಷ್ಯವನ್ನು ಕಟ್ಟಿಕೊಡುವಲ್ಲಿ ನಿರತವಾಗಿದೆ. ಹೊಸಬಗೆಯ ಶಾಸ್ತ್ರ ವಿಧಾನಗಳ ನಿರ್ಮಾಣ ಕಾರ್ಯದಲ್ಲಿಯೂ ಅದು ಕಾರ್ಯೋನ್ಮುಖವಾಗಿದೆ. ನಾಡಿನ ತಜ್ಞರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವುದರ ಮೂಲಕ ಕನ್ನಡ ಸಂಶೋಧನ ಕ್ಷೇತ್ರಕ್ಕೆ ಬೆಲೆಯುಳ್ಳ ಕೊಡುಗೆಯನ್ನು ಅದು ಕೊಡಮಾಡಿದೆ. ಕೆಲವು ವರ್ಷಗಳ ಹಿಂದೆ ಕನ್ನಡ ವಿಶ್ವವಿದ್ಯಾನಿಲಯ ಹಂಪಿ, ನಾಡಿನ ಹೆಸರಾಂತ ಸಂಶೋಧಕ ಡಾ. ಎಂ. ಚಿದಾನಂದಮೂರ್ತಿ ಅವರ 'ಹೊಸತು ಹೊಸತು' ಕೃತಿಯನ್ನು ಪ್ರಕಟಿಸಿತ್ತು. ಈ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಬಹುಮಾನವೂ ಪ್ರಾಪ್ತವಾದುದು ಈಗ ಇತಿಹಾಸ. ಇದೇ ಮಾದರಿಯಲ್ಲಿ ನಾಡಿನ ನಾಮಾಂಕಿತ ಸಂಶೋಧಕ ಡಾ. ಹಂಪನಾ ಅವರ 'ಚಂದ್ರಕೊಡೆ' ಎಂಬ ಸಂಶೋಧನ ಕೃತಿಯನ್ನು ಅದು ಪ್ರಕಟಿಸಿ ಕನ್ನಡಿಗರ ಕೈಗಿತ್ತಿದೆ.

'ಚಂದ್ರಕೊಡೆ' ಕನ್ನಡ ಸಂಶೋಧನ ಕ್ಷೇತ್ರದಲ್ಲಿ ಒಂದು ವಿಶಿಷ್ಟ ಹಾಗೂ ವೈವಿಧ್ಯಪೂರ್ಣ ಕೃತಿ. ನಮ್ಮ ಇಂದಿನ ತಿಳುವಳಿಕೆಯ ಹಿನ್ನೆಲೆಗಿರುವ ಇತಿಹಾಸವನ್ನು ಪುನಾರಚಿಸುವಲ್ಲಿ ಈ ಕೃತಿ ಮಾರ್ಗದರ್ಶಿಯಾಗಿದೆ. ಕನ್ನಡ ಸಂಸ್ಕೃತಿಯ ಸಾವಿರಾರು ವರ್ಷಗಳ ಅವಧಿಯ ಸಾಂಸ್ಕೃತಿಕ ಚಿಂತನಗಳನ್ನು ಕಲೆಹಾಕುವ ಪ್ರಯತ್ನವೂ ಇಲ್ಲಿದೆ. ಲೇಖಕರೇ ಒಂದು ಕಡೆ 'ಈ ಪುಸ್ತಕದ ಹರವು ಹಾಸು ದೊಡ್ಡದು. ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿ, ವಾಸ್ತು, ಶಿಲ್ಪ, ಧರ್ಮ ಚರಿತ್ರೆ ಇವುಗಳಿಗೆ ಸಂಬಂಧಿಸಿದ ಮೌಲಿಕವಾದ ಮಾಹಿತಿ ಈ ಗ್ರಂಥದಲ್ಲಿ ದಾಖಲಾಗಿದೆ. ನಾನಾ ಪೂರಕ ಜ್ಞಾನ ಶಾಖೆಗಳ ತಜ್ಞರು ಪರಿಭಾವಿಸುವಂತಹ, ಇನ್ನೂ ಮುಂದುವರಿದ ವಾಗ್ವಾದ ಸಂವಾದಗಳಿಗೆ ಗ್ರಾಸವಾಗುವಂತಹ ಹೊಸ ಸಾಮಾಗ್ರಿಯನ್ನು ಮೊದಲ ಬಾರಿಗೆ ಇಲ್ಲಿ ಹೊರಗಿಟ್ಟಿರುವುದಾಗಿ ಹೇಳಿಕೊಂಡಿದ್ದಾರೆ. ಶಾಸನಗಳನ್ನೇ ಹೆಚ್ಚಾಗಿ ಹಾಗೂ ಪ್ರಧಾನವಾಗಿ ಆಧರಿಸುವ ಈ ಶೋಧ ಗ್ರಂಥದಲ್ಲಿ 65ಲೇಖನಗಳಿವೆ. ಕನ್ನಡ ಸಾಹಿತ್ಯ, ಸಂಶೋಧನ ಕ್ಷೇತ್ರದಲ್ಲಿ ಡಾ. ಹಂಪನಾ ಅವರದು. ದೊಡ್ಡ ಹೆಸರು. ಅವರ ಸುಮಾರು ನಾಲ್ಕು ದಶಕಗಳ ತಲಸ್ಪರ್ಶಿಯಾದ ಶಾಸನವ್ಯಾಸಂಗ, ಪಾಂಡಿತ್ಯ, ಚರಿತ್ರೆಯ ಜ್ಞಾನ ಮತ್ತು ಪರಿಶ್ರಮ ಈ ಗ್ರಂಥದಲ್ಲಿ ಕೆನೆ ಕಟ್ಟಿದೆ.

**ಸಾಹಿತ್ಯ ಸಂಶೋಧನೆ**

ಛಂದೋಂಬುಧಿ-ನಾಗವರ್ಮ ಮರುಚಿಂತನೆ, ಚಾರುದತ್ತನ ಕತೆಯ ಮೂಲಚೂಲ, ವಡ್ಡಾರಾಧನೆಯ ಮೂರು ಶ್ಲೋಕಗಳು, ದುರ್ಗಸಿಂಹ ಮತ್ತು ಪಂಚ ತಂತ್ರದ ಪರಿಶೀಲನೆ, ಭ್ರಾಜಿಷ್ಣು ಆರಾಧನಾ ಕರ್ಣಾಟಕ ಟೀಕಾ, ಪಂಪ-ಜಿನಸೇನ ತೌಲನಿಕ ಅಧ್ಯಯನ ಮೊದಲಾದ ಲೇಖನಗಳು ಸಾಹಿತ್ಯ ಸಂಶೋಧನ ವಲಯಕ್ಕೆ ಸಂಬಂಧಿಸಿದವು. ಕನ್ನಡದ ಆದಿಕವಿ ಪಂಪನ

ಇತಿಹಾಸಕ್ಕೆ ಸಂಬಂಧಿಸಿದಂತೆ ಚರಿತ್ರೆಯಲ್ಲಿ ಗೈರು ಹಾಜರಾದ ಸತ್ಯಾಂಶಗಳನ್ನು ತುಂಬಿಕೊಡುವ ಪ್ರಯತ್ನವನ್ನು 'ಪಂಪನ ಪೂರ್ವಜರ ಜಾತಿ' ಎಂಬ ಲೇಖನದಲ್ಲಿ ಮಾಡಿದ್ದಾರೆ. ಪಂಪನ ಪೂರ್ವಿಕರು ವೆಂಗಿಪಳುವಿನ ವತ್ಸಗೋತ್ರದ ಬ್ರಾಹ್ಮಣೆಂದು ಹೇಳಲಾಗಿದೆ. ಆದರೆ ಡಾ. ಹಂಪನಾ ಅವರು ಪಂಪನ ಪೂರ್ವಜರು ಶೈವ ಬ್ರಾಹ್ಮಣರು ಎಂಬುದನ್ನು ಸಮರ್ಥ ಸಾಕ್ಷ್ಯಾಧಾರಗಳಿಂದ ತೋರಿಸಿಕೊಟ್ಟಿದ್ದಾರೆ. ಪಂಪನು ಶೈವ ಬ್ರಾಹ್ಮಣ ಮೂಲದವನಾದ್ದರಿಂದ, ವಿಕ್ರಮಾರ್ಜುನ ವಿಜಯದಲ್ಲಿ ಶಿವನನ್ನು ತನ್ಮಯತೆಯಿಂದ ವರ್ಣಿಸಿದ್ದಾನೆ. ವ್ಯಾಸರು ಹೆಚ್ಚಾಗಿ ಕೃಷ್ಣ ಭಕ್ತರು ವ್ಯಾಸ ಮುನೀಂದ್ರ ರುಂದ್ರ ವಚನಾಮೃತವಾರ್ಧಿಯನ್ನು ಈಜಿದ ಪಂಪನು ಹೆಚ್ಚಾಗಿ ಶಿವಭಕ್ತನಾದುದಕ್ಕೆ ಕಾರಣ ಆತನ ಪೂರ್ವಜರು.... ಶೈವ ಬ್ರಾಹ್ಮಣರಾಗಿದ್ದಾರೆಂಬುದನ್ನು ಪಂಪಭಾರತದ ಅನೇಕ ಪದ್ಯಗಳ ಮೂಲಕ ಶ್ರುತ ಪಡಿಸಿದ್ದಾರೆ.

ಛಂದೋಂಬುಧಿಯ ಕರ್ತೃ ನಾಗವರ್ಮನ ಇತಿವೃತ್ತವನ್ನು ಕುರಿತು ಹೊಂಬುಜದ ಶಾಸನಗಳನ್ನು ಮೂಲ ಆಕಾರಗಳನ್ನಾಗಿಟ್ಟುಕೊಂಡು ಜಿಜ್ಞಾಸೆ ನಡೆಸಿ ಅವು ಕೂಡ ವೆಂಗಿಯ ಪ್ರತಿಭೆ "ನಾಗವರ್ಮನ ಮುತ್ತಾತ ವೆಣ್ಣಮಯ್ಯನೂ ಅತ್ತಿಮಬ್ಬೆಯ ತಾತ ನಾಗಮಯ್ಯನೂ ವೆಂಗಿ ವಿಷಯದ ಕಾಂಡಿನ್ಯ ಗೋತ್ರದವರಾಗಿದ್ದು ದಾಯಾದಿಗಳೋ ಹತ್ತಿರದ ನೆಂಟರೋ ಆಗಿರುವ ಸಾದ್ಯತೆಯಿದೆ. ಅತ್ತಿಮಬ್ಬೆಯ ಹಿರಿಯರಂತೆಯೇ ನಾಗವರ್ಮನ ಹಿರಿಯರೂ ಬ್ರಾಹ್ಮಣತ್ವದಿಂದ ಜೈನತ್ವಕ್ಕೆ ಮತಾಂತರಗೊಂಡು ಬಂದವರು" (ಪುಟ 20) ಎಂಬ ಸೂಕ್ಷ್ಮ ಸಂಬಂಧಗಳತ್ತ ದೃಷ್ಟಿ ಹಾಯಿಸಿದ್ದಾರೆ. ಕನ್ನಡದ ಮೊದಲ ಉಪಲಬ್ದ ಗದ್ಯ ಗ್ರಂಥ ವಡ್ಡಾರಾಧನೆಯ ಕುರಿತು ಡಾ. ಹಂಪನಾ ಅವರು ಹತ್ತಾರು ಅಧ್ಯಯನ ಪೂರ್ಣ ಲೇಖನಗಳನ್ನು ಬರೆದಿದ್ದಾರೆ. ವಡ್ಡಾರಾಧನೆಗೆ ಸಂಬಂಧಿಸಿದ ಹಲವಾರುರ ಲೇಖನಗಳು ಪ್ರಸ್ತುತ ಕೃತಿಯಲ್ಲಿ ಸೇರ್ಪಡೆಯಾಗಿವೆ. ಇವು ವಡ್ಡಾರಾದನೆಯ ಕುರಿತು ಹೊಸಬೆಳಕು ಚೆಲ್ಲುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿವೆ. ದಿವಾಕರಣಂದಿ ಮತ್ತು ವಡ್ಡಾರಾಧನೆ ಎಂಬ ಲೇಖನದಲ್ಲಿ ದಿವಾಕರಣಂದಿಯ ವಿಚಾರವಾಗಿ ನಗರ 57ನೆಯ ಶಾಸನ ಮತ್ತು ಸೊರಬ 58ನೆಯ ಶಾಸನದಿಂದ ಕೆಲವು ವಿಚಾರಗಳು ತಿಳಿದು ಬರುತ್ತವೆ. ಅದರ ಪ್ರಕಾರ ದಿವಾರಣಂದಿಯ ಕಾಲ 1062 ಎಂದು ಖಚಿತವಾಗಿ ಗೊತ್ತಾಗುತ್ತದೆ. ಹಾಗಾದರೆ ವಡ್ಡಾರಾಧನೆಯ ಕಾಲ ನಿರ್ಧಾರಕ್ಕೆ ಇದನ್ನೇ ಒಂದು ಪ್ರಬಲ ಆಧಾರವೆಂದು ಅಂಗೀಕರಿಸಬಹುದೇ ಎಂಬುದು ನಮ್ಮ ಮುಂದಿನ ಸಮಸ್ಯೆ. ಹೀಗಾಗಿ ವಡ್ಡಾರಾಧನೆಯ ಕಾಲದ ವಿಚಾರ ಚರ್ಚೆ ಇನ್ನೂ ಶೋಧನೆಗೆ ತೆರೆದ ವಿಷಯವಾಗಿಯೇ ಉಳಿದುಕೊಳ್ಳುತ್ತದೆಂಬುದನ್ನು ಹೇಳಿ ಅಧ್ಯಾಯನದ ಹೊಸ ಸಾಧ್ಯತೆಗಳತ್ತ ಸಂಶೋಧಕರ ಗಮನವನ್ನು ಸೆಳೆದಿದ್ದಾರೆ. ಭದ್ರಬಾಹು ಭಟ್ಟಾರರ ಕತೆ ಮುಂತಾದ ಕೆಲವು ಕತೆಗಳು ಚರಿತ್ರಕಾರರಿಗೆ ಉತ್ತಮ ಸಾಮಗ್ರಿ ದೊರಕಿಸುವಂತೆ ಸಮಸ್ಯೆಯನ್ನೂ ಒಡ್ಡುತ್ತವೆ. ಕರ್ನಾಟಕದ ಜೈನ ಇತಿಹಾಸ ಕಲ್ಪವನ್ನು ಪುನಾರಚಿಸುವಲ್ಲಿ ಭದ್ರಬಾಹು ಭಟಾರರ ಕಥೆಯಷ್ಟೇ ಚಾಣಾಕ್ಯರಿಸಿಯ ಕತೆಯೂ ಪ್ರಮುಖ ದಾಖಲೆಗಳನ್ನು ನೀಡುತ್ತದೆ. ಸಂಶೋಧನ ಸಲಿಕೆ ಇದುವರೆಗೆ ಕನ್ನಡದಲ್ಲಿ ಈ ವಿಚಾರದಲ್ಲಿ ಕಾರ್ಯ ಪ್ರವೃತ್ತವಾಗಿಲ್ಲ ಎಂಬ ಖೇದವನ್ನು ವ್ಯಕ್ತ ಪಡಿಸಿದ್ದಾರಲ್ಲದೆ, ಅದು ಸಾಗಬೇಕಾದ ಮಾರ್ಗವನ್ನು ಇಲ್ಲಿ ಸೂಚಿಸಿದ್ದಾರೆ. ಹಲವು

ಕ್ಷೇತ್ರಗಳ ವಿದ್ವತ್ತು, ಶಾಸ್ತ್ರಗಳ ಅರಿವಿನಿಂದ ಅಧ್ಯಯನಶೀಲ ಮನಸ್ಸು ಕುತೂಹಲಕ್ಕಾಗಿ ವಿಷಯವೊಂದರ ಜಾಡು ಹಿಡಿದು ಸಾಗುವ ಪರಿ ಸೊಗಸಾಗಿ ಈ ಲೇಖನಗಳಲ್ಲಿ ಪಡಿಮೂಡಿದೆ. ಭಾರತೀಯ ಸಂಸ್ಕೃತಿಯನ್ನು ಕರ್ನಾಟಕದ ಇತಿಹಾಸ ವಿಶಿಷ್ಟ ಬಗೆಯಾಗಿ ರೂಪಿಸಿದ ಎಳೆ ಎಳೆಯ ಶೋಧವೂ ಪ್ರಸ್ತುತ ಕೃತಿಯಲ್ಲಿ ಬಂದಿದೆ. "ದೇಶೀ ಸ್ತ್ರೀವಾದದ ಉದ್ಘಾಟಕಿ ಅತ್ತಿಮಬ್ಬೆ" ಎಂಬ ಲೇಖನ ಅರ್ಥಪೂರ್ಣವೂ, ಉನ್ನ ವಿಮರ್ಶೆಯಿಂದಲೂ ಕೂಡಿದೆ. "ಅತ್ತಿಮಬ್ಬೆಯ ಇಡೀ ಕುಟುಂಬ ಸ್ತ್ರೀವಾದದ ಸಂವಾದಗಳಿಗೆ ಗಟ್ಟಿಯಾದ ಜೀವಂತ ದೃಷ್ಟಾಂತ ಒದಗಿಸುವ ಆದರ್ಶದ ಸ್ಥಿತಿಯಲ್ಲಿ ಕಾಣುತ್ತದೆ. ಗಂಡಸರು ಬರೆದಿರುವ ಶಾಸನಗಳಲ್ಲಿಯೂ ಚರಿತ್ರೆಯಲ್ಲೂ ಮಹಿಳೆಯಾದ ಅತ್ತಿಮಬ್ಬೆಗಳಿಸಿರುವ ಉನ್ನತೋನ್ನತ ಸ್ಥಾನವನ್ನು ಸ್ತ್ರೀವಾದಿ ಚಿಂತಕರು ಪರಿಗಣಿಸಬೇಕಾದ ಆಗತ್ಯವನ್ನು ಅವರು ಒತ್ತಿಹೇಳಿದ್ದಾರೆ.

**ಚಾರಿತ್ರಿಕ - ಸಾಂಸ್ಕೃತಿಕ ಶೋಧ**

ಕನ್ನಡ ಶಾಸನಗಳನ್ನು ಆಧಾರವಾಗಿಟ್ಟುಕೊಂಡು ಚರಿತ್ರೆಯ ಗಟ್ಟಿ ನೆಲೆಯ ಮೇಲೆ ಡಾ. ಹಂಪನಾ ಅವರ 'ಚಂದ್ರಕೊಡೆ'ಯ ಬಹುತೇಕ ಲೇಖನಗಳು ರೂಪುಗೊಂಡಿವೆ. 'ಕರ್ನಾಟಕ ಚರಿತ್ರೆಯ ಕೆಲವು ಪುಟಗಳನ್ನು, ಮುಖ್ಯವಾಗಿ ಗಂಗರ ಇತಿಹಾಸವನ್ನು ಪುನಾರಚಿಸಬೇಕಾದ ಅಗತ್ಯವನ್ನು ಇಲ್ಲಿನ ಸಾಮಗ್ರಿ ಎತ್ತಿತೋರಿಸಿವೆ' ಎಂಬ ಮುನ್ನುಡಿಯ ಮಾತುಗಳಲ್ಲಿ ನಿಜಾಂಶವಿದೆ. ಶಾಸನಗಳಲ್ಲಿ ಗಂಗರ ಪ್ರಾಚೀನ, ಬಸದಿಗಳು : ಅವಲೋಕನ ಗಂಗರ ಒಂದು ಶಾಸನ. ಗಂಗರ ರಾಜಮಲ್ಲನ ಹೆಂಡತಿ : ಹೊಸ ಮಾಹಿತಿ, ಬೂತುಗ: ಹೊಸ ಶಾಸನಗಳು, ಶಾಸನಗಳಲ್ಲಿ ಕುಂದಣ ಸ್ವಾಮಿ ಮೊದಲಾದ ಲೇಖನಗಳು ಗಂಗವಂಶದ ಚರಿತ್ರೆಯ ರಚನೆಗೆ ಕೈದೀವಿಗೆಗಳಾಗಿವೆ. ಅಲ್ಲದೆ ಜೈನ ಸಾಹಿತ್ಯ ವಾಸ್ತು ಶಿಲ್ಪ ಧರ್ಮ ಒಟ್ಟಾರೆಯಾಗಿ ಜೈನ ಸಂಸ್ಕೃತಿ ಪರಂಪರೆಯ ಅಭಿವೃದ್ಧಿಗೆ ಹಾಗೂ ಮುಂದುವರಿಕೆಗೆ ಗಂಗರ ಕೊಡುಗೆ ಬಹಳ ದೊಡ್ಡದೆಂಬ ಅಂಶ ಇಲ್ಲಿನ ಶೋಧಗಳಿಂದ ಸ್ಪಷ್ಟವಾಗುತ್ತದೆ. ಗಂಗ ಮಂಡಳೇಶ್ವರನ ಅರಸಿ 'ಕಂಚಬ್ಬರಸಿ' ಈ ಕೃತಿಯ ಮೂಲಕ ಮೊದಲಬಾರಿಗೆ ಇತಿಹಾಸಕ್ಕೆ ಸೇರ್ಪಡೆಗೊಂಡಿದ್ದಾಳೆ. ಕಾಲಗರ್ಭದಲ್ಲಿ ಮರೆಯಾಗಿರುವ, ಚರಿತ್ರೆಗೆ ಬೇಕಾದ ಅನೇಕ ಹೊಸತು ಹೊಸತುಗಳನ್ನು ಈ ಕೃತಿಯಲ್ಲಿ ಜೋಡಿಸಿರುವುದು. ಈ ಕೃತಿಯ ಧನಾತ್ಮಕ ಅಂಶಗಳಲ್ಲಿ ಒಂದು.

ಕನ್ನಡದಲ್ಲಿ ತೌಲನಿಕ ಅಧ್ಯಯನ ಅಷ್ಟಾಗಿ ನಡೆದಿಲ್ಲ. ಈ ಕೃತಿಯ ಪಂಪ - ಜಿನಸೇನ ಎಂಬ ತೌಲನಿಕ ಅಧ್ಯಯನದ ಕುರಿತಾದ ಲೇಖನ ಡಾ. ಹಂಪನಾ ಅವರ ವಿದ್ವತ್ತಿಗೆ ಸಾಕ್ಷಿಯಾಗಿದೆ. ಜಿನಸೇನರ ಕಾವ್ಯದಿಂದ ಪಂಪಕವಿ ಪಡೆದ ಪ್ರೇರಣೆಗಳ ಒಳಶೋಧವೂ ಇಲ್ಲಿ ಬಂದಿದೆ. ಮಹಾಕವಿಯಾದವನು ಮಹಾಕಾವ್ಯಕ್ಕೆ ತಕ್ಕದಾದ ವಸ್ತುವಿಗೆ ತೆಕ್ಕೆ ಬೀಳುತ್ತಾನೆ. ಪಂಪ ತಾನು ರಚಿಸಿದ ಎರಡು ಕಾವ್ಯಗಳ ವಸ್ತುವನ್ನು ಎರಡು ಮಹಾಕೃತಿಗಳಿಂದ ಆರಿಸಿಕೊಂಡಿದ್ದಾನೆ. ಒಂದು ಕಡೆ ವ್ಯಾಸರ ಮಾನಸಪುತ್ರನಾಗಿ ವಿಕ್ರಮಾರ್ಜುನ ವಿಜಯವನ್ನು ಪುನರ್ ಸೃಜಿಸಿದ್ದಾನೆ. ಇನ್ನೊಂದು ಕಡೆ ಜಿನಸೇನರ ಪೌರಸ ಪುತ್ರನಾಗಿ ಆದಿ ಪುರಾಣವನ್ನು ಪ್ರಾಕ್ ಕಥಾ ಶರೀರವನ್ನು ಪುನರ್ ಸೃಷ್ಟಿಸಿದ್ದಾನೆ. ಜಿನಸೇನರ ವರೆಗೆ ಹರಿದು ಬಂದ ಒಂದು ಸಿದ್ಧ ಶ್ರಮಣ ಸಂಪ್ರದಾಯ ಕಥಾ ವಸ್ತುವನ್ನು ಸಾತತ್ಯವನ್ನು ಅಧ್ಯಸಕ್ಕೆ ಒಗ್ಗಿಸಿ ಬಗ್ಗಿಸಿ

ಬಳಸಿಕೊಳ್ಳುವಲ್ಲಿ ಪಂಪನ ವೈಶಿಷ್ಟ್ಯ ಮತ್ತು ಸ್ವೋಪಜ್ಞತೆ ಎಲ್ಲೆಲ್ಲಿ ಕಾಣಿಸಿಕೊಂಡಿದೆಯೆಂಬುದನ್ನು ಈ ಪ್ರಬಂಧದಲ್ಲಿ ಲೇಖಕರು ಗುರುತಿಸಿದ್ದಾರೆ. ಈ ರೀತಿಯ ತೌಲನಿಕ ಅಧ್ಯಯನ ಕನ್ನಡದಲ್ಲಿ ಬಹಳ ಅಪರೂಪ ಎಂದರೂ ತಪ್ಪಾಗಲಿಕ್ಕಿಲ್ಲ.

**ಆಕರಗಳ ಖನಿಯಾಗಿ ಶಾಸನಗಳು:**

ಶಾಸನಗಳು ಸಾಂಸ್ಕೃತಿಕ ಅಧ್ಯಯನದಲ್ಲಿ ಅದೆಂತಹ ವೈವಿಧ್ಯಮಯ ಹಾಗೂ ಸಮೃದ್ಧವಾದ ಖಚಿತ ಮಾಹಿತಿಗಳನ್ನು ಒದಗಿಸಬಲ್ಲವು ಎಂಬುದಕ್ಕೆ ಈ ಕೃತಿಯೇ ಸಾಕ್ಷಿ. ಕನ್ನಡ ಶಾಸನಗಳ ಅಧ್ಯಯನದ ಅಗತ್ಯತೆ ಹಾಗೂ ಅವು ಮೊಗೆದಷ್ಟೂ ಹೊಸ ಹೊಸ ಅಂಶಗಳನ್ನು ಹೊರಹಾಕಬಲ್ಲವು ಎಂಬುದನ್ನು ಡಾ. ಹಂಪನಾ ಅವರು ಈ ಕೃತಿಯಲ್ಲಿ ಸಶಕ್ತವಾಗಿ ತೋರಿಸಿಕೊಟ್ಟಿದ್ದಾರೆ. ಅನೇಕ ಸಣ್ಣ ಪುಟ್ಟ ರಾಜವಂಶಗಳ, ಸ್ಥಳೀಯ ಅಧಿಕಾರಿಗಳ, ಸಾಮಂತರ ಇತಿಹಾಸದ ಪುನಾರಚನೆಯಲ್ಲಿ ಶಾಸನಗಳು ನಮಗಿರುವ ಏಕೈಕ ದಾಖಲೆಗಳು ಎಂಬ ಅಂಶ ಈ ಕೃತಿಯ ಓದಿನಿಂದ ಮನದಟ್ಟಾಗುತ್ತದೆ. ಸಂಶೋಧನೆ ಸೃಜನೇತರ ಎಂಬುದು ಎಲ್ಲರಿಗೂ ಗೊತ್ತಿರುವ ಸಂಗತಿ. ಆದರೆ ಅದು ಶುಷ್ಕ ಪಾಂಡಿತ್ಯದಿಂದ ಕೂಡಿದ್ದಲ್ಲ; ಅಲ್ಲಿಯೂ ಸೃಜನಶೀಲ ಮನಸ್ಸು ಕೆಲಸ ಮಾಡಬಲ್ಲದು ಎಂಬುದನ್ನು ಲೇಖಕರಿಲ್ಲಿ ತೋರ್ಪಡಿಸಿದ್ದಾರೆ. ಯಾಪನೀಯದ ಹುಟ್ಟಿನ ಕುರಿತು ಬರೆಯುತ್ತಾ.... ''ಜೈನ ಮತದೊಳಗೆ ಅವತಾರಗಳೂ ಇಲ್ಲ, ದೇವರುಗಳೂ ಇಲ್ಲ. ಅನುಗ್ರಹವೂ ಇಲ್ಲ, ಇರುವ ಜಿನರಿಗೂ ಅಭರಣವಿಲ್ಲ. ಅಲಂಕಾರವಿಲ್ಲ, ಕಿರೀಟವಿಲ್ಲ, ಆಯುಧಗಳಿಲ್ಲ, ಬೆತ್ತಲೆ ದೇವರು. ತಾನೇ ದಿಗಂಬರ, ಇನ್ನು ನಮಗೇನು ಕೊಡಬಲ್ಲ. ನಮ್ಮ ಗತಿ ಏನು, ಸ್ತ್ರೀ ಶಕ್ತಿ ದೇವಿಯರೂ ಇಲ್ಲಿ ಇಲ್ಲ. ಇಂಥ ಪ್ರಶ್ನೆಗಳು ಹೊಸ ಆಗಂತುಕರಲ್ಲಿ ಉದ್ಭವಿಸಿದವು. ಅವರ ಆತಂಕಗಳನ್ನು ದೂರ ಮಾಡುವಂಥ ಬದಲಲ್ಲಿ ವ್ಯವಸ್ಥೆಯೊಂದು, ಮರು ಹೊಂದಾಣಿಕೆ ಜರೂರು ಆಗಬೇಕಾಯಿತು. ಆಗ ದಿಢೀರಾಗಿ ಹುಟ್ಟಿದ ಸಮನ್ವಯ ಸಿದ್ಧಾಂತವೇ ಈ ಯಾಪಾನೀಯ ''ಯಾಪನೀಯವು ಜೈನ ಧರ್ಮದಲ್ಲಿ ಸುಧಾರಣೆಗಾಗಿ ಬಂದ ಸಂಘ ಎಂಬುದನ್ನು ಡಾ. ಹಂಪನಾ 'ಗದ್ಯಂ ಹೃದ್ಯಂ' ಎಂಬಂತೆ ಚಿತ್ರಿಸಿದ್ದಾರೆ. ಅತ್ತಿಮಬ್ಬೆಯ ಸಾಧನೆಯ ಕುರಿತು ಬರೆಯುತ್ತಾ''ಹೆಣ್ಣು ಚಂಚಲೆ, ವಿಧವೆಯು ಮೂರ್ತಿವೆತ್ತ ಅಪಶಕುನ ಎಂಬಿತ್ಯಾದಿ ಪೂರ್ವಗ್ರಹ ಪೀಡಿತರಿಗೆ ಅತ್ತಿಮಬ್ಬೆ ದಿಗ್ಭ್ರಮೆ ಹುಟ್ಟಿಸಿದಳು, ವೈಧವ್ಯವು ವಿಧಿಕೊಟ್ಟ ಶಾಪವೆಂಬ ಕೀಳರಿಮೆಯಿಂದ ಪಾರಾಗಿ, ಆತ್ಮ ಸ್ಥೈರ್ಯದಿಂದ, ವಿಶ್ವಾಸದಿಂದ ಬದುಕನ್ನು ಸ್ವೀಕರಿಸಿದಳು. ಮಾನಸಿಕವಾಗಿ ಗಟ್ಟಿಯಾದ ಮೇಲೆ ಉಳಿದ ಸವಾಲುಗಳನ್ನು ಎದುರಿಸಲು ಧೃತಿ ಬರುತ್ತದೆ. ಸ್ತ್ರೀ ವಾದದ ಮಾನದಂಡದಿಂದ ಅಳೆದಾಗ, ಯಾವ ನಿಟ್ಟಿನಿಂದ ನೋಡಿದರೂ, ಅತ್ತಿಮಬ್ಬೆಯ ಕ್ರಿಯಾ ಮಾದರಿಯಲ್ಲಿ ಸ್ತ್ರೀವಾದ ಸಂಬಂಧಿ ವಾಗ್ವಾದಗಳಿಗೆ, ಚಾರಿತ್ರಿಕ ಹಾಗೂ ಪ್ರತ್ಯಕ್ಷ ಆಧಾರಗಳಿವೆ. ಇಂದಿಗೂ ಪ್ರಸ್ತುತವೆನಿಸುವ ನಾಯಕತ್ವದ ಮಾದರಿಗಳಿವೆ. ಮನೆಯ ನಾಲ್ಕು ಗೋಡೆಗಳ ನಡುವೆ ನಿರ್ಬಂಧಿತ ಜೀವನವನ್ನು ನಡೆಸಬೇಕೆಂಬ ವಿನಾಶಕಾರಿ ಮೌಲ್ಯವನ್ನು ಆಕೆ ಆರಾಧಿಸಲಿಲ್ಲ. ಧಿಕ್ಕಾರಿಸಿದಳು. ಸಾಮಾಜಿಕ ಘಟಕವಾದ ಕುಟುಂಬ ಎಂಬ ಸಂಸ್ಥೆಯೊಳಗೆ ಗೌಣ ನೆಲೆಗೆ ಸರಿದು ಕರಗಿ ಹೋಗಲಿಲ್ಲ ಆಂತರಿಕ ಬಲದೊಂದಿಗೆ ತನ್ನ ವಿಚಾರದಲ್ಲಿ ತಳೆದ ಅಚಲ ವಿಶ್ವಾಸ

(self-confidence) ಆಕೆಗೊಂದು ಧೀಮಂತಗಳನ್ನು ಕಣ್ಣಿಗೆ ಕಟ್ಟುವಂತೆ ಇಲ್ಲಿ ಚಿತ್ರಿಸಿದ್ದಾರೆ. ಒಬ್ಬ ಒಳ್ಳೆಯ ಸಂಶೋಧಕ ಯಾವ ರೀತಿಯಲ್ಲಿ ಭಾಷೆಯನ್ನು ದುಡಿಸಿಕೊಳ್ಳಬಹುದು ಎಂಬುದಕ್ಕೂ ಈ ಕೃತಿ ಮಾರ್ಗದರ್ಶಿಯಾಗಿದೆ; ಮಾದರಿಯಾಗಿದೆ.

ಇದರಲ್ಲಿರುವ ಮೌಲಿಕ ಲೇಖನಗಳಿಂದಾಗಿ ಈ ಕೃತಿ ಇಂದಿಗೂ ಎಂದಿಗೂ ಉಪದೇಯವಾಗಬಲ್ಲದು. ಹಂಪನಾ ಅವರ ಇತಿಹಾಸ ನಿರೂಪಣೆಯಲ್ಲಿ ಕೆಲವು ಬೆರಗುಗೊಳಿಸುವಂಥ ಒಳನೋಟಗಳಿರುವುದರಿಂದಲೇ ಈ ಕೃತಿ ಅನನ್ಯವೆನಿಸಿಕೊಳ್ಳುತ್ತದೆ. ಧಾರ್ಮಿಕತೆ ನಮ್ಮ ಸಮಾಜ ರಚನೆಯ ಬಹುಮಹತ್ವದ ಅಂಶ ಎಂಬ ಅರಿವು ಡಾ. ಹಂಪನಾ ಅವರಿಗಿದೆ. ಆದ್ದರಿಂದಲೇ ಅವರು ಧರ್ಮಪಂಥ, ದೇವರು, ಗುರುಗಳು ಸಾಮಾಜಿಕ ಸಂಬಂಧಗಳ ಕುರಿತು ಇಲ್ಲಿ ಸಾಕಷ್ಟು ಚಿಂತನ - ಮಂಥನ ನಡೆಸಿದ್ದಾರೆ. ಶಾಖೋಪಶಾಖೆಯಾಗಿ ಹಬ್ಬಿರುವ ಜೈನ ಗುರು ಪರಂಪರೆಯ ಅಧ್ಯಯನ ದಿಕ್ಕು ತಪ್ಪಿಸುವಷ್ಟು ಜಟಿಲವಾದುದು. ಆದಾಗಲೂ ಲವಲವಿಕೆಯ ಗದ್ಯದ ಮೂಲಕ; ಅನೇಕ ಪುರಾವೆಗಳ ಮೂಲಕ ಸಾಂಸ್ಕೃತಿಕ ಇತಿಹಾಸದ ನಿರ್ವಚನವನ್ನು ಈ ಕೃತಿಯಲ್ಲಿ ಮಾಡಿದ್ದಾರೆ. ಹೊಸ ವಿಚಾರ, ಹೊಸ ಶೋಧಗಳಿಂದ ತುಂಬಿತುಳುಕುವ ಈ ಕೃತಿಯಲ್ಲಿ ಸಾಂಸ್ಕೃತಿಕ ಸ್ಥಿತ್ಯಂತರಗಳಿಗೆ ಕಾರಣಗಳೇನೆಂಬುದರ ಚಿಂತನೆಯೂ ಈ ಗ್ರಂಥದಲ್ಲಿ ಬಂದಿದೆ.

ಡಾ. ಹಂಪನಾ ಅವರ 'ಚಂದ್ರಕೊಡೆ' ಅತ್ಯಂತ ಉತ್ಕೃಷ್ಟವಾದ ಸಂಶೋಧನ ಗ್ರಂಥ. ಇದೆಂದಿಗೂ ಮುಖಸ್ತುತಿಯ ಮಾತಲ್ಲ. ಶಾಸನಗಳನ್ನು ಆಧಾರವಾಗಿಟ್ಟುಕೊಂಡು ರಚನೆಗೊಂಡ ಗ್ರಂಥಗಳಲ್ಲಿ ಇದಕ್ಕೆ ಮೊದಲನೆಯ ಮಾನ; ಮೇಲಿನ ಸ್ಥಾನ ಸಿಗುತ್ತದೆಂಬುದರಲ್ಲಿ ಎರಡು ಮಾತಿಲ್ಲ. ಪ್ರಾಚೀನ ಕರ್ನಾಟಕದ ಸಂಪನ್ನತೆಯ ದೇದಿಪ್ಯ ಮಾನವಾದ ಹೆಗ್ಗುರುತುಗಳನ್ನು ಕಣ್ಣಿಗೆ ಕಟ್ಟುವಂತೆ ಈ ಕೃತಿಯನ್ನು ಡಾ. ಹಂಪನಾ ರಚಿಸಿದ್ದಾರೆ. ನಮ್ಮ ಸ್ಮೃತಿ ಪಥದಿಂದ ಹಾರಿಹೋದ ಅನೇಕ ಅಂಶಗಳನ್ನು ತಿಳಿಸಿಕೊಟ್ಟು, ಸಂಸ್ಕೃತಿಯ ಮೇಲ್ಮೆಯನ್ನು ಮನ-ಮುಟ್ಟುವಂತೆ ಚಿತ್ರಿಸಿದ್ದಾರೆ. ಈ ಮೂಲಕ ನಮ್ಮ ಸಾಂಸ್ಕೃತಿಕ ಚರಿತ್ರೆಗೆ ಒಂದು ಹೊಸ ಆಯಾಮವನ್ನು ನೀಡುವಲ್ಲಿ ಅವರು ಯಶಸ್ವಿಯಾಗಿದ್ದಾರೆ. ಕನ್ನಡದ ಬೆರಳೆಣಿಕೆಯ ಅತ್ಯುತ್ತಮ ಸಂಶೋಧನ ಕೃತಿಗಳಲ್ಲಿ ಒಂದೆಂಬ ಹೆಗ್ಗಳಿಕೆಗೂ 'ಚಂದ್ರಕೊಡೆ' ಪಾತ್ರವಾಗಿದೆ. ಡಾ. ಚಿದಾನಂದ ಮೂರ್ತಿ ಅವರ 'ಹೊಸತು ಹೊಸತು' ಕೃತಿಗೆ ಸಿಕ್ಕಂತೆ ಈ ಕೃತಿಗೂ ಕೇಂದ್ರ ಸಾಹಿತ್ಯ ಆಕಾಡೆಮಿ ಪ್ರಶಸ್ತಿ, ಪಂಪ ಪ್ರಶಸ್ತಿಯಂಥ ಪ್ರತಿಷ್ಠಿತ ಪ್ರಶಸ್ತಿಗಳು ಬರಲಿ ಎಂದು ಹಾರೈಸೋಣ.

**--ಡಾ. ಜಿ. ಎನ್. ಉಪಾಧ್ಯ**
**ಮುಂಬಯಿ**

# ಚಂದ್ರಸಾಗರವರ್ಣಿಯ ಕೃತಿಗಳು

## ಗ್ರಂಥಸಂಪಾದನೆ

| | | |
|---|---|---|
| ಡೆಮ್ಮೈ 1/8 ಆಕಾರ, ಪುಟಗಳು | : | 208+xxxii |
| ಪ್ರಥಮ ಮುದ್ರಣ | : | 1989 |
| ಸಹಸಂಪಾದಕರು | : | ಎಸ್. ಶಿವಣ್ಣ. |
| ಪ್ರಕಾಶಕರು | : | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-560018 |

18ನೆಯ ಶತಮಾನದ ಉತ್ತರಾರ್ಧ ಮತ್ತು 19ನೆಯ ಶತಮಾನದ ಪೂರ್ವಾರ್ಧದಲ್ಲಿ ಜೀವಿಸಿದ್ದ ಚಂದ್ರಸಾಗರವರ್ಣಿ ಕವಿಯ ಹದಿನೆಂಟು ಅಪ್ರಕಟಿತ ಪುಟ್ಟ ಕಾವ್ಯಗಳನ್ನು ಮೊದಲಬಾರಿಗೆ ಇಲ್ಲಿ ಹೊರತರಲಾಗಿದೆ. ಸುಮಾರು 50 ಕಾವ್ಯಗಳನ್ನು ರಚಿಸಿರುವ ಈ ಕವಿಯ ಸ್ವಹಸ್ತಾಕ್ಷರ ಓಲೆಗರಿಗ್ರಂಥಗಳನ್ನೂ ಈ ಕವಿ ಬಳಸುತ್ತಿದ್ದ ಕಂಠವನ್ನೂ, ಈ ಕವಿ ರಚಿಸಿದ ಬಹುವರ್ಣ ತೈಲ ಚಿತ್ರವನ್ನೂ ಪತ್ತೆಮಾಡಿದ ಶ್ರೇಯಸ್ಸು ಹಂಪನಾ ಅವರದು. ಬ್ರಹ್ಮಣಾಂಕ ಮತ್ತು ಚಂದ್ರಸಾಗರವರ್ಣಿ ಎಂಬ ಇಬ್ಬರೂ ಭಿನ್ನರೆಂದು ಕವಿಚರಿತೆಯಲ್ಲಿರುವುದನ್ನು ಸರಿಯಲ್ಲವೆಂದೂ, ಇವೆರಡೂ ಹೆಸರುಗಳ ಕವಿ ಒಬ್ಬನೇ ಎಂದೂ ಸಂಶೋಧಿಸಿ ಅಭಿನ್ನತೆಯನ್ನು ತೋರಿಸಿಕೊಟ್ಟವರೂ ಹಂಪ. ನಾಗರಾಜಯ್ಯ. ಈ ಗ್ರಂಥದ ಆರಂಭದಲ್ಲಿ ಕವಿಯ ಇತಿವೃತ್ತ ಸಂಬಂಧವಾಗಿ 31ಪುಟಗಳ ಪೀಠಿಕೆಯನ್ನು ಬರೆದಿದ್ದಾರೆ.

## ಅಭಿಪ್ರಾಯ:

ಇಬ್ಬರು ಜೊತೆಗೂಡಿ ಈ ಕೃತಿಗಳನ್ನು ಸಂಪಾದಿಸಿದ್ದರೂ, ಇದಕ್ಕೆ ಸುಂದರವಾದ ಮುನ್ನುಡಿ ಮತ್ತು 31 ಪುಟಗಳ ಬಹು ಉಪಯುಕ್ತ ಪೀಠಿಕೆ ಬರೆದವರು ಹಂಪನಾ. ಬ್ರಹ್ಮಣಾಂಕ-ಚಂದ್ರಸಾಗರವರ್ಣಿ ಕವಿಗಳು ಬೇರೆ ಬೇರೆ ಅಲ್ಲ ಎಂಬುದನ್ನು ಸಿದ್ಧಪಡಿಸಲು (ಇದಕ್ಕೂ ಮೊದಲು) ಎರಡು ಲೇಖನ ಬರೆದು ತಿಳಸಿದ್ದಾರೆ. ಹೀಗಾಗಿ ಅವರು ಈ ತೀರ್ಮಾನಕ್ಕೆ ಬರುವಾಗ ಸುದೀರ್ಘವಾಗಿ ಚಿಂತನೆ ಮಾಡಿದ್ದಾರೆಂಬುದು ಸುಸ್ಪಷ್ಟ.

**ಒಬ್ಬ ಕವಿಯ ಜೀವನದ ಹಿನ್ನೆಲೆ-ಪರಿಸರ ತಿಳಿದಾಗ ಕೃತಿ ಬೆಲೆ ಕಟ್ಟಲು ಅನುಕೂಲ ಎಂಬ ಅವರ ಮಾತು ಒಪ್ಪತಕ್ಕದ್ದೇ. * ಒಟ್ಟಿನಲ್ಲಿ ಹಂಪನಾ ಅವರ ಕೃತಿವಿಮರ್ಶೆ ಮಾದರಿಯದೂ, ಕೃತಿನಿಷ್ಠವೂ ಆಗಿ ಓದುಗರನ್ನು ಆಕರ್ಷಿಸುವಂತಿದೆ. ಹಂಪನಾ ಅವರ ತೂಕಬದ್ಧವಾದ ವಿಮರ್ಶೆ, ಅಲ್ಲಲ್ಲಿ ನೀಡಿದ ಸೂಚನೆ, ಪಾಂಡಿತ್ಯ ಪೂರ್ಣ ಬರಹ ನಮಗೆ ಮೆಚ್ಚಿಗೆಯೆನಿಸುತ್ತದೆ.

**--ಡಾ. ಬಿ. ಸಿ. ಜವಳಿ**

## ಚಾರುವಸಂತ

**ದೇಸಿಕಾವ್ಯ**

| | | |
|---|---|---|
| ಡೆಮ್ಮೆ 1/8 ಆಕಾರ, ಪುಟಗಳು | : | xii+256 |
| ಪ್ರಥಮ ಮುದ್ರಣ | : | 2003 |
| ಪ್ರಕಾಶಕರು | : | ಲಕ್ಷ್ಮಿ ಮುದ್ರಣಾಲಯ, ಬೆಂಗಳೂರು |

ಗೌರವಾನ್ವಿತ ವರ್ತಕ ಮನೆತನದ ಚಾರುದತ್ತನು ಸುರಸುಂದರಿಯಾದ ವೇಶ್ಯೆ ವಸಂತತಿಲಕೆಯಲ್ಲಿ ಅನುರಕ್ತನಾಗಿ ಮನೆತನದ ಕೀರ್ತಿಬೀದಿ ಪಾಲಾಗುವ ಹಾಗೆ ನಿಗರ್ತಿಕನಾಗುತ್ತಾನೆ. ಸಾಧ್ವಿ ಪತ್ನಿಯ ಹೃದಯ ವೈಶಾಲ್ಯದಿಂದಾಗಿ ವಸಂತತಿಲಕೆಯನ್ನು ಮಡದಿಯಾಗಿ ಸ್ವೀಕರಿಸುತ್ತಾನೆ. ಶ್ರಮ, ಸಾಹಸ, ನಿಷ್ಠೆಯಿಂದ ದೇಶ-ವಿದೇಶ ಸಂಚರಿಸಿ ಮತ್ತೆ ವಣಿಕ ಶ್ರೇಷ್ಠನಾಗುತ್ತಾನೆಂಬುದು ಈ ಕಾವ್ಯದ ವಸ್ತು. ಕಥೆಯ ಹಂದರ ಮನೋಜ್ಞವಾಗಿದೆ. ಅನಿರೀಕ್ಷಿತ ತಿರುವುಗಳನ್ನು ಪಡೆಯುತ್ತ ಕಥೆ ಕುತೂಹಲಗಳನ್ನು ಅರಳಿಸುತ್ತದೆ. ಅಮರ ಪ್ರೇಮದ ಆಖ್ಯಾನವನ್ನು ಕವಿ ಹಂಪನಾ ಆಡುಮಾತಿನ ಲಯದಲ್ಲಿ ಸೃಷ್ಟಿಸಿದ್ದಾರೆ. ಈ ದೇಸಿ ಕಾವ್ಯವನ್ನು ಕುರಿತು ಪ್ರೊ. ಸಿ. ನಾಗಣ್ಣ, ಪ್ರೊ. ಶಿವರಾಮಯ್ಯ, ಪ್ರೊ. ಡಿ. ಲಿಂಗಯ್ಯ, ಡಾ. ಮಲ್ಲಿಕಾ ಘಂಟಿ, ಚಂದ್ರಶೇಖರ ತಾಳ್ಯ, ಡಾ. ಗುರುಪಾದ ಮರಿಗುದ್ದಿ, ಡಾ. ಶ್ರೀಧರ ಹೆಗಡೆ ಭದ್ರನ್, ಪ್ರೊ. ವಿಜಯಾಸುಬ್ಬರಾಜು, ಡಾ. ಜಿ.ಎನ್. ಉಪಾಧ್ಯ, ಗುಡಿಬಂಡೆ ಪೂರ್ಣಿಮಾ, ಡಾ. ಆರ್. ವಿ. ಭಂಡಾರಿ ಡಾ. ಬಿ.ಎಸ್. ಸ್ವಾಮಿ-ಮೊದಲಾದವರು ವಿಮರ್ಶೆ ಮಾಡಿದ್ದಾರೆ. ಪ್ರಕಟಿತ ವಿಮರ್ಶನ ಲೇಖನಗಳ ಸಂಕಲನ 'ಚಾರು ವಸಂತ ಅವಲೋಕನ' ಕೂಡ ಹೊರಬಂದಿದೆ. (ಸಂ: ಡಾ.ಜಿ.ಎನ್.ಉಪಾಧ್ಯ) (ಸುಮುಖ ಪ್ರಕಾಶನ: 2006)

**ಅಭಿಪ್ರಾಯ:**

ಹಿರಿಯರಾದ ಡಾ. ಹಂಪ. ನಾಗರಾಜಯ್ಯನವರಿಗೆ,

ತುಂಬ ಕೃತಜ್ಞಳಾಗಿ ಈ ಪತ್ರವನ್ನು ಬರೆಯುತ್ತಿದ್ದೇನೆ. ವಾಹನ ಅಪಘಾತವೊಂದರಲ್ಲಿ ಕೂದಲೆಳೆಯ ಅಂತರದಲ್ಲಿ ಪ್ರಾಣಾಪಾಯದಿಂದ ನಾವಿಬ್ಬರೂ ಪಾರಾಗಿದ್ದೇವೆ. ನಿಮ್ಮಂಥ ಸಹೃದಯರ ಸದಾಶಯಗಳು, ಶುಭಾಶೀರ್ವಾದಗಳ ಋಣದಿಂದ ವಿನೀತರೂ ಆಗಿದ್ದೇವೆ. ಈ 'ಕಡ್ಡಾಯ ವಿಶ್ರಾಂತಿ'ಯ ಒಂದು ತಿಂಗಳ ಗೃಹಬಂಧನದಲ್ಲಿರುವಾಗ ನಿಮ್ಮ **'ಚಾರುವಸಂತ'** ಕೃತಿಯನ್ನು ವಿರಾಮವಾಗಿ, ಅಲ್ಲಲ್ಲಿ ವಿಶ್ರಮಿಸುತ್ತ, ಉಸಿರ್ದಾಣಗಳನ್ನು

ಅನುಭವಿಸುತ್ತ ಓದಿದೆ; ಈ ಕಾವ್ಯಾನುಭವಗಳನ್ನು ಯಥಾಶಕ್ತಿಯಾಗಿ ವಸಂತಕುಮಾರರೊಂದಿಗೂ (ಪ್ರೊ. ತಾಳ್ತಜೆ ವಸಂತಕುಮಾರ್) ಹಂಚಿಕೊಂಡೆ; ಹಿಂದೆ ಓದಿದ ನೆನಪನ್ನು ಅವರೂ ಮೆಲುಕಾಡಿಸುವಂತೆ ಆಯಿತು. ಈ ಕಾವ್ಯೋದ್ಯಾನ ವಿಹಾರದಿಂದ ಸಂತೃಪ್ತರಾದೆವು. ಅದನ್ನೇ ನಿಮಗೆ ತಿಳಿಸಬೇಕೆನಿಸಿತು. ಆ ಒತ್ತಡದಿಂದಲೇ ಈ ನಾಲ್ಕು ಸಾಲುಗಳು ಹುಟ್ಟಿದುವು.

ಮನುಷ್ಯ ಸ್ವಭಾವದ ಸೂಕ್ಷ್ಮಗಳನ್ನು ಎಷ್ಟು ಚೆನ್ನಾಗಿ ಅರ್ಥಮಾಡಿಕೊಂಡಿದ್ದೀರಿ. ಸರ್, ನೀವು ಗಳಿಸಿಕೊಂಡ ಹೃದಯ ಶ್ರೀಮಂತಿಕೆ, ಜೀವನಾನುಭವಗಳಿಗೆ ಇದೇನೂ ಹೆಚ್ಚಾಗಿರಲಾರದು. ನಿಮ್ಮ ಕವಿ ಹೃದಯ, ಭಾಷಾ ಸಂಪತ್ತುಗಳು ನಮಗೆ ತಿಳಿದವುಗಳೇ ಆದರೂ ಇಂಥ ಆಪ್ಯಾಯಮಾನವಾದ, ಪರಿಣಾಮಕಾರಿಯಾದ ನಿರೂಪಣೆಯ ಸೊಗಸು, ನಿಮ್ಮಂಥ ಸಂಶೋಧಕರ ಪ್ರವೃತ್ತಿಯವರಿಗೆ ಸಿದ್ಧಿಸಿದುದು ಮಾತ್ರ ಅಚ್ಚರಿಯ ಅಂಶ!

ಇಂಥ ಸುಖವಾದ ಓದಿನ ಸಾಂಗತ್ಯವನ್ನು ಕಲ್ಪಿಸಿದ ಕೈಗಳನ್ನು ನೆನೆಯದಿದ್ದರೆ ಅಪಚಾರವಾದೀತು. ಅದೆಷ್ಟು ದೀರ್ಘಕಾಲ ನಿಮ್ಮೊಳಗಿನ ಕವಿಯನ್ನು ಕಟ್ಟಿ ಹಾಕಿದ್ದಿರಿ ಸರ್. ಚಿಂತಿಲ್ಲ. ಈಗಲಾದರೂ ಬಿಡುಗಡೆಯ ಕಾಲಲಬ್ಧಯಾಯಿತಲ್ಲ. ಮತ್ತೆ ಆ ಕವಿಯನ್ನು ಅಜ್ಞಾತವಾಸಕ್ಕೆ ಕಳುಹಿಸಬೇಡಿರೆಂಬ ಬೇಡಿಕೆಗಳು ನಮ್ಮವು, ನಮ್ಮಂಥ ಹಲವರವು.

**ಡಾ. ಮಣಿಮಾಲಿನಿ**

ಇದು ಡಾ. ಮಣಿಮಾಲಿನಿಯವರ ಕಟ್ಟ ಕಡೆಯ ಬರೆಹ. ಇವರು 16-8-06 ರಂದು ನಿಧನರಾದರು.



ಚಾರುವಸಂತ ಮತ್ತು Jinendra Stavan- ಇವೆರಡೂ ಅದ್ಭುತವಾದ ಕೃತಿಗಳು. 'ಚಾರುವಸಂತ'ವಂತೂ ನಿಮ್ಮನ್ನು ಮಹಾಕವಿಯ ಸ್ಥಾನಕ್ಕೇರುತ್ತಿದೆ. ವೈಜ್ಞಾನಿಕ ಸಂಶೋಧಕನೆಂದು ಇಲ್ಲಿಯವರೆಗೆ ಕನ್ನಡ ಸಾಹಿತ್ಯಕ್ಕೆ ಪರಿಚಿತರಾಗಿದ್ದ ಹಂಪನಾ ಈ ಕಾವ್ಯದ ಕಾರಣವಾಗಿ ಮಹಾಕವಿಯಾಗಿದ್ದಾರೆ. ಇಲ್ಲಿಯ ಕಥೆಯ ಹರವು ದೊಡ್ಡದು. ಹಂಪನಾರ ಕೈಯಲ್ಲಿ ಕಥೆ ನದಿಯ ನಡಿಗೆಯಂತೆ ಸಹಜವಾಗಿ, ಸರಾಗವಾಗಿ, ಒಂದೊಂದು ಸಲ ಭೋರ್ಗರೆಯುತ್ತ ಸಾಗುತ್ತದೆ. ಮನಮೋಹಕ ಶೈಲಿ, ಈ ನಿಮ್ಮ ಶ್ರದ್ಧೆ, ಶಿಸ್ತು ನಾವುಗಳೆಲ್ಲ ನಮ್ಮ ನಮ್ಮ ಕೃತಿ ರಚನೆಗಳಲ್ಲಿ ಅಡವಳಿಸಿಕೊಳ್ಳಬೇಕು.

2003 ಕನ್ನಡಕ್ಕೆ ಒಬ್ಬ ಮಹಾಕವಿಯನ್ನು ನೀಡಿದೆ. ಎರಡು ಪುಸ್ತಕಗಳು ತುಂಬ ಸೊಗಸಾಗಿ ಉಂಟಾಗಿವೆ.

**ಡಾ. ಸರಜೂ ಕಾಟ್ಕರ್**
**ಬೆಳಗಾವಿ**

# ಗುರುಗಳ ಹಾರೈಕೆ

ಪ್ರೊ. ಹಂ. ಪ. ನಾಗರಾಜ್ಯನವರೇ ನಿಮ್ಮನ್ನು ಹಂಪ-ನ ಹಂಪ-ನ ಎಂದು ಕವಿಗಳೆಲ್ಲಾ ಕಾ-ಕಾ ಎನ್ನುತ್ತಿದ್ದಾಗ ನೀವು ಅದೇ ಕಾ-ಕಾ ಶಬ್ದದ ಹಾವಳಿಯಲ್ಲೇ

ಮೊಟ್ಟೆಯೊಡೆದು

ಅದೇ ಕಾಕಾ ಬಣ್ಣ ಕೊಂಚ ಮೈಗಂಟಿದರೂ

ಮುದ್ದಾಗಿಯೇ ಕೆಂಗಣ್ಣಾಗಿ ಕೊಕ್ಕುಪುಕ್ಕ ರೆಕ್ಕೆ ತೋಕೆ ಮಟ್ಟಸವಾಗಿ ಕೊರಳೆತ್ತಿ ಕುಹೂ ಕುಹೂ ಎನ್ನುತ್ತಿದ್ದರೆ

ನನಗೆ

ನೀವು

ಹಂಪ-ನಾ ಹಂಪ-ನಾ

ಎನ್ನುತ್ತಿರುವಂತೆನಿಸುತ್ತಿದೆ!

ನಿಮ್ಮ **ಚಾರುವಸಂತ** ಕಾವ್ಯವನ್ನು ಕನ್ನಡ ನಾಡಿನ ಸುಕವಿಗಳೆಲ್ಲಾ

ವಸಂತ ವಸಂತಕ್ಕೂ

ತಮ್ಮ ಕೊರಳು ಬೆರಳು ಕೊಟ್ಟು ಹಾಡಲಿ. ವೀತರಾಗನೂ ನಿಮ್ಮನ್ನು

ಕಮಲಾ ಹಂಪನಾ ಸಹಿತವಾಗಿ

ರಾಗಭಾವ ರಸಕೊಟ್ಟು ಕಾಪಾಡಲಿ

**ಎಲ್. ಬಸವರಾಜು**

**ವಿ.ಸೂ.: ಪ್ರಸಿದ್ಧ ಉಭಯ ಭಾಷಾಕವಿ ಪ್ರೊ. ಧರಣೇಂದ್ರ ಕುರಕುರಿ ಅವರು ಸಮಗ್ರ 'ಚಾರುವಸಂತ' ಕಾವ್ಯವನ್ನು ಹಿಂದಿ ಭಾಷೆಗೆ ಅನುವಾದಿಸುತ್ತಿದ್ದು ಜನವರಿ 07ರಲ್ಲಿ ಬಿಡುಗಡೆ ಆಗಲಿದೆ.**

# ಚಿನ್ನದ ಗರಿ

**ಅಧ್ಯಕ್ಷ ಭಾಷಣ**

ಡೆಮ್ಮಿ 1/8 ಆಕಾರ, ಪುಟಗಳು : 31+iv
ಪ್ರಥಮ ಮುದ್ರಣ : 1992
ಪ್ರಕಾಶಕರು : ಕೋಲಾರ ಜಿಲ್ಲಾ ಸಾಹಿತ್ಯ ಸಮ್ಮೇಳನ ಸ್ವಾಗತ ಸಮಿತಿ, ಚಿಕ್ಕಬಳ್ಳಾಪುರ

ಚಿಕ್ಕಬಳ್ಳಾಪುರದಲ್ಲಿ 1992ರ ಜನವರಿ 18, 19 ರಂದು ಏರ್ಪಾಟಾಗಿದ್ದ ಕೋಲಾರ ಜಿಲ್ಲೆಯ ಮೂರನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಡಾ. ಹಂಪ. ನಾಗರಾಜಯ್ಯ ಮಾಡಿದ ಭಾಷಣವನ್ನು ಅಲ್ಲಿನ ಸ್ವಾಗತ ಸಮಿತಿಯವರು, ಪ್ರಿನ್ಸಿಪಾಲರಾದ ಡಾ. ನಿಂಗಪ್ಪನವರು, 'ಚಿನ್ನದ ಗರಿ' ಎಂಬ ಹೆಸರಿಂದ ಪ್ರಕಟಿಸಿದ್ದಾರೆ. ಇದರಲ್ಲಿ ಇಡೀ ಕೋಲಾರ ಜಿಲ್ಲೆಯ ಚಾರಿತ್ರಿಕ, ಸಾಂಸ್ಕೃತಿಕ, ಭೌತಿಕ, ಸಾಹಿತ್ಯಕ ಆಯಾಮಗಳನ್ನು ಸಂಗ್ರಹವಾಗಿ ಸಮೀಕ್ಷಿಸಿದೆ.

ಕನ್ನಡಿಗರು - ತೆಲುಗರು ಶತಮಾನಗಳಿಂದ ಸೌಹಾರ್ದಯುತವಾಗಿ ಈ ಜಿಲ್ಲೆಯಲ್ಲಿ ಬಾಳುತ್ತಿರುವುದು ಅನ್ಯ ಭಾಷಿಕರಿಗೆ ಹೇಗೆ ಬಾಳಬೇಕೆಂಬುದಕ್ಕೆ ಮಾದರಿಯೆಂದು ಈ ಪುಸ್ತಕ ಸಾರಿದೆ. ಕಾವೇರಿ ನೀರಿನ ಸಮಸ್ಯೆಯಾಗಿ ಹುಟ್ಟಿ ಬೃಹದಾಕಾರವಾಗಿ ಬೆಳೆದು ಆಸ್ತಿಪಾಸ್ತಿ ನಷ್ಟ ಲೂಟಿಗಳಿಗೆ ಕಾರಣವಾದ 'ಬಂದ್' ವಿಚಾರ, ಡಾ. ರಾಜಕುಮಾರರು ರಾಜಕೀಯವನ್ನು ಪ್ರವೇಶಿಸದೆ ಇರುವುದರ ವಿವೇಕ- ಇವನ್ನೂ ದೀರ್ಘವಾಗಿ ಈ ಅಧ್ಯಕ್ಷ ಭಾಷಣದಲ್ಲಿ ವಿಶ್ಲೇಷಿಸಲಾಗಿದೆ.

ಸಂ.

# ಚಿಕ್ಕಮಗಳೂರು ಸಾಹಿತ್ಯ ಸಮ್ಮೇಳನ

**ಸಂಪಾದಕರು**

| | | |
|---|---|---|
| ಡೆಮ್ಮೈ | : | 1/8 ಆಕಾರ, ಪುಟಗಳು-440+viii |
| ಪ್ರಥಮ ಮುದ್ರಣ | : | 1981 |
| ಪ್ರಕಾಶಕರು | : | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-18. |

1981ರ ಮಾರ್ಚಿ 13, 14, 15 ರಂದು ಜಿಲ್ಲಾ ಕೇಂದ್ರವಾದ ಚಿಕ್ಕಮಗಳೂರು ನಗರದಲ್ಲಿ ನಡೆದ ಅಖಿಲ ಭಾರತ 53ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಎಲ್ಲ ಗೋಷ್ಠಿಗಳ ಪ್ರಬಂಧಗಳ, ಕವನಗಳನ್ನು ಕೆಲವು ಪ್ರಾತಿನಿಧಿಕ ಚಿತ್ರಗಳೊಡನೆ ಅಳವಡಿಸಲಾಗಿದೆ. ಈ ಸಮ್ಮೇಳನದ ಅಧ್ಯಕ್ಷರಾಗಿದ್ದವರು ಪು. ತಿ. ನರಸಿಂಹಾಚಾರ್. ಸಮ್ಮೇಳನದಲ್ಲಿ ಏರ್ಪಾಟಾಗಿದ್ದ ನಾಟಕ ಗೋಷ್ಠಿ, ಸಾಹಿತ್ಯ ಗೋಷ್ಠಿ, ದಲಿತ ಸಾಹಿತ್ಯಗೋಷ್ಠಿ, ನಾನೇಕೆ ಈ ಪ್ರಕಾರದಲ್ಲಿ ಬರೆಯುತ್ತೇನೆ, ಮುಂತಾದ ಗೋಷ್ಠಿಗಳ ಪ್ರಬಂಧಗಳು ಇಲ್ಲಿ ಸೇರ್ಪಡೆಯಾಗಿವೆ.

**ಅಭಿಪ್ರಾಯ:**

ಚಿಕ್ಕಮಗಳೂರು ಸಾಹಿತ್ಯ ಸಮ್ಮೇಳನ ಸುಗಮವಾಗಿ ನೆರವೇರಿದ್ದಕ್ಕೆ ಸಾಕ್ಷಿಗಳಿವೆ. ಅದರೂ ಆಕ್ಷೇಪಣೆಗಳಿಗೆ ಎಂದೂ ಬರವಿಲ್ಲ. ಈ ಬಗೆಗೆ ಸ್ವಾಗತ ಭಾಷಣ ಮಾಡುತ್ತ ಹಂಪನಾ ಅವರು ಆಡಿರುವ ನುಡಿಗಳು ಗಮನಾರ್ಹವಾಗಿವೆ. ಇಂಥ ದೂರು ದೂಷಣೆ, ಅಭಿನಂದನೆ ಸಂತೃಪ್ತಿ ಅತೃಪ್ತಿಗಳು ಉದ್ದಕ್ಕೂ ವ್ಯಕ್ತವಾಗುತ್ತಿದ್ದರೂ ಬಿಡದೆ, ಸಾಹಿತ್ಯ ಸಮ್ಮೇಳನಗಳನ್ನು ಅಚ್ಚುಕಟ್ಟಾಗಿ ನಡೆಸಿಕೊಂಡು ಬಂದ ಕೀರ್ತಿಶಾಲಿ ಹಂಪನಾ. ** ಸರ್ವಾಂಗ ಸುಂದರವಾಗಿ, ವಿಚಾರ ಪ್ರಚೋದಕ ವಿಷಯಗಳ ರಸಬುತ್ತಿಯಾಗಿರುವ ಚಿಕ್ಕಮಗಳೂರು ಸಾಹಿತ್ಯ ಸಮ್ಮೇಳನ ಕುರಿತ ಸಂಪುಟವು ಬೆಲೆಯುಳ್ಳ ಕೃತಿಯಾಗಿದೆ. ಇದರ ಲೇಖನಗಳನ್ನು ಓದುತ್ತ ಪರ್ಯಾಲೋಚಿಸಿದಂತೆಲ್ಲ ನಾವೂ ಆ ಸಮ್ಮೇಳನದಲ್ಲಿ ಓಡಾಡುತ್ತ ಪಾಲ್ಗೊಂಡ ಅನುಭವ ಉಂಟಾಗುತ್ತದೆ.

**--ಡಾ. ನಂ. ತಪಸ್ವೀಕುಮಾರ್**

# ಜನಪದ ಕಲಾವಿದರ ಸೂಚಿ

ಸಂಪಾದಕರು

| | | |
|---|---|---|
| ಡೆಮ್ಮೈ 1/8 ಆಕಾರ, ಪುಟಗಳು | : | 776 |
| ಪ್ರಥಮ ಮುದ್ರಣ | : | 1982 |
| ಪ್ರಕಾಶಕರು | : | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-18. |

ಜನಪದ ಕಲೆಗಳ ಸಮಗ್ರ ಮಾಹಿತಿಯನ್ನು ಕರ್ನಾಟಕದ ಎಲ್ಲ ಭಾಗಗಳಿಂದ 32 ಜನ ಜಾನಪದ ಸ್ನಾತಕೋತ್ತರ ಪದವೀಧರರು ಕ್ಷೇತ್ರಕಾರ್ಯ ಮಾಡಿ 9500 ಹಳ್ಳಿಗಳಿಗೆ ಹೋಗಿ 10.000 ಕಲಾತಂಡಗಳನ್ನು ಗುರುತಿಸಿ, 145 ಜನಪದ ಕಲೆಗಳ ಬಗೆಗೆ ಮಾಹಿತಿ ಸಂಗ್ರಹಿಸಿದರು. ಈ ಸಮಗ್ರ ಮಾಹಿತಿ'ಕರ್ನಾಟಕದ ಜನಪದ ಕಲೆಗಳು' ಎಂದು ಪ್ರಕಟಿತವಾಯಿತು. ಆದರೆ ಇಷ್ಟಕ್ಕೆಲ್ಲ ಕಾರಣರಾದ ಜನಪದ ಕಲಾವಿದರ ಹೆಸರುಗಳು ಅಜ್ಞಾತವಾಗಿದ್ದುವು. ಜನಪದ ಕಲಾವಿದರ, ಜನಪದ ಕಲೆಗಳ ವಿಳಾಸಕ್ಕಾಗಿ ಸಾರ್ವಜನಿಕರು, ಜಾನಪದಾಸಕ್ತರು, ಸಿನಿಮಾ ನಿರ್ದೇಶಕರು ಹಂಪನಾರವರನ್ನು ಕಂಡು ಇಂತಹ ಪುಸ್ತಕಕ್ಕೆ ಒತ್ತಾಯಿಸಿದರು. ಜನಪದರ ಒತ್ತಾಯ ಒತ್ತಾಸೆಗಳ ಫಲವಾಗಿ ಈ ಪುಸ್ತಕ ಪ್ರಕಟವಾಗುವುದು ಸಾಧ್ಯವಾಯಿತು.

ಅನೇಕ ಜನಪದ ಕಲಾವಿದರ ವಿಳಾಸಗಳಲ್ಲದೆ, ಇಲ್ಲಿರುವ ಕಲಾವಿದರು ಬರೀ ಜನಪದ ಕಲೆಗಳ ಬಗೆಗೆ ಮಾಹಿತಿ ಕೊಡುವವರಷ್ಟೇ ಆಗಿರದೆ ಜಾನಪದದ ವ್ಯಾಪ್ತಿಯಲ್ಲಿ ಬರುವ ಅನೇಕ ವಿಷಯಗಳ ಬಗೆಗೆ ಅಧಿಕೃತ ಮಾಹಿತಿಯನ್ನು ನೀಡಬಲ್ಲವರೂ ಆಗಿದ್ದಾರೆ. ಜಾನಪದ ಚಟುವಟಿಕೆಗಳು ಭರದಿಂದ ಸಾಗುತ್ತಿರುವ ಇಂದಿನ ಸಂದರ್ಭದಲ್ಲಿ ಈ ವಿಳಾಸ ಸೂಚಿಯ ಪುಸ್ತಕ ತುಂಬ ಸಹಾಯವಾಗಿದೆಯೆಂದು ಮೆಚ್ಚುಗೆ, ಕೃತಜ್ಞತೆ ಸಲ್ಲುತ್ತಿದೆ. ಈ ಪುಸ್ತಕವನ್ನು ಜಾನಪದ ಕ್ಷೇತ್ರ ಕಾರ್ಯದಲ್ಲಿ ತೊಡಗಿಕೊಳ್ಳುವವರು ಇಂದೂ ಬಳಸುತ್ತಿರುವುದು ಗಮನಾರ್ಹ.

ಸಂ.

# ಜಯನೃಪಕಾವ್ಯ ಸಂಗ್ರಹ

**ಗ್ರಂಥ ಸಂಪಾದನೆ: ಷಟ್ಪದಿಕಾವ್ಯ**

ಕ್ರೌನ್1/8 ಆಕಾರ, ಪುಟಗಳು : 80+Li=131

ಪ್ರಥಮ ಮುದ್ರಣ : 1967

ಪ್ರಕಾಶಕರು : ಹರ್ಷವರ್ಧನ ಪ್ರಕಾಶನ, ಬೆಂಗಳೂರು.

ಮೂರನೆಯ ಮಂಗರಸ ಕವಿ ವಿರಚಿತ ಪರಿವರ್ಧಿನಿ ಷಟ್ಪದಿ ಕಾವ್ಯವಾದ ಜಯನೃಪಕಾವ್ಯದ ಸಂಗ್ರಹವಿದು. 51 ಪುಟಗಳ ವಿಸ್ತಾರವಾದ ಕವಿ ಕಾವ್ಯ ಪರಿಚಯ, ವಿಮರ್ಶೆ, ಕ್ಲಿಷ್ಟ ಪದಕೋಶ, ಜೈನ ಪಾರಿಭಾಷಿಕ ಪದಕೋಶ ಮತ್ತು ವ್ಯಕ್ತಿ ನಾಮ ಸೂಚಿ ಇದೆ. 16 ಸಂಧಿ ಹಾಗೂ ಸುಮಾರು 1100 ಷಟ್ಪದಿ ಪ್ರಮಾಣದ ಮೂಲ ಕಾವ್ಯವನ್ನು 236 ಪದ್ಯಗಳಿಗೆ ಮೂಲ ಕಥಾ ನಿರೂಪಣೆಗೆ ಭಂಗ ಬಾರದಂತೆ ಸಂಗ್ರಹಿಸಿರುವುದು ಗಮನಾರ್ಹ ಅಂಶವಾಗಿದೆ.

**ಅಭಿಪ್ರಾಯಗಳು:**

1. ಈ ಸಂಗ್ರಹದ ವೈಶಿಷ್ಟ್ಯವೆಂದರೆ ಮಂಗರಸನ ಕೃತಿಗಳ ಅಧ್ಯಯನದ ವ್ಯಾಪ್ತಿಯನ್ನೊಳಗೊಂಡ ಮೌಲಿಕವಾದ ವಿಮರ್ಶೆ. *ಇಲ್ಲಿನ ವಿಮರ್ಶೆಯ ವ್ಯಾಪ್ತಿ ಮಂಗರಸನ ಎಲ್ಲ ಕೃತಿಗಳಿಗೆ ಅನ್ವಯವಾಗುವಂತಹುದಾದರೂ ಸಂಗ್ರಹಗಳಿಗೆ ಇಂತಹ ಮೌಲಿಕ ವಿಮರ್ಶೆ ಅಗತ್ಯವೆನಿಸುತ್ತದೆ, ಅಂದಾಗ ಮಾತ್ರ ಒಬ್ಬ ಕವಿಯ ಸಮಗ್ರ ಪರಿಚಯ ಸಹೃದಯರಿಗೆ ಸಾಧ್ಯವಾಗುತ್ತದೆ.

*ಸೂಪಶಾಸ್ತ್ರದ ಶೈಲಿಯ ನಯವಂತಿಕೆಯನ್ನು ಗುರುತಿಸಿದ್ದಲ್ಲದೆ ಅಪೂರ್ವ ಪದಪ್ರಯೋಗ ಸಂಗತಿಯನ್ನು ಉದಾಹರಣೆ ಸಹಿತ ವಿವರಿಸಿದ್ದು ಸೂಕ್ತವಾಗಿದೆ. ** ಸಂಗ್ರಹದಲ್ಲಿ ನಿರೀಕ್ಷಿಸಿದ ಪಾಠಶುದ್ಧಿ ಮತ್ತು ಕಾವ್ಯ ಶಿಲ್ಪ ಕೈಗೂಡಿದೆ. ಸಾವಿರಕ್ಕೂ ಮಿಕ್ಕ ಪದ್ಯಗಳಿರುವ ಕಾವ್ಯದ ವ್ಯಾಪ್ತಿಯನ್ನು ಶುಷ್ಕವರ್ಣನೆ, ಸುದೀರ್ಘ ಘಟನೆ ಮತ್ತು ಕೆಲವು ಪ್ರಾರ್ಥನಾ ಪದ್ಯಗಳನ್ನು ಕೈ ಬಿಟ್ಟು ಒಂದು ಸಂಕ್ಷಿಪ್ತ ರೂಪಕ್ಕೆ ಅಳವಡಿಸಲಾಗಿದೆ. ೧೨ ಅಧ್ಯಾಯಗಳನ್ನಾಗಿ ವಿಂಗಡಿಸಿ, ಒಂದೊಂದಕ್ಕೂ ಸೂಕ್ತ ಹೆಸರನ್ನು ಕಾವ್ಯ ಭಾಗದಂದಲೇ ಆಯ್ದು ಕೊಟ್ಟಿದ್ದಾರೆ.

**--ಚಂದ್ರ ಗೌಡ ಕುಲಕರ್ಣಿ**

2. ಅನೇಕ ಅಪ್ರಕಟಿತ ಆಕರಗಳ, ಅಪ್ರಕಟಿತ ಕೃತಿಗಳ ಅಧ್ಯಯನದ ಫಲವಾಗಿ ರೂಪಿಸಿರುವ ಸಮಗ್ರ ಪೀಠಿಕೆ ಮೂರನೆಯ ಮಂಗರಸನ ಬಗ್ಗೆ ಅಪೂರ್ವ ಮಾಹಿತಿ ನೀಡುವ ಬರಹ. ಕವಿಯ ಪರಿಚಯ, ಆತನ ಪ್ರಕಟಿತ ಅಪ್ರಕಟಿತ ಕೃತಿಗಳ ಪರಿಚಯ ಇಲ್ಲಿ ದೊರೆಯುತ್ತದೆ. ಗ್ರಂಥ ಸಂಪಾದನೆಯನ್ನು ಹೇಗೆ ಮಾಡಬೇಕೆಂಬುದಕ್ಕೆ ಅನುಕರಣೀಯವಾಗಿರುವಂತೆ ರೂಪಿಸಲಾಗಿರುವ ಜಯನೃಪಕಾವ್ಯ ಸಂಗ್ರಹವು ಕನ್ನಡ ಸಾಹಿತ್ಯಕ್ಕೆ ಡಾ. ಹಂಪನಾ ನೀಡಿರುವ ಅಮೂಲ್ಯ ಕೊಡುಗೆ.

**--ಸರಿತಾ ಜ್ಞಾನಾನಂದ.**

# ಜಾನಪದ ಅಧ್ಯಯನ ವಿಚಾರ ಸಂಕಿರಣ

**ಸಂಪಾದಕರು**

| | | |
|---|---|---|
| ಡೆಮ್ಮೈ 1/8 ಆಕಾರ, ಪುಟಗಳು | : | 127+iv |
| ಪ್ರಥಮ ಮುದ್ರಣ | : | 1980 |
| ಪ್ರಕಾಶಕರು | : | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು - 560018. |

12-09-1980ರಂದು ಕನ್ನಡ ಸಾಹಿತ್ಯ ಪರಿಷತ್ತು ಏರ್ಪಡಿಸಿದ್ದ ಒಂದು ವಿಚಾರಸಂಕಿರಣದ ಮೂರು ಗೋಷ್ಠಿಗಳಲ್ಲಿ ವಿದ್ವಾಂಸರು ಮಂಡಿಸಿದ ಪ್ರಬಂಧಗಳ ಸಂಕಲನ ಈ ಪುಸ್ತಕ. ಇದರಲ್ಲಿ ಆಚರಣೆಯ ಕುಣಿತ ಮತ್ತು ಬಯಲಾಟ, ಮನೋವೈಜ್ಞಾನಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಆಟಗಳು, ಕನ್ನಡ ಜನಪದ ಪುರಾಣಗಳ ಅಧ್ಯಯನ ಕೆಲವು ಚಿಂತನೆಗಳು, ಜಾನಪದ ಮತ್ತು ಮನೋವಿಜ್ಞಾನ, ಜಾನಪದ ಕಥೆಗಳು- ಮಾನವ ಶಾಸ್ತ್ರ, ಜಾನಪದ ವಿಜ್ಞಾನ ಮತ್ತು ಕನ್ನಡ ಜಾನಪದ, ಮಾನವಶಾಸ್ತ್ರ ಮತ್ತು ಜಾನಪದ, ಜನಪದ ಪುರಾಣಗಳು ಮತ್ತು ಆಚರಣೆಗಳು- ಎಂಬ ಎಂಟು ಪ್ರಬಂಧಗಳಿವೆ. ಇವನ್ನು ಕ್ರಮವಾಗಿ ಡಾ. ಚಂದ್ರಶೇಖರ ಕಂಬಾರ, ಟಿ. ಎಸ್. ಸತ್ಯನಾಥ, ಎಂ. ಎನ್. ಮಾಡ್ತ, ಜೀಶಂಪ, ತೀ. ನಂ. ಶಂಕರನಾರಾಯಣ ಮಂಡಿಸಿದ್ದಾರೆ.

**ಅಭಿಪ್ರಾಯ:**

ಈ ಕೃತಿ ಜಾನಪದ ವಿದ್ಯಾರ್ಥಿಗಳಿಗೆ ಬಹು ಪ್ರಯೋಜನಕಾರಿಯಾಗಿದೆ. ಜಾನಪದ ಸಾಹಿತ್ಯದ ವ್ಯಾಪ್ತಿಯನ್ನು ಬಹಿರಂಗ ಪಡಿಸುತ್ತದೆ. ಸಂಪಾದಕರಾದ ಹಂಪನಾ ಅವರು ಒಂದು ಮೌಲಿಕವಾದ ವಿನೂತನ ವಿಚಾರಧಾರೆಯಿಂದ ಕೂಡಿದ ಅಧಿಕೃತ ಕೃತಿಯೊಂದನ್ನು ಕನ್ನಡ ಜಾನಪದಕ್ಕೆ ಕೊಡಮಾಡಿದ್ದಾರೆ.

**--ಡಾ. ಎಸ್. ಎಸ್. ಭೂಸರೆಡ್ಡಿ**

# ಜೈನ ಕಥಾ ಕೋಶ

**ಸಂಪಾದಕರು**

| | | |
|---|---|---|
| ಕ್ರೌನ್ 1/4 ಆಕಾರ, ಪುಟಗಳು | : | xiv+808 |
| ಪ್ರಥಮ ಮುದ್ರಣ | : | 1997 |
| ಪ್ರಕಾಶಕರು | : | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ಸಹ ಲೇಖಕರು | : | ಪ್ರೊ. ಕಮಲಾ ಹಂಪನಾ |
| | | ಡಾ. ಪದ್ಮಪ್ರಸಾದ್ |
| | | ಡಾ. ಸರಸ್ವತಿ ವಿಜಯಕುಮಾರ್ |

ಭಾರತೀಯ ಕಥಾ ಸಾಹಿತ್ಯದಲ್ಲಿ ಸಿಂಹಪಾಲು ಸಂದಿರುವುದು ಜೈನರ ಮತ್ತು ಬೌದ್ಧರ ಕಥೆಗಳ ರಾಶಿಗೆ. ಅಪಭ್ರಂಶ, ಅರ್ಧಮಾಗಧಿ, ಶೌರಸೇನೀ, ಮಹಾರಾಷ್ಟ್ರೀ-ಪ್ರಾಕೃತ ಭಾಷೆಗಳಲ್ಲಿ ಸಮೃದ್ಧವಾಗಿರುವ ಕಥೆಗಳು ಲೋಕಸಾಹಿತ್ಯದ ಪ್ರತೀಕ, ಮನೋಜ್ಞ ಚಿತ್ರಗಳಿರುವ ಜೀವ ಸೃಷ್ಟಿಯನ್ನು ಕುರಿತು ಬರೆದ ಕಥೆಗಳು ಅದ್ಭುತವೆನಿಸಿವೆ. ಕನ್ನಡ ಕಥಾ ಸಾಹಿತ್ಯದಸಂದರ್ಭದಲ್ಲಂತೂ ನಿರ್ದಿಷ್ಟಬಂಧದ ಆವಿಷ್ಕಾರಗಳಲ್ಲಿ ರೂಪಧಾರಣೆ ಮಾಡಿರುವ ಜೈನಕಥಾಸಾಹಿತ್ಯದ ಆಯಾಮ ವ್ಯಾಪ್ತವೂ ಆಪ್ತವೂ ಆಗಿದೆ. ಸಂಪಪೂರ್ವ ಕಾಲಘಟ್ಟದಲ್ಲಿ ಹುಟ್ಟಿ ಬೆಳೆದ ಕಥೆಗಳು ಕನ್ನಡದ ಅರಿವಿಗೆ ದಾರಿ ತೋರಿವೆ. ಕನ್ನಡ ಭಾಷಾ ಸಾಹಿತ್ಯವನ್ನು, ಕಥನ ಪರಂಪರೆಯನ್ನು ಪ್ರಮಾಣಿಕರಿಸುವ ಜವಾಬುದಾರಿಯನ್ನು ಈ ಕಥೆಗಳು ನಿರ್ವಹಿಸಿವೆ. ಉಪಲಬ್ಧ ಪ್ರಾಕೃತ ಕಥಾ ಸಾಹಿತ್ಯ ಸಾಗರೋಪಮವಾಗಿದೆ. ಕಥೆಗಳ ಆ ಕಡಲಿನಿಂದ ಇಲ್ಲಿ ಮುನ್ನೂರಕ್ಕೂ ಹೆಚ್ಚು ಕಥೆಗಳನ್ನು ಕನ್ನಡಿಸಿಕೊಡಲಾಗಿದೆ. ಇವುಗಳಲ್ಲಿ ನೂರಾರು ಕಥೆಗಳು ಹೊಚ್ಚ ಹೊಸವು, ಮೊದಲನೆಯ ಬಾರಿಗೆ ಕನ್ನಡಕ್ಕಿಳಿದಿವೆ.

**ಅಭಿಪ್ರಾಯ:**

"ಸಮಗ್ರ ಭಾರತೀಯ ಸಾಹಿತ್ಯ ಹಾಗೂ ಕಥಾ ಪರಂಪರೆಯ ಸಂದರ್ಭದಲ್ಲಿ ಜೈನ ಕಥಾಕೋಶವು ಮಹತ್ವಪೂರ್ಣವಾದ ಕೊಡುಗೆ. ಕನ್ನಡ ಸಾಹಿತ್ಯ ಕಾವೇರಿಗೆ ಸಂಗಮಿಸಬೇಕಾಗಿದ್ದ ಕಥಾವಾಹಿನಿಯೊಂದರ ಬಹುಕಾಲದ ಅಗತ್ಯವನ್ನು ಸಮರ್ಥವಾಗಿ ಪೂರೈಸಿರುವ ಸಾರ್ಥಕ ಯೋಜನೆ. ಈ ಕಥಾಕೋಶದಲ್ಲಿರುವ ಸುಮಾರು ನಾನ್ನೂರು ಕಥೆಗಳಲ್ಲಿ ಇನ್ನೂರೈವತ್ತು ಕಥೆಗಳು ಇದೇ ಮೊತ್ತ ಮೊದಲನೆಯ ಸಲ ಕನ್ನಡದಲ್ಲಿ ಕಾಣಿಸಿಕೊಳ್ಳುತ್ತಿದೆ ಎಂಬುದು ಈ ಕಥಾಕೋಶದ ಅಪೂರ್ವತೆಯನ್ನು ಹೇಳುತ್ತದೆ. ನಮ್ಮ ಸಾಂಸ್ಕೃತಿಕ ಅರಿವನ್ನು ಹೆಚ್ಚಿಸಿಕೊಳ್ಳುವುದಕ್ಕೆ ಈ ಬಗೆಯ ಆದಾನ - ಪ್ರದಾನಗಳು ಆರೋಗ್ಯಕರ ಹೆಜ್ಜೆಗಳು. ಸಮಜೋ-ಧಾರ್ಮಿಕ ಅಧ್ಯಯನಕ್ಕೂ ಆಕರ ಸ್ವರೂಪಿಯಾಗಿರುವ ಪ್ರಾಕೃತ ಸಾಹಿತ್ಯ ಭಂಡಾರದ ಈ ಕಥಾ ರತ್ನಧಾರೆಯನ್ನು ಕನ್ನಡಕ್ಕೆ ಹರಿಸಿದ ಭಗೀರಥ ಹಂಪನಾ ಅಭಿನಂದನೆಗೆ ಮಾತ್ರವಲ್ಲ, ಕನ್ನಡಿಗರ ಕೃತಜ್ಞತೆಗೂ ಪಾತ್ರರಾಗಿದ್ದಾರೆ. ಕನ್ನಡ ವಿಶ್ವವಿದ್ಯಾಲಯ ಹಮ್ಮಿಕೊಂಡು ಪೂರೈಸಿದ ಶ್ರೇಷ್ಠ ಯೋಜನೆಗಳಲ್ಲಿ ಜೈನ ಕಥಾಕೋಶ ಶೃಂಗಪ್ರಾಯವಾದುದು."

**-ಪ್ರೊ. ಚಂದ್ರಶೇಖರ ಕಂಬಾರ**

**'ಮುನ್ನುಡಿ'ಯಿಂದ**

# ಜೈನ ಕಥೆಗಳ ಮಹಾಕೋಶ

'ಭಾರತೀಯ ಸಾಹಿತ್ಯ ಪ್ರಪಂಚಕ್ಕೆ ಜೈನರ ಕೊಡುಗೆ ಅಮೋಘವಾದದ್ದು. ಜೈನಧರ್ಮ, ತತ್ವಜ್ಞಾನ, ಆಗಮಶಾಸ್ತ್ರ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಜೈನರು ಅಪಾರವಾದ ಕೃತಿರಾಶಿಯನ್ನು ನಿರ್ಮಿಸಿ, ಭಾರತಿಯ ಸಾಹಿತ್ಯ ಸಂಸ್ಕೃತಿಗೆ ಮಹತ್ತರ ಕಾಣಿಕೆ ಸಲ್ಲಿಸಿದ್ದಾನೆ. ಕನ್ನಡದಲ್ಲಿ ಸಾಹಿತ್ಯ ರಚನೆಗೆ ಶ್ರೀಕಾರ ಹಾಕಿದ ಜೈನರು ಸಾವಿರಾರು ವರ್ಷಗಳಲ್ಲಿ ಬಹುದೊಡ್ಡ ಸಾಹಿತ್ಯ ಪರಂಪರೆಯನ್ನು ನಿರ್ಮಿಸಿದ್ದಾರೆ. ಜೈನ ಸಾಹಿತ್ಯದ ಬೃಹತ್ ಕೃತಿಗಳನ್ನು ಸಂಪಾದಿಸಿ ಕನ್ನಡ ಲೋಕಕ್ಕೆ ನೀಡುತ್ತಿರುವ ಡಾ. ಹಂಪನಾ ಅವರು ಪ್ರಾಚೀನ ಗ್ರಂಥ ಸಂಪಾದಕರಾಗಿ ಅಮೂಲ್ಯ ಕಾರ್ಯ ಮಾಡಿದ್ದಾರೆ. 'ಸಾಳ್ವಭಾರತ', 'ನಾಗಕುಮಾರ ಷಟ್ಪದಿ', 'ಶಾಂತಿಪುರಾಣ', 'ವಡ್ಡಾರಾಧನೆ', ಧನ್ಯಕುಮಾರ ಚರಿತೆ ಮೊದಲಾದ ಕಥನ ಕಾವ್ಯಕೃತಿಗಳನ್ನು ಸಂಪಾದಿಸಿಕೊಟ್ಟ ಜೈನ ಸಾಹಿತ್ಯ ವಿದ್ವಾಂಸರಾದ ಡಾ,. ಹಂಪನಾ ಅವರು ಕನ್ನಡ ವಿದ್ವತ್ ಲೋಕ ಬೆರಗು ಪಡುವಂತೆ ಕಾರ್ಯ ಮಾಡಿದ್ದು ಇದೀಗ ಅವರ 'ಜೈನಕಥಾಕೋಶ'ಬೃಹತ್ ಗ್ರಂಥ ಪ್ರಕಟವಾಗಿದೆ.

ಭಾರತೀಯ ಸಾಹಿತ್ಯದಲ್ಲಿ ಜೈನ ಕಥೆಗಳು ಸಂಖ್ಯೆ ಹಾಗೂ ಸತ್ವದ ದೃಷ್ಟಿಯಿಂದ ವೈವಿಧ್ಯಮಯವಾಗಿದೆ. ಅರ್ಧಮಾಗಧಿ, ಅಪಭ್ರಂಶ ಶೌರಸೇನಿ ಪ್ರಾಕೃತ ಭಾಷೆಗಳಲ್ಲಿರುವ ಆಗಮ ಹಾಗೂ ಆಗಮೇತರ ಕೃತಿರಾಶಿಯನ್ನು ಅಭ್ಯಸಿಸಿ ಅವುಗಳಲ್ಲಿರುವ ಕಥಸಾಹಿತ್ಯವನ್ನು, ಕನ್ನಡ ಕಥಾಸಾಹಿತ್ಯವಾಹಿನಿಗೆ ಸೇರಿಸಿ ನಾಲ್ಕು ನೂರಕ್ಕೂ ಹೆಚ್ಚು ಕಥೆಗಳ ಮಹಾಕೋಶವನ್ನು ಕನ್ನಡಿಗರಿಗೆ ಒದಗಿಸಿದ ಡಾ. ಹಂಪನಾ ಮಹತ್ವದ ಕಾರ್ಯ ಮಾಡಿದ್ದಾರೆ. ಭಾರತೀಯ ಜೈನ ಕಥಾ ಸಾಹಿತ್ಯದಲ್ಲಿಯ ಮೂರು ನೂರಕ್ಕೂ ಹೆಚ್ಚು ಹೊಸ ಕಥೆಗಳನ್ನು ಕನ್ನಡಕ್ಕೆ ತರುವದರ ಜೊತೆಗೆ ಹಳೆಗನ್ನಡದಲ್ಲಿರುವ ನೂರಕ್ಕೂ ಹೆಚ್ಚು ಕಥೆಗಳನ್ನು ಹೊಸಗನ್ನಡಕ್ಕೆ ತಂದು ಕಥೆಗಳ ದೊಡ್ಡ ಭಂಡಾರವನ್ನೇ ತೆರೆದು ತೋರಿಸುವ ಈ ಸಾಹಸ ಸ್ತುತ್ಯವಾದುದು. ಇದರಲ್ಲಿ ಡಾ. ಹಂಪನಾ ಅವರ ವಿದ್ವತ್ತು, ಪ್ರತಿಭೆ, ಪಾಂಡಿತ್ಯ, ನಾಲ್ಕು ದಶಕಗಳ ಜೈನ ಸಾಹಿತ್ಯದ ಅಧ್ಯಯನ ಗೋಚರವಾಗುತ್ತದೆ.

ಜೈನ ಕಥಾ ಪರಂಪರೆ ಪ್ರೇರಣೆ ಪ್ರಭಾವ ಎಂಬ 102ಪುಟಗಳ ವಿದ್ವತ್‌ಕಥನ ಸಮೀಕ್ಷೆ ಭಾರತೀಯ ಜೈನ ಕಥಾ ಸಾಹಿತ್ಯದ ಬಗೆಗೆ ಬೆಳಕು ಚೆಲ್ಲುತ್ತದೆ. ಜೈನ ಕಥಾ ಸಾಹಿತ್ಯ ಅದರ ಹಿನ್ನೆಲೆಯಾಗಿ ನಿಂತ ಆಗಮಸಾಹಿತ್ಯ, ಕತೆಗಳ ಆಶಯ ಪರಂಪರೆ ಮತ್ತು ಇತಿಹಾಸ, ತ್ರಿಷಷ್ಟಿ ಶಲಾಕಾಪುರುಷ ಚರಿತ, ಆರಾಧನಾ ಕಥಾಕೋಶ ವಣಿಜರ ಪ್ರಪಂಚ ರೂಪಕ ಕಥೆಗಳ ವಸ್ತು ವಿಷಯವನ್ನು ಡಾ. ಹಂಪನಾ ಅವರು ಸಂಶೋಧನೆ ವಿಚಾರಗಳೊಂದಿಗೆ ಮಂಡಿಸಿದ್ದಾರೆ. ಜೈನ ಕಥೆಗಳ ಕಥನಕಾರರು, ಅವುಗಳ ಆಕರ ಸಾಮಗ್ರಿ, ಶಿಷ್ಟ ಹಾಗೂ ಜಾನಪದ ಮೂಲಗಳನ್ನು ನೋಡುವಾಗ ಈ ಕಥ'ನ ಮಹಾಸ್ರೋತ ಕನ್ನಡಿಗರಿಗೆ ಮೊದಲ ಬಾರಿಗೆ

ಉಪಲಬ್ಧವಾಗಿರುವುದು ಕಂಡುಬರುತ್ತದೆ.ಉತ್ತರಾಧ್ಯಯನ ಕತೆಗಳು (9) ಉವಾಸಗದಾ ಸಾಓ ಕಥೆಗಳು (5) ಕರಕಂಡು ಚರಿತ ಕಥೆಗಳು (13) ಮಣಿ ಪತಿತರಿತ ಕಥೆಗಳು (26) ಧಮ್ಮಪರಿಕ್ಖಾದ ಕಥೆಗಳು (35), ಅಂತಗಡದ ಸಾಓ ಕಥೆಗಳು (24) ಭಗವತೀ ಸೂತ್ರ ಶತಕ (9) ಆರಾಧನಾಸಾರ (5) ಮಹಾವೀರ ಯುಗದ ಪ್ರಾತಿನಿಧಿಕ ಕಥೆಗಳು (15) ಉತ್ತರಾಧ್ಯಯನ ಸೂತ್ರಂ (22) ವಸುದೇವ ಹಿಂಡಿ ಕಥೆಗಳು (23) ನಾಯಾಧಮ್ಮ-ಕಹಾಓ ಕಥೆ (14) ಉವಾಸಗದಸಾಓ (3) -ಇವು ಭಾರತೀಯ ಜೈನ ಕಥಾ ಸಾಹಿತ್ಯದಿಂದ ಬಂದ ಅಪೂರ್ವ ಕಥೆಗಳಾಗಿವೆ. ಕನ್ನಡದ ಪ್ರಾಚೀನ ಸಾಹಿತ್ಯದಲ್ಲಿ ಜೈನ ಕಥೆಗಳ ದೊಡ್ಡ ಕಣಜವಿದೆ. ಪುಣ್ಯಾಸ್ರವದ ಕಥೆಗಳು (31) ಧರ್ಮಾಮೃತದ ಕಥೆಗಳು (30) ಧರ್ಮಪರೀಕ್ಷೆಯ ಕಥೆಗಳು (20) ವಡ್ಡಾರಾಧನೆಯ ಕಥೆಗಳು (27) ಜೀವಸಂಬೋಧನೆಯ ಕಥೆಗಳು (10) ನೋಂಪಿಯಕಥೆಗಳು (19) ಇವೆಲ್ಲವೂ ಕನ್ನಡ ಜೈನ ಕಥಾ ಸಾಹಿತ್ಯದ ಸಮಗ್ರದರ್ಶನವನ್ನು ಮಾಡಿಸುತ್ತವೆ.

ಜೈನ ಕಥಾಕೋಶದಲ್ಲಿ ಜೈನಧರ್ಮದ ಆಗಮತತ್ವಗಳೂ ಶ್ರಾವಕಾಚಾರ ಸಂಹಿತೆಯೂ ಅಹಿಂಸಾರ್ಧಮದ ಉನ್ನತಿಕೆಯೂ ಜೀವನ ನೀತಿಯೂ ಭಾರತೀಯ ಸಂಸ್ಕೃತಿ ಸಾಮಾಜಿಕ ಪರಂಪರೆಯೂ ಚಿತ್ರಿತವಾಗಿದೆ. ಧಾರ್ಮಿಕ ಉದ್ದೇಶದಿಂದ ಹುಟ್ಟಿಕೊಂಡ ಈ ಕಥೆಗಳಲ್ಲಿ ಮಾನವ ಪ್ರಪಂಚದ ಜೀವನಗಾಥೆ ಇದೆ, ಅದ್ಭುತವಾದ ಪಾತ್ರ ಪ್ರಪಂಚವಿದೆ, ಜಾಲದ ಕೆಲವು ನಿಗೂಢ ಸತ್ಯಗಳನ್ನು ಅನಾವರಣಗೊಳಿಸುತ್ತವೆ. ಜೊನ ಪರಂಪರೆಯ ಸಮಷ್ಟಿ ಪ್ರಜ್ಞೆಯನ್ನು, ಸಂಸ್ಕೃತಿಯ ಸಂಕಥನವನ್ನು, ಸಾಂಕೇತಿಕತೆಯನ್ನು ಧ್ವನಿಸುವ ಈ ಕಥಾಕೋಶ ಕನ್ನಡ ಕಥನ ಪ್ರೇಮಿಗಳಿಗೆ ಹರ್ಷೋಲ್ಲಾಸ ನೀಡುತ್ತದೆ. ಪಶುಪಕ್ಷಿಗಳೊಂದಿಗೆ ಮಾನವ ಲೋಕದ ವ್ಯವಹಾರ ತುಂಬ ಕುತೂಹಲ ಹುಟ್ಟಿಸುತ್ತದೆ. ಸಮಾಜದ ವಿವಿಧ ವರ್ಗದ ಜನರ ವೈವಿಧ್ಯಮಯ ಜೀವನ ಪ್ರಪಂಚ ಧಾರ್ಮಿಕ ನಂಬಿಕೆಗಳು, ಆಚರಣೆಗಳು, ಆದರ್ಶಗಳು ಈ ಕಥೆಗಳಲ್ಲಿ ಕಾಣುತ್ತವೆ. ವಿದ್ವಾಂಸರಿಗೆ ವಿಪುಲ ಆಕರ ಸಾಮಗ್ರಿಯಾಗಿ, ಸಾಹಿತ್ಯ ಸಹೃದಯರಿಗೆ ಕಥಾವಾಹಿನಿಯಾಗಿ ಜೈನಧರ್ಮೀಯರಿಗೆ ಆತ್ಮ ಸುಖವನ್ನು ನೀಡುವ 'ಜೈನ ಕಥಾಕೋಶ' ಮಹತ್ವ ಪಡೆಯುತ್ತದೆ''.

**-ಡಾ. ಜಿ. ಎಂ. ಹೆಗಡೆ**
**ಸಂಯುಕ್ತ ಕರ್ನಾಟಕ**
**8-11-1998**

# ಧರ್ಮದ ಭಾರದಿಂದ ಸೊರಗದ, ಅಮೂಲ್ಯ ಆಕರ ಗ್ರಂಥ

ಜೈನಸಾಮಾನ್ಯರ, ಅಧ್ಯಯನಶೀಲರ ಜ್ಞಾನ ದಾಹವನ್ನು ತಣಿಸುವಲ್ಲಿ, ತನ್ನ ಪ್ರಜೆಗಳ ಮೂಲಕ ಕನ್ನಡ ವಿಶ್ವವಿದ್ಯಾಲಯ ಆರಂಭದಿಂದಲೂ ಬಹು ಮುಖ್ಯ ಪಾತ್ರವನ್ನು ವಹಿಸುತ್ತಾ ಬಂದಿದೆ. ಹತ್ತು ಹಲವಾರು ವಿಷಯಗಳಿಗೆ ಸಂಬಂಧಿಸಿದಂತೆ ಉಪಯುಕ್ತ ಗ್ರಂಥಗಳನ್ನು ಹೊರತಂದಿದೆ. ಕೆಲವು ಪ್ರಕಟಣೆಗಳು ವಿಶ್ವವಿದ್ಯಾಲಯಕ್ಕೆ ಘನತೆಯನ್ನು ತಂದಿದೆ. ಅಂಥ ಶ್ರೇಷ್ಠ ಗ್ರಂಥಗಳ ಪ್ರಕಟಣೆಯಲ್ಲಿ ಡಾ. ಹಂಪನಾ ಅವರ ಸಂಪಾದಕತ್ವದ ನೇತೃತ್ವದಲ್ಲಿ ಸಿದ್ಧವಾಗಿರುವ 'ಜೈನ ಕಥಾ ಕೋಶ'ಒಂದು.

ಭಾರತೀಯ ಕಥಾ ಸಾಹಿತ್ಯವನ್ನು ಪ್ರಧಾನವಾಗಿ ನಾಲ್ಕು ಭಾಗಗಳಾಗಿವೆ ವಿಂಗಡಿಸಬಹುದು. 1) ಗದ್ಯ ಕಥಾ ಕಾವ್ಯಗಳು, ಬಾಣನ ಕಾದಂಬರಿ, ದಂಡಿಯ ದಶಕುಮಾರ ಚರಿತೆ ಮುಂತಾದುವು. 2) ಶಾಜಶ- ಅದ್ಭುತಗಳು ಬೃಹತ್ ಕಥೆ, ಶುಕಸಪ್ತತಿ, ಭಟ್ಟಿ ವಿಕ್ರಮಾದಿತ್ಯನ ಕಥೆಗಳು ಮುಂತಾದುವು. 3) ನೀತಿ ಕಥೆಗಳು, ಪಂಚತಂತ್ರ, ಹಿತೋಪದೇಶ ಮೊದಲಾದವು. 4) ಧಾರ್ಮಿಕ ಕಥೆಗಳು ಬೌದ್ಧ, ಜೈನ ಧರ್ಮಕ್ಕೆ ಸಂಬಂಧಿಸಿದುವು ಎಂದು. ಈ ನಾಲ್ಕು ವಿಭಾಗಗಳಲ್ಲಿನ ಕಥೆಗಳು ವಿಶೇಷವಾಗಿ ಸಂಸ್ಕೃತ ಭಾಷೆಯಲ್ಲಿದ್ದರೆ, ನಾಲ್ಕನೇ ವಿಭಾಗಕ್ಕೆ ಸೇರಿದ ಕಥೆಗಳು ಪಾಲಿ ಮತ್ತು ಪ್ರಾಕೃತ ಭಾಷೆಗಳಲ್ಲಿವೆ.

ಇದುವರೆಗೆ ಅನುವಾದವಾಗಿರುವ ಪ್ರಾಚೀನ ಕಥಾ ಸಾಹಿತ್ಯವನ್ನು ನೋಡಿದರೆ, ಪ್ರಾಚೀನ ಪ್ರಾಕೃತದ ಕತೆಗಳು ಕನ್ನಡಕ್ಕೆ ಅನುವಾದವಾಗಿರುವುದು ತೀರಾ ಕಡಿಮೆ. ಬಹು ಕಾಲದ ಈ ಒಂದು ಕೊರತೆಯನ್ನು ಯಶಸ್ವಿಯಾಗಿ ತುಂಬುವ ಸಾರ್ಥಕ ಪ್ರಯತ್ನ ಮಾಡಿರುವ ಡಾ. ಹಂಪ ನಾಗರಾಜಯ್ಯ, ಡಾ. ಕಮಲ ಹಂಪನಾ, ಡಾ. ಪದ್ಮ ಪ್ರಸಾದ್, ಡಾ. ಸರಸ್ವತಿ ವಿಜಯಕುಮಾರ್ ಅವರನ್ನು ಅಭಿನಂದಿಸಬೇಕು.

ಈ ಕಥಾ ಕೋಶದಲ್ಲಿ 'ಪ್ರಾಕೃತದಿಂದ ಕನ್ನಡಕ್ಕೆ ಇಳಿಸಿಕೊಳ್ಳದೆ ಹೋಗಿದ್ದ ಸಾವಿರಾರು ಕಥೆಗಳಲ್ಲಿ ಕೇವಲ ಮುನ್ನೂರು ಹೊಸ ಕಥೆಗಳನ್ನೂ, ಕನ್ನಡಕ್ಕೆ ಬಂದು ಹಳಗನ್ನಡದಲ್ಲಿದ್ದುವನ್ನು ಹೊಸಗನ್ನಡಕ್ಕೆ ಪರಿವರ್ತಿಸಿ ನೂರಕ್ಕೂ ಹೆಚ್ಚಿನ ಕಥೆಗಳನ್ನು ನೀಡಲಾಗಿದೆ. ಕನ್ನಡಕ್ಕೆ ಬರಬೇಕಾದ ಆಹಿತ್ಯ ಇನ್ನೂ ಎಷ್ಟೋ ಇದೆ. ಅಮೃತ ಕಥಾ ಧಾರೆಗಳನ್ನು ಇನ್ನೂ ತನಕ ಕನ್ನಡ ಕಥನ ಪ್ರಕಾರಗಳು ಕಂಡಿಲ್ಲ. ಕೇಳಿಲ್ಲ. ಮೂಸಿಲ್ಲ. ಮುಟ್ಟಿಲ್ಲ. ಕನ್ನಡ ಲೇಖಕರು ಅತ್ತ ಕಣ್ಣು ಹೊರಳಿಸಿಲ್ಲ. ಹೆಜ್ಜೆ ಹಾಕಿಲ್ಲ'- ಎಂಬ ಡಾ. ಹಂಪನಾ ಅವರ ಮಾತುಗಳು ಇನ್ನೂ ಆಗಬೇಕಾದ ಕೆಲಸದತ್ತ, ಇದುವರೆಗೆ ನಡೆದಿರುವ ಕೃಷಿಯತ್ತ ನಮ್ಮ ಗಮನವನ್ನು ಸೆಳೆಯುತ್ತವೆ.

ಈ ಕಥಾ ಕೋಶದ ಉದ್ದೇಶವನ್ನು ಕುರಿತು ಡಾ. ಹಂಪನಾ ಅವರು ಸಾಕಷ್ಟು ವಿವರವಾಗಿ ವಿವರಿಸಿದ್ದಾರೆ. 'ಸಮಗ್ರ ಭಾರತೀಯ ಕಥಾ ಸಾಹಿತ್ಯ ಪರಂಪರೆಯೊಂದರ ಪುನಾರಚನೆಗೆ ಜೈನ ಕಥಾ ಸಾಹಿತ್ಯದ ಕೊಡುಗೆ ಮೊತ್ತದಲ್ಲೂ ಮೌಲಿಕತೆಯಲ್ಲೂ ಗಣನೀಯವಾಗಿರುವಂತೆಯೇ. ಕನ್ನಡ ಕಥಾ ಸಾಹಿತ್ಯಕ್ಕೆ ಅದರ ಸಾಹಚರ್ಯ ಘನವಾದದ್ದು. ಅರ್ಥಪೂರ್ಣವಾದದ್ದು. ಭಾರತೀಯ ಪರಂಪರೆಗೆ ಹೇಗೋ ಹಾಗೆ ಕನ್ನಡ ಕಥಾ ಪರಂಪರೆಗೂ ಹೊಸ ನೀರು. ಬಣ್ಣ. ಬೆಡಗು. ಧನಿ ಬಂದದ್ದು ಪ್ರಾಕೃತ ತೊರೆ ಝರಿಗಳ ಸೇರಿವಿಕೆಯಿಂದ ಪ್ರಾಕೃತ ಧಾರೆಗಳು ಈ ನೆಲದ ಜನಮನದೊಂದಿಗೆ ಹೇಗೆ ಕೂಡಲಸಂಗಮವಾದುವೆಂಬುದನ್ನು ತೋರಿಸುವ ಉದ್ದೇಶವೂ ಈ ಕಥಾಕೋಶದ ಹಿನ್ನೆಲೆಯಲ್ಲಿದೆ- ಅವರ ಉದ್ದೇಶ 'ಬಹುಮಟ್ಟಿಗೆ' ಎಂಬ ಯಶಸ್ವಿಯಾಗಿದೆ. ಎಂದೇ ಹೇಳಬೇಕು. ಇಲ್ಲಿ 'ಬಹುಮಟ್ಟಿಗೆ' ಎಂಬ ಪದವನ್ನು ಪ್ರಯೋಗಿಸಿರುವುದಕ್ಕೆ ಕಾರಣ: ಇನ್ನೂ ನಾಲ್ಕೈದು ಸಂಪುಟಗಳಾಗುವಷ್ಟು ಮೂಲ ಸಾಮಗ್ರಿ ಅಪ್ರಕಟಿತವಾಗಿಯೇ ಇದೆ. ಆ ಬಗ್ಗೆ ಪೂರ್ವ ಸಿದ್ಧತೆ ನಡೆದು ಪ್ರಕಟೆಗೂ ಸಿದ್ಧವಾಗಿದೆ- ಎಂಬ ಅಂಶದ ಸೂಚನೆ ಅವರ 'ಆತ್ಮ ನಿವೇದನೆ'ಯಲ್ಲಿದೆ. ಆ ಎಲ್ಲಾ ಸಂಪುಟಗಳೂ ಇದೇ ರೀತಿ ವಿಸ್ತಾರವಾದ ಪ್ರವೇಶಿಕೆಯಿಂದ ಪ್ರಕಟವಾದಾಗ 'ಬಹುಮಟ್ಟಿಗೆ' ಎಂಬ ಪದವನ್ನು ತೆಗೆದುಹಾಕಬಹುದು. ಎಲ್ಲಾ ಸಂಪುಟಗಳೂ ಪ್ರಕಟವಾದಾಗ ಭಾರತೀಯ ಕಥಾ ಸಾಹಿತ್ಯವನ್ನು ಕುರಿತು ಹತ್ತು ಹಲವಾರು ದೃಷ್ಟಿಗಳಿಂದ ಅಧ್ಯಯನ ಮಾಡುವ ಸಂಶೋಧಕರಿಗೂ ಅಮೂಲ್ಯ ಆಕರ ಗ್ರಂಥಗಳಾಗುತ್ತವೆ.

ಈ ಕಥಾಕೋಶವನ್ನು 2 ಭಾಗವಾಗಿ ವಿಂಗಡಿಸಬಹುದು. ಮೊದಲನೆಯದು ಸುದೀರ್ಘವಾದ ಪ್ರಸ್ತಾವನೆ. ಎರಡನೆಯದು ಮೂಲ ಕಥೆಗಳ ಸರಳ ಕನ್ನಡ ಗದ್ಯಾನುವಾದ- ಎಂದು.

'ಜೈನ ಕಥಾ ಪರಂಪರೆ- ಪ್ರೇರಣ ಪ್ರಭಾವ' ಎಂಬ ಶೀರ್ಷಿಕೆಯಡಿಯಲ್ಲಿ ನೂರ ಹದಿನೆಂಟು ಪುಟಗಳ ಸುದೀರ್ಘ ಪ್ರಸ್ತಾವನೆಯಲ್ಲಿ ಕಥಾ ಕೋಶದ ವಿನ್ಯಾಸ. ಉಪಯುಕ್ತತೆ ಮತ್ತು ಮಹತ್ವವನ್ನು ಕುರಿತು ವಿವರಿಸಿದ್ದಾರೆ. ನಂತರ ಪ್ರತಿಯೊಂದು ಕಥಾ ಸಂಗ್ರಹವನ್ನು ಪರಿಚಯಿಸುತ್ತಾ ಜೈನ ಆಗಮ ಸಾಹಿತ್ಯ. ಕಥಾಸಂಚಾರ, ಕಥಾ ಕೋಶಗಳು, ಆಶಯ ವಿಕಾಸವನ್ನು ಕುರಿತು ವಿವರಣೆ ನೀಡುತ್ತಾ ಚರ್ಚಿಸಿದ್ದಾರೆ. ಈ ಪ್ರಸ್ತಾವನೆಯ ಒಂದು ವಿಶೇಷತೆಯೆಂದರೆ ಡಾ. ಹಂಪನಾ ಅವರು. ಹಲವಾರು ಸಮಸ್ಯೆಗಳತ್ತ ಮುಂದಿನ ಸಂಶೋಧಕರ ಗಮನವನ್ನು ಸೆಳೆದಿರುವುದು. ಈ ಎಲ್ಲಾ ಅಂಶಗಳೂ ಎರಡನೆಯ ಭಾಗವಾದ ಕಥೆಗಳನ್ನು ಗ್ರಹಿಸುವುದಕ್ಕೆ, ಅವುಗಳ ಹಿನ್ನೆಲೆಯನ್ನು ತಿಳಿಯುವುದಕ್ಕೆ ಸಾಕಷ್ಟು ನೆರವು ನೀಡುತ್ತವೆ. ಡಾ. ಹಂಪನಾ ಮತ್ತು ಇತರರ ಶ್ರಮ ಸಾರ್ಥಕ ಆಗಬೇಕಾದರೆ ಅವರು ನೀಡಿರುವ ಆಕರ ಸಾಮಗ್ರಿ ಮತ್ತು ಪೋಷಕ ಸಾಮಗ್ರಿಗಳನ್ನು ಮುಂಬರುವ ಸಂಶೋಧಕರು ಉಪಯೋಗಿಸಿಕೊಳ್ಳಬೇಕು. ಎಲ್ಲಕ್ಕಿಂತ ಹೆಚ್ಚಾಗಿ ಕಥಾ ಸಾಹಿತ್ಯದ ಅಧ್ಯಯನದ ಬಗ್ಗೆ ಡಾ. ಹಂಪನಾ ಅವರಿಗಿರುವ ಕಳಕಳಿ ಗುರುತಿಸಬೇಕು.

ಕಥಾ ಸಂಗ್ರಹಗಳಲ್ಲಿನ ಕಥೆಗಳ ವರ್ಗೀಕರಣದ ಬಗ್ಗೆ ನಮ್ಮ ಗಮನವನ್ನು ಪ್ರಸ್ತಾವನೆಯಲ್ಲಿ ಸೆಳೆಯುತ್ತಾರೆ. ಡಾ. ಹಂಪನಾ ಅವರು. ಜಾನಪದ ಕಥೆಗಳನ್ನು ವರ್ಗೀಕರಿಸುವುದಕ್ಕೆ ಪಾಶ್ಚಾತ್ಯರತ್ತ ಗಮನಹರಿಸುತ್ತಿರುವ ನಮ್ಮನ್ನು ದೇಶೀಯ ವರ್ಗೀಕರಣ ದತ್ತ ಗಮನಹರಿಸುವಂತೆ ಮಾಡುತ್ತಾರೆ. ಸಂಘ ದಾಸಗಣಿವಾಚಕನು ವಾಸುದೇವ ಹಿಂಡಿಯಲ್ಲಿ ಕೊಡುವ ವಿವರಗಳು ಈ ರೀತಿ ಇವೆ.

'ಕಥೆಯಲ್ಲಿ ಎರಡು ವಿಧ, 1) ಚರಿತ-ಪರಂಪರೆ ಜೀವದ ಚರಿತೆಯನ್ನು ಆಧರಿಸಿದ ಕಥಾನಕ. 2) ಕಲ್ಪಿತ-ಕಾಲ್ಪನಿಕವೂ ಸೃಷ್ಟಿಸಿದ್ದೂ ಆದ ಕಾದಂಬರಿ ರೀತಿಯ ಕೃತಿ. ಚರಿತೆಯಲ್ಲಿ ಮತ್ತೆ ಎರಡು ವಿಧ ಹೆಂಗಸಿನ ಕಥಾನಕ. ಗಂಡಸಿನ ಕಥಾನಕ. ಧರ್ಮ,ಅರ್ಥ, ಕಾಮ ಎಂಬ ಮನುಷ್ಯ ಜೀವನದ ಮೂರು ಗುರಿಗಳ ಸಾಧನೆಯ ವಿಚಾರದಲ್ಲಿ ನೋಡಿದ್ದು. ಕೇಳಿದ್ದು. ಅನುಭವಿಸಿದ್ದು ಚರಿತೆ ಕವಿ ಇಲ್ಲದೇ ಕಥೆಗಾರನಿಂದ ಸೃಷ್ಟಿಸಲಾದ ಮತ್ತು ವಿವೇಕಗಳಿಂದ ಹೇಳಿದ ಸಂಗತಿಗಳಿಗೆ ಸೇರಿಸಿ ಹೇಳಲಾದ ಕಥಾನಕವು ಚರಿತವಲ್ಲ. ಅದು ಕಲ್ಪಿತ'- ಈ ಒಂದು ವಿಚಾರ ಧಾರೆಯ ಹಿನ್ನೆಲೆಯಲ್ಲಿ ಪ್ರಾಚೀನ ಭಾರತೀಯ ಸಾಹಿತ್ಯದಲ್ಲಿ ಬಂದ ಚರಿತಗಳನ್ನು ಗ್ರಹಿಸುವ, ವಿಶ್ಲೇಷಿಸುವ ಅಗತ್ಯವಿದೆ. ಈ ರೀತಿಯಲ್ಲಿ, ಹೊಸ ರೀತಿಯಲ್ಲಿ ಕಥಾ ಸಾಹಿತ್ಯವನ್ನು ನೋಡುವುದಕ್ಕೆ ಅನುವು ಮಾಡಿಕೊಡುವ ಹಲವಾರು ಅಂಶಗಳನ್ನು ಪ್ರಸ್ತಾವನೆಯಲ್ಲಿ ನೀಡಿದ್ದಾರೆ. ಪ್ರಸ್ತಾವನೆಯಲ್ಲಿನ ಡಾ. ಹಂಪನಾ ಅವರ ಕೆಲವು ಅಭಿಪ್ರಾಯಗಳನ್ನು ನಾವು ಅಂಗೀಕರಿಸದೇ ಹೋಗಬಹುದು. ಅವರು ಮಾಡಿರಬಹುದಾದ ಕೆಲವು ತಪ್ಪುಗಳೂ ಸಹ ನಮ್ಮನ್ನು ಅಧ್ಯಯನದತ್ತ ಸೆಳೆಯುತ್ತವೆ. ಇಲ್ಲಿ ಆಗಿರುವ ತಪ್ಪಿನ ಮುಂದೆ, ಅವರು ನೀಡಿರುವ ಅಪೂರ್ವ ಮಾಹಿತಿ ತುಂಬಾ ಹಿರಿದಾಗಿ ಕಾಣುತ್ತದೆ.

ಪ್ರಸ್ತಾವನೆಯನ್ನು ಓದಿ ನಂತರ ಕಥಾ ಕೋಶಗಳನ್ನು ಓದಿದರೆ ಅವುಗಳ ಹಿನ್ನೆಲೆ ಅರ್ಥವಾಗುತ್ತದೆ. ಪ್ರಸ್ತಾವನೆಯನ್ನು ಓದದೆಯೂ ಕಥಾ ಕೋಶವನ್ನು ಓದಬಹುದು. 'ಕೋಶ'ವೆಂಬುದು ಹತ್ತು ಹಲವಾರು ರೀತಿಯ ಜನರಿಗೆ. ಹತ್ತು ಹಲವು ಕಾರಣಗಳಿಂದಾಗಿ ಉಪಯೋಗಕ್ಕೆ ಬರುವ ಲಕ್ಷಣವನ್ನು ಹೊಂದಿರುತ್ತದೆ. ಇಲ್ಲಿಯ ಕಥೆಗಳು ಸರಳ ಕನ್ನಡದಲ್ಲಿರುವುದರಿಂದ ಸಾಮಾನ್ಯ ಜನರು ಕೇವಲ ಕಥೆಗಾಗಿಯೇ ಇದನ್ನು ಓದಬಹುದು. ತಮ್ಮ ಮಕ್ಕಳಿಗೆ ಹೇಳಿದ ಕಥೆಗಳನ್ನೇ ಹೇಳಿ ಬೇಸರಗೊಳಿಸುವುಕ್ಕಿಂತಲೂ ಹೊಸ ಕಥೆಗಳನ್ನು ಹೇಳಬೇಕೆಂಬ ಆಸೆಯಿದ್ದರೂ ಓದಬಹುದು. ಅಂತಹವರನ್ನು ಈ ಕೋಶ ನಿರಾಶೆಗೊಳಿಸುವುದಿಲ್ಲ. ಒಂದೆರಡು ಕಥೆಗಳು ಸಭ್ಯತೆಯ ಎಲ್ಲೆಯನ್ನು ಮೀರಿವೆ. ಅಂಥವುಗಳನ್ನು ಕೊಡಬಾರದು ಎಂದು ಸಂಪಾದಕರು ಮುಡಿಯುಟ್ಟಿಲ್ಲ. ಅವುಗಳನ್ನು ನೀಡಿದ್ದಾರೆ. ಒಟ್ಟಿನ ಮೇಲೆ ಭಾರತೀಯ ಕಥಾ ಪರಂಪರೆಯನ್ನು ತಿಳಿಯುವುದಕ್ಕೆ. ತೌಲನಿಕ ಅಧ್ಯಯನ ಮಾಡುವುದಕ್ಕೆ ಈ ಕಥಾ ಕೋಶವು ಮೂಲ ಆಕರವಾಗುತ್ತದೆ. ಬಹು ಕಾಲದ ಅಗತ್ಯವನ್ನು ಈ ಕೋಶದ ಮೂಲಕ ಡಾ. ಹಂಪನಾ ಮತ್ತು ಸಹ ಸಂಪಾದಕರು ಪೂರೈಸಿದ್ದಾರೆ.

ಉಳಿದ ಭಾಗಗಳೂ ಆದಷ್ಟು ಬೇಗನೆ ಇದೇ ರೀತಿಯಲ್ಲಿ ಹೊರಬರಲಿ ಎಂದು ಆಶಿಸುತ್ತೇನೆ.

ಹಲವಾರು ಕಥೆಗಳಿಗೆ ಸೂಕ್ತ ಟಿಪ್ಪಣಿಗಳನ್ನು ನೀಡಲಾಗಿದೆ. ರೀತಿಯ ಮಾಹಿ ಅಧ್ಯಯನಶೀಲರಿಗೆ ಉಪಯುಕ್ತ. ಎಲ್ಲಾ ಸಂಪುಟಗಳೂ ಹೊರ ಬಂದ ಮೇಲೆ ಇಡೀ ಸಂಪುಟಗ ಕಥೆಗಳನ್ನು ವರ್ಗೀಕರಿಸಿ ಪಟ್ಟಿಯನ್ನೂ, ಶಬ್ದ ಸೂಚಿಯನ್ನೂ ನೀಡಿದರೆ ಇನ್ನಷ್ಟು ಉಪಯು ಗ್ರಂಥವಾಗುತ್ತದೆ.

ಈ ಕಥಾ ಕೋಶದಲ್ಲಿರುವ ಎಲ್ಲ ಕಥೆಗಳ ಮೂಲ ಉದ್ದೇಶ. ನೇರವಾಗಿ. ಪರೋಕ್ಷವಾ ಮಾನವನನ್ನು ಧರ್ಮ ಮಾರ್ಗದತ್ತ ಸೆಳೆಯುವುದೇ ಆಗಿದೆ. ಇದಕ್ಕಾಗಿ ಅವರು ಆಯ್ ಮಾಡಿಕೊಂಡಿರುವ ಪಾತ್ರಗಳು. ಅವರ ನಡವಳಿಕೆಗಳು, ಕಥೆಯಲ್ಲಿ ಸವಿವರಗಳು ಮುಂತಾದ ಸಾಮಾನ್ಯ ಮಾನವ ಜೀವನಕ್ಕೆ ಸಂಬಂಧಿಸಿದ್ದು. ಈ ಕಾರಣದಿಂದಾಗಿ ಈ ಕೋಶದಲ ಹಲವಾರು ಕಥೆಗಳಲ್ಲಿ ಧಾರ್ಮಿಕಾಂಶವನ್ನು ಬದಿಗೆ ಸರಿಸಿದರೆ. ಇಂದಿಗೂ ಪ್ರಸ್ತುತವಾಗುತ್ತ ಎಲ್ಲ ಕಥೆಗಳಲ್ಲಿ. ಆ ಕಥೆಗಾರನ ಅಪಾರ ಜೀವನಾನುಭವ. ಮಾನವ ಸ್ವಭಾವದ ಸೂಕ್ ಪರಿಚಯ ನಮಗೆ ವೇದ್ಯವಾಗುತ್ತದೆ. ಇನ್ನೊಂದು ಅಂಶವನ್ನು ಗಮನಿಸಬೇಕು. ಯಾ ಕಥೆಯೂ 'ನೀತಿ' 'ಧರ್ಮ'ಗಳ ಭಾರದಿಂದ ಸೊರಗಿಲ್ಲ. ಈ ಎರಡೂ ಅಂಶಗಳೂ ಕಥೆ ಪಾತ್ರ, ಸನ್ನಿವೇಶದೊಂದಿಗೆ ಸಹಜವಾಗಿ ಹೊಂದಿಕೊಂಡು ಹೋಗಿವೆ. ಕೋಶ ಓದು. ದೇ ಸುತ್ತು' ಎಂಬುದು ಗಾದೆ. ಈ ಕೋಶ ಓದುವುದರಿಂದ ದೇಶ ಸುತ್ತುವುದರಿಂದ ಬರುವ ಜೀವನಾನುಭವ ಬರುತ್ತದೆ. ಡಾ. ಹಂಪನಾ ಅಪಾರ ಶ್ರಮವಹಿಸಿ ಸಿದ್ಧಪಡಿಸಿರುವ ಕೋಶವನ್ನು ಪ್ರತಿಯೊಬ್ಬ ಕನ್ನಡಿಗನೂ ಒಮ್ಮೆಯಾದರೂ ಓದಬೇಕು.

ಕೋಶವನ್ನು ಸಿದ್ಧಪಡಿಸುವುದಕ್ಕೆ ಡಾ. ಹಂಪನಾ ಅವರು ಬಹುಮಟ್ಟಿಗೆ ಇಂಗ್ಲಿಷ್ ಮತ ಹಿಂದಿ ಭಾಷೆಗಳನ್ನು ಅವಲಂಬಿಸಿದ್ದಾರೆ. ಬದಲಿಗೆ ಪ್ರಾಕೃತ ಬಲ್ಲ ವಿದ್ವಾಂಸರನ್ನು ತಮ ಸಂಪಾದಕ ಮಂಡಳಿಗೆ ತೆಗೆದುಕೊಂಡದಾದ್ದಲ್ಲಿ ಈ ಕೋಶ ಮತ್ತಷ್ಟು ಅಧಿಕೃತವಾಗುವುದರಲ ಸಂದೇಹವಿಲ್ಲ.

**ಡಾ. ಆರ್. ಶೇಷಾಶಾ**

## ತತ್ವಾರ್ಥ ಸೂತ್ರಾನುಗತ ಕರ್ಣಾಟ ಲಘುವೃತ್ತಿ

**ಗ್ರಂಥ ಸಂಪಾದನೆ: ವ್ಯಾಖ್ಯಾನ**

| | | |
|---|---|---|
| ಡೆಮ್ಮೆ 1/8 ಅಕಾರ, ಪುಟಗಳು | : | XXX+197 |
| ಪ್ರಥಮ ಮುದ್ರಣ | : | 1994 |
| ಪ್ರಕಾಶಕರು | : | ಶ್ರೀ ಸಿದ್ಧಾಂತ ಕೀರ್ತಿ ಗ್ರಂಥಮಾಲೆ<br>ಹೊಂಬುಜ ಕ್ಷೇತ್ರ<br>ಶಿವಮೊಗ್ಗ ಜಿಲ್ಲೆ 577 436 |

**ಅಭಿಪ್ರಾಯ:**

''ಶ್ರೀಮದಾಚಾರ್ಯ ಉಮಾಸ್ವಾಮಿಗಳ ತತ್ವಾರ್ಥ'ಸೂತ್ರಗ್ರಂಥ'ವು ಅದರ ರಚನೆಯಾದಾಗಿನಿಂದಲೂ ದಿಗಂಬರ ಮತ್ತು ಶ್ವೇತಾಂಬರ ಸಂಪ್ರದಾಯಗಳ ಸಮಸ್ತ ಜೈನಾಚಾರ್ಯರ, ಮುನಿಗಳ ಹಾಗೂ ವಿದ್ವಾಂಸರ ಗೌರವಾದರಗಳಿಗೆ ಪಾತ್ರವಾಗಿದೆ. ಈ ಅಪೂರ್ವ ಗ್ರಂಥಕ್ಕೆ ಭಾರತೀಯ ವಿಭಿನ್ನ ಭಾಷೆಗಳಲ್ಲಿ ಸುಮಾರು ಮೂವತ್ತೈದು ಟೀಕೆ ಉಪಟೀಕೆಗಳನ್ನು ವಿಭಿನ್ನ ಕಾಲಗಳಲ್ಲಿ ವಿವಿಧ ಆಚಾರ್ಯರು ಬರೆದಿರುತ್ತಾರೆ. ಅಂತಹವುಗಳಲ್ಲಿ ಕ್ರಿ. ಶ. ಹನ್ನೊಂದನೇ ಶತಮಾನದಲ್ಲಿ ಪರಮಪೂಜ್ಯ ಆಚಾರ್ಯ ಶ್ರೀ ದಿವಾಕರನಂದಿಭಟ್ಟಾರಕ ಮುನೀಂದ್ರರು ಬರೆದಿರುವ '**ತತ್ವಾರ್ಥಸೂತ್ರಾನುಗತ ಕರ್ಣಾಟ ಲಘುವೃತ್ತಿ**' ಎಂಬ ಈ ಅಪೂರ್ವ ಕೃತಿಯೂ ಒಂದು. ಸುಮಾರು 235 ಪ್ರಾಕೃತಗಾಥೆಗಳನ್ನು ಪ್ರಾಸಂಗಿಕ ವಿಷಯ ಸ್ಪಷ್ಟೀಕರಣಕ್ಕಾಗಿ ಉದ್ಧರಿಸಿ ಸೂತ್ರಗಳ ಜೊತೆಗೆ ಗಾಥೆಗಳಿಗೂ ಪದಶಃ ಅರ್ಥವನ್ನು ಬರೆಯುವುದರ ಮೂಲಕ, ಈ ಅಪೂರ್ವಕೃತಿಯ ಮೂಲಕ ಕನ್ನಡ ಸಾಹಿತ್ಯಾಭಿಮಾನಿಗಳಿಗೂ ಜ್ಞಾನದಾಹಿಗಳಿಗೂ ತತ್ವವಿಮರ್ಶೆಯ ಆಹ್ವಾನವನ್ನು ಕೊಟ್ಟಿರುವ ಪರಮಪೂಜ್ಯ ಆಚಾರ್ಯ ಶ್ರೀ ದಿವಾಕರನಂದಿಭಟ್ಟಾರಕ ಮುನೀಂದ್ರರು ಇಲ್ಲಿ ತಮ್ಮ ಅಪಾರವಾದ ವಿದ್ವತ್ತನ್ನೂ ತೋರಿಸಿಕೊಟ್ಟಿರುತ್ತಾರೆ. ಇಂತಹ ಅಮೂಲ್ಯವಾಗಿರುವ ಅಪ್ರಕಾಶಿತ ಗ್ರಂಥವನ್ನು ಸಾಹಿತ್ಯೋಪಾಸಕರೂ ಸಂಶೋಧಕರೂ ಆಗಿರುವ ಹಂಪನಾರವರು ಸಂಪಾದಿಸಿರುವುದು ಶ್ಲಾಘನೀಯ ಕಾರ್ಯವಾಗಿದೆ''

**- ಪರಮ ಪೂಜ್ಯ ಸ್ವಸ್ತಿಶ್ರೀ ದೇವೇಂದ್ರ ಕೀರ್ತಿ**
**ಭಟ್ಟಾರಕ ಪಟ್ಟಾಚಾರ್ಯವರ್ಯರು**

**ಹೊಂಬುಜ.**

## ಧನ್ಯಕುಮಾರ ಚರಿತೆ

**ಗ್ರಂಥ ಸಂಪಾದನೆ: ಸಾಂಗತ್ಯ ಕಾವ್ಯ**

| | | |
|---|---|---|
| ಡೆಮ್ಮೆ 1/8 ಆಕಾರ, ಪುಟಗಳು | : | 62+51+xiv=128 |
| ಪ್ರಥಮ ಮುದ್ರಣ | : | 1973 |
| ಪ್ರಕಾಶಕರು | : | ಚಂದ್ರಸಾಗರವರ್ಣಿ ಗ್ರಂಥಮಾಲೆ, ಬೆಂಗಳೂರು-10. |

ಗೇರಸೊಪ್ಪೆಯನ್ನು ತಮ್ಮ ರಾಜಧಾನಿಯನ್ನಾಗಿಸಿಕೊಂಡು ಆಳಿದ ನಗಿರೆ ರಾಜ್ಯದಲ್ಲಿ 15ನೆಯ ಶತಮಾನದಲ್ಲಿದ್ದ ಆದಿಯಪ್ಪನೆಂಬ ಕವಿ ಸಾಂಗತ್ಯ ಛಂದಸ್ಸಿನಲ್ಲಿ ರಚಿಸಿರುವ ಧಾರ್ಮಿಕ ಕಾವ್ಯವಿದು. ಧನ್ಯಕುಮಾರ ಚರಿತೆ ಅಪ್ರಕಟಿತ ಕಾವ್ಯವನ್ನು ಪ್ರಪ್ರಥಮ ಬಾರಿಗೆ ಪ್ರಕಟಿಸಲಾಗಿದೆ. ನಾಲ್ಕು ಉತ್ತಮ ತಾಳೆಗರಿ ಹಸ್ತಪ್ರತಿಗಳ ಸಹಾಯದಿಂದ, ಮೂಡಬಿದ್ರಿ ಹಸ್ತಪ್ರತಿ ಭಾಂಡಾರದಲ್ಲಿ ಕುಳಿತು ಈ ಗ್ರಂಥವನ್ನು ಸಿದ್ಧಪಡಿಸಿದ್ದಾರೆ. ಈ ಸಂಪಾದನೆಯ ಮತ್ತೊಂದು ವೈಶಿಷ್ಟ್ಯವೆಂದರೆ, ಪ್ರತಿ ಪದ್ಯಕ್ಕೂ ಹೊಸಗನ್ನಡ ಗದ್ಯಾನುವಾದವನ್ನು ಕೊಟ್ಟಿರುವುದು. ಆದಿಯಪ್ಪ ಕವಿಯ ಇತಿವೃತ್ತ ಅನೇಕ ಹೊಸ ಮಾಹಿತಿಗಳಿಂದ ಕೂಡಿದೆ, ಅಲ್ಲದೆ ಧನ್ಯಕುಮಾರನನ್ನು ಕುರಿತು ಪ್ರಾಕೃತ ಸಂಸ್ಕೃತದಲ್ಲಿ ಸಿಗುವ ಕಾವ್ಯಗಳೊಂದಿಗೆ ತುಲನೆ ಮಾಡಲು ಸಾಮಗ್ರಿಯನ್ನು ಒದಗಿಸಿದ್ದಾರೆ.

ಇದರ ವಸ್ತುವನ್ನು ಇನ್ನೂ ಭಿನ್ನ ಆಯಾಮಗಳಿಗೆ ಎತ್ತಿಕೊಂಡು ವ್ಯಾಪಕವಾದ ತೌಲನಿಕ ಅಧ್ಯಯನವನ್ನು, ಬಂಧುವರ್ಮನ ಒಂದು ಕಥೆಯನ್ನು ಕೇಂದ್ರವಾಗಿರಿಸಿ, ಹಂಪನಾ ಮತ್ತೆ ಮುಂದುವರಿಸಿದ್ದು ಪ್ರಬುದ್ಧ ಕರ್ನಾಟಕದಲ್ಲಿ (69-3, 1988) ಪ್ರಕಟವಾಗಿದೆ; ಇದು ಅನಂತರ 'ಕವಿ ಬಂಧುವರ್ಮ, ಜಿಜ್ಞಾಸೆ' (1993) ಎಂಬ ಸಂಶೋಧನ ಗ್ರಂಥದಲ್ಲಿಯೂ ಸೇರ್ಪಡೆಯಾಗಿದೆ.

ಈ ಸಂಪಾದಿತ ಗ್ರಂಥವನ್ನು ಶ್ರವಣಬೆಳಗೊಳ, ಕೊಲ್ಹಾಪುರ, ಮೂಡಬಿದ್ರಿ, ಹಾಗೂ ನರಸಿಂಹರಾಜಪುರ (ಸಿಂಹನಗದ್ದೆ) ಮಠಗಳ ಪಟ್ಟಾಚಾರ್ಯರುಗಳಿಗೆ ಅರ್ಪಣೆ ಮಾಡಲಾಗಿದೆ.

**ಅಭಿಪ್ರಾಯಗಳು:**

1. ನಾಲ್ಕೂ ಹಸ್ತಪ್ರತಿಗಳಲ್ಲಿಯ ಸಂಯೋಜಕ ಸ್ಖಾಲಿತ್ಯ ಹಾಗೂ ವಿಚ್ಛೇದಕ ಸ್ಖಾಲಿತ್ಯಗಳ ಬಲದಿಂದ ವಂಶಾವಳಿಯನ್ನು ರೂಪಿಸಿಕೊಂಡಿದ್ದಾರೆ. ನಂತರ ಇವುಗಳಲ್ಲಿಯೇ ಒಂದನ್ನು

ಆಧಾರ ಪ್ರತಿಯನ್ನಾಗಿಟ್ಟುಕೊಂಡು, ಉಳಿದ ಮೂರರ ಪಾಠಾಂತರಗಳನ್ನು ಹಾಕಿಕೊಂಡಿದ್ದಾರೆ. ಹೀಗೆ ಹಂಪನಾ ಅವರು ಈ ಕೃತಿಯ ಸಾಮಗ್ರಿ ಸಂಕಲನ, ವಂಶಾವಳಿಯ ನಿರ್ಣಯ ಹಾಗೂ ಭಿನ್ನಪಾಠ ಸಂಗ್ರಹಗಳಲ್ಲಿ ಗ್ರಂಥ ಸಂಪಾದನೆಯ ಶಾಸ್ತ್ರೀಯ ನಿಯಮಗಳನ್ನು ಅನುಸರಿಸಿದ್ದು ಕಂಡು ಬರುತ್ತದೆ. ಹಂಪನಾ ಅವರು ಹಸ್ತಪ್ರತಿ ಸಂಗ್ರಹ ಕಾರ್ಯದಲ್ಲಿ ತೋರಿದ ಆಸಕ್ತಿ, ಭಿನ್ನ ಪಾಠಸಂಗ್ರಹದಲ್ಲಿ ವಹಿಸಿದ ಪರಿಶ್ರಮ- ತಾಳ್ಮೆಗಳು ಮೆಚ್ಚುವಂಥವಾಗಿವೆ. ಕವಿ ಪಾಠಕ್ಕೆ ಸಮೀಪವಾದ ಪಾಠವನ್ನು ನಿರ್ಣಯಿಸಿ ಕೊಡುವಲ್ಲಿ ಹಂಪನಾ ಅವರು ತಮ್ಮ ವಿಶಾಲ ವ್ಯಾಸಂಗದ ಮೂಲಕ ತೂಕಬದ್ಧವಾಗಿ ನಡೆದುಕೊಂಡಿದ್ದಾರೆ.

**-- ಡಾ. ಬಿ. ಆರ್. ಹಿರೇಮಠ**

2. ಆದಿಯಪ್ಪನ 'ಧನ್ಯಕುಮಾರ ಚರಿತೆ'ಯಲ್ಲಿ ಕವಿಯ ಕಾಲ ದೇಶ ವಂಶ ವೃತ್ತಿ ಮತ್ತು ಕೃತಿರಚನೆಯ ಹಿಂದಿರುವ ಪ್ರೇರಣೆಗಳು- ಇವೇ ಮೊದಲಾದವುಗಳ ಬಗ್ಗೆ ಅತ್ಯಂತ ಸಂಯಮದಿಂದ, ಅಷ್ಟೇ ಸಮರ್ಥವಾಗಿ ನಿರೂಪಿಸಿದ್ದಾರೆ. ಕಥಾ ಸಾರವನ್ನು ಕೊಡುವುದರ ಜೊತೆಗೆ ಆ ಕಾವ್ಯದ ಸರಳತೆ, ಸಾಂಗತ್ಯದಲ್ಲಿಯ ನಿರರ್ಗಳತೆ - ಹೀಗೆ ಕವಿಯ ಪ್ರತಿಭೆ, ಜೀವನಾನುಭವಗಳ ಇತಿಮಿತಿಯ ಹಿನ್ನೆಲೆಯಲ್ಲಿ ಒಟ್ಟು ಕಾವ್ಯದ ನೆಲೆ ಬೆಲೆಗಳನ್ನು ನಿರ್ಣಯಿಸಿ ಕೊಟ್ಟಿದ್ದಾರೆ. ಕನ್ನಡ ಮತ್ತು ಸಂಸ್ಕೃತದಲ್ಲಿ ಬೆಳೆದು ಬಂದ ಧನ್ಯಕುಮಾರ ಚರಿತೆಯ ಪರಂಪರೆಯನ್ನು ಔಚಿತ್ಯಪೂರ್ಣವಾಗಿ ವಿವರಿಸಿ ಅಲ್ಲಿಯ ಸಾಮ್ಯವೈಷಮ್ಯಗಳನ್ನೂ ಗುರುತಿಸಲಾಗಿದೆ.

**--ಡಾ. ಎಸ್. ಎಸ್. ಕೋತಿನ**

3. ಇಂತಹ ಒಂದು ಕೃತಿಯನ್ನು ಪ್ರಥಮ ಬಾರಿಗೆ ಗ್ರಂಥರೂಪದಲ್ಲಿ ಹೊರತಂದ ಶ್ರೇಯಸ್ಸು. ಡಾ. ಹಂಪನಾ ಅವರಿಗೆ ಸಲ್ಲುತ್ತದೆ.

**--ಡಾ. ಸರಸ್ವತಿ ವಿಜಯಕುಮಾರ್**

# ಧರ್ಮಸ್ಥಳ ಸಾಹಿತ್ಯ ಸಮ್ಮೇಳನ

**ಸಂಪಾದಕರು**

ಡೆಮ್ಮೆ 1/8 ಆಕಾರ ಪುಟಗಳು : 456+viii
ಪ್ರಥಮ ಮುದ್ರಣ : 1980
ಪ್ರಕಾಶಕರು : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-18.

ಕನ್ನಡ ಸಾಹಿತ್ಯ ಪರಿಷತ್ತು 1915 ರಿಂದ 1979-80ರ ವರೆಗೆ 50 ಸಾಹಿತ್ಯ ಸಮ್ಮೇಳನಗಳನ್ನು ನಡೆಸಿದೆ. 64 ವರ್ಷಗಳ ಅವಧಿಯಲ್ಲಿ ನಡೆದಿರುವ ಈ ಸಮ್ಮೇಳನಗಳ ಒಟ್ಟು ಕಾರ್ಯಕಲಾಪಗಳು ಒಂದೆಡೆ ಪ್ರತ್ಯೇಕವಾಗಿ ಪುಸ್ತಕ ರೂಪದಲ್ಲಿ ಇದುವರೆಗೆ ಒಂದೂ ಪ್ರಕಟವಾಗಿರಲಿಲ್ಲ. ಈ ಕೊರತೆಯನ್ನು ಹೋಗಲಾಡಿಸಲು ಮೊಟ್ಟ ಮೊದಲ ಬಾರಿಗೆ ಧರ್ಮಸ್ಥಳ ಸಾಹಿತ್ಯ ಸಮ್ಮೇಳನದ ಕಾರ್ಯ ಕಲಾಪಗಳನ್ನು ಪುಸ್ತಕ ರೂಪದಲ್ಲಿ ಇಲ್ಲಿ ಹೊರತರುವ ಮೂಲಕ ಹೊಸ ಸಾಹಿತ್ಯ ಸಂಪ್ರದಾಯವನ್ನು ಪ್ರಾರಂಭಿಸಿದವರು ಹಂಪ. ನಾಗರಾಜಯ್ಯ.

1979ನೆಯ ಇಸವಿ ಮಾರ್ಚಿ ತಿಂಗಳು, ದಕ್ಷಿಣ ಕನ್ನಡ ಜಿಲ್ಲೆಯ ಧರ್ಮಸ್ಥಳದಲ್ಲಿ ಅಖಿಲ ಭಾರತ 51ನೆಯ ಸಾಹಿತ್ಯ ಸಮ್ಮೇಳನ ನಡೆಯಿತು. ಮೊಗೇರಿ ಗೋಪಾಲಕೃಷ್ಣ ಅಡಿಗರು ಸಮ್ಮೇಳನಾಧ್ಯಕ್ಷರು. ಭಾಷಾ ಬಾಂಧವ್ಯಗೋಷ್ಠಿ, ದಲಿತಸಾಹಿತ್ಯ ಮತ್ತು ಇತರ ಒಲವುಗಳು, ಶಿಶುಸಾಹಿತ್ಯ, ಆಡಳಿತ ಭಾಷೆ, ಸಾಹಿತ್ಯ ಮತ್ತು ಚಲನಚಿತ್ರ ಎಂಬ ಗೋಷ್ಠಿಗಳನ್ನು, ಕವಿಗೋಷ್ಠಿಯನ್ನೂ ಏರ್ಪಡಿಸಲಾಗಿತ್ತು. ಧರ್ಮಾಧಿಕಾರಿ ಡಾ. ಡಿ. ವೀರೇಂದ್ರ ಹೆಗ್ಗಡೆ ಸ್ವಾಗತಾಧ್ಯಕ್ಷರಾಗಿದ್ದರು.

ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎ. ಎನ್. ಮೂರ್ತಿರಾವ್, ಬಿ. ಜಿ. ಎಲ್. ಸ್ವಾಮಿ, ಜಿ. ಪಿ. ರಾಜರತ್ನಂ, ಪಿ. ಲಂಕೇಶ್, ಎಂ. ಟಿ. ವಾಸುದೇವನ್‌ನಾಯರ್, ಶಿವರಾಮಕಾರಂತ, ಆರ್. ಕೆ. ನಾರಾಯಣ, ಕೃಷ್ಣ ಆಲನಹಳ್ಳಿ, ಯು. ಆರ್. ಅನಂತಮೂರ್ತಿ, ಬಸವರಾಜ ಕಟ್ಟೀಮನಿ, ಗೊರೂರು, ಹಾ. ಮಾ. ನಾಯಕ, ಚಂದ್ರಶೇಖರ ಕಂಬಾರ, ಬಿ. ವಿ. ಕಾರಂತ, ಪಿ. ಎಲ್. ಬಂಕಾಪುರ ಮೊದಲಾದವರು ಈ ಸಮ್ಮೇಳನದಲ್ಲಿ ಭಾಗವಹಿಸಿದ್ದರು.

**ಅಭಿಪ್ರಾಯ:**

ಈ ಕೃತಿಗೆ ಹಂಪ, ನಾಗರಾಜಯ್ಯನವರು ಬರೆದಿರುವ ಮುನ್ನುಡಿ ಭಾಗವು ಅನೇಕ ನಿಟ್ಟಿನಿಂದ ಮಹತ್ವದ್ದಾಗಿದೆ. * ಇಂಥ ಸ್ತುತ್ಯ ಪ್ರಪ್ರಥಮ ಕಾರ್ಯದ ಫಲವಾಗಿ ಈಗ ಆ ಬಗೆಯ ಏಳು ಸಾಹಿತ್ಯ ಸಮ್ಮೇಳನಗಳ ಕಾರ್ಯಕಲಾಪಗಳು ಗ್ರಂಥ ರೂಪದಲ್ಲಿ ಅಚ್ಚಾಗಿದ್ದು ಆ ಮೇಳಗಳಲ್ಲಿ ನಡೆದ ವಿವಿಧ ವಿಚಾರಗಳನ್ನು ಓದಿ ತಿಳಿಯಲು ಸಹಾಯಕವಾಗಿದೆ. ಈ ಒಂದು ಸಾಧನೆಗಾಗಿಯೇ ಹಂಪನಾ ಅವರನ್ನು ಎಷ್ಟೋ ಕೊಂಡಾಡಬೇಕಾಗುತ್ತದೆ. * ಎಲ್ಲವು ಪಾಂಕ್ತ, ಸಾರ್ಥಕ.

**-- ಡಾ. ನಂ. ತಪಸ್ವೀಕುಮಾರ್**

# ದಿವ್ಯ ಧ್ವನಿ

ಸಂಪಾದಕರು

| | | |
|---|---|---|
| ಕ್ರೌನ್1/4 ಆಕಾರ, ಪುಟಗಳು | : | 380+27+viii |
| ಪ್ರಥಮ ಮುದ್ರಣ | : | 1975 |
| ಪ್ರಕಾಶಕರು | : | ಕರ್ನಾಟಕ ರಾಜ್ಯ ಸರ್ಕಾರ |

ವರ್ಧಮಾನ ಮಹಾವೀರರ 2500ನೆಯ ನಿರ್ವಾಣೋತ್ಸವವನ್ನು ಪ್ರಪಂಚದ ನಾನಾ ದೇಶಗಳಲ್ಲಿ ಆಚರಿಸಲಾಯಿತು. ಭಾರತದಲ್ಲಿ ಎಲ್ಲೆಡೆಗಳಲ್ಲೂ ಈ ಆಚರಣೆ ನಡೆಯಿತು. ಕರ್ನಾಟಕ ರಾಜ್ಯದಲ್ಲಿ ಸರ್ಕಾರದ ಉಸ್ತುವಾರಿಯಲ್ಲಿ ರಾಜ್ಯಮಟ್ಟದ ಉನ್ನತ ಸಮಿತಿಯ ಮಾರ್ಗದರ್ಶನದಲ್ಲಿ ನಿರ್ವಾಣೋತ್ಸವದ ಕಾರ್ಯ ಕ್ರಮಗಳಾದವು. ಆ ಸಂದರ್ಭದಲ್ಲಿ ಡಾ. ಹಂಪ. ನಾಗರಾಜಯ್ಯನವರ ಸಂಪಾದಕತ್ವದಲ್ಲಿ ಪ್ರಕಟವಾದ ಬೃಹತ್ ಗಾತ್ರದ ಸ್ಮರಣ ಸಂಚಿಕೆಯಿದು.

ಇದರಲ್ಲಿ 55 ಕನ್ನಡ ಲೇಖನಗಳೂ, ಒಂದು ಇಂಗ್ಲಿಷ್ ಲೇಖನವೂ, ಒಂಬತ್ತು ಹಿಂದಿ ಲೇಖನಗಳೂ ಇವೆ. ಇದರಲ್ಲಿ ಜೈನಧರ್ಮದ ಸಿದ್ಧಾಂತ, ಶಿಲ್ಪ, ವಾಸ್ತು, ತೀರ್ಥಸ್ಥಳಗಳು, ಕನ್ನಡ ಸಂಸ್ಕೃತ ಪ್ರಾಕೃತ ಸಾಹಿತ್ಯದ ಪ್ರಮುಖ ಕವಿಗಳು, ಇತಿಹಾಸ, ಶಾಸನ, ಆಚಾರ್ಯರು, ಆಚರಣೆಗಳನ್ನು ಕುರಿತು ಲೇಖನಗಳಿವೆ. ಆ. ನೇ. ಉಪಾಧ್ಯೆ, ಡಿ. ವಿ. ಗುಂಡಪ್ಪ, ಮಿರ್ಜಿ ಅಣ್ಣಾರಾಯ, ಟಿ. ಕೆ. ತುಕೋಳ್, ಜಿ. ಹನುಮಂತರಾವ್, ಕಮಲಾ ಹಂಪನಾ, ಕೆ. ಭುಜಬಲಿಶಾಸ್ತ್ರಿ, ಬಿ. ಬಿ. ಮಹೀಶವಾಡಿ, ಎ. ಸುಬ್ಬಯ್ಯಶಾಸ್ತ್ರಿ, ಚಂದ್ರಶೇಖರ ಕಂಬಾರ, ಡಿ. ಪದ್ಮನಾಭಶರ್ಮ ಮುಂತಾದವರ ಲೇಖನಗಳು ಈ ಸ್ಮರಣ ಸಂಪುಟದಲ್ಲಿವೆ.

ಸಂ.

# ದೇವರಾಯನ ದುರ್ಗ

**ಸ್ಥಳ ಪರಿಚಯ**

| | | |
|---|---|---|
| ಕ್ರೌನ್ 1/8 ಆಕಾರ, ಪುಟಗಳು | : | 48 |
| ಪ್ರಥಮ ಮುದ್ರಣ | : | 1973 |
| ಪ್ರಕಾಶಕರು | : | ಐಬಿಎಚ್ ಪ್ರಕಾಶನ, ಬೆಂಗಳೂರು-560009 |

ಕಿರಿಯರಿಗೂ - ಹಿರಿಯರಿಗೂ ಸುಲಭವಾಗಿ ಪರಿಚಯವಾಗುವಂತೆ ಕನ್ನಡ ನಾಡಿನ ಪರಂಪರೆಯುನ್ನು ತಿಳಿಸಿಕೊಡುವ ಪುಸ್ತಕಗಳನ್ನು ಹೊರತಂದವರು 'ಇಂಡಿಯಾ ಬುಕ್‌ಹೌಸ್'ನವರು. ಪ್ರಧಾನ ಸಂಪಾದಕರು ಅನಕೃ. ಆ ಮಾಲೆಯಲ್ಲಿ ಹಂಪನಾ- ಕಮಲಾ ಹಂಪನಾ ಸುಮಾರು ಹತ್ತು ಪುಸ್ತಕಗಳನ್ನು ರಚಿಸಿದ್ದಾರೆ. ನಾಡೋಜ ಪಂಪ, ಮಹಾಕವಿ ರನ್ನ, ದೇವರಾಯನದುರ್ಗ, ಕರ್ನಾಟಕ ಮತ್ತು ಜೈನಧರ್ಮ, ಕೃಷ್ಣಪಾಂಡವರು, ಭೀಮಭಕ್ತಿ ಪರೀಕ್ಷೆ- ಈ ಕೃತಿಗಳನ್ನು ಡಾ. ಹಂಪನಾ ರಚಿಸಿದರು.

ಕೋಲಾರ ಜಿಲ್ಲೆಯಲ್ಲಿರುವ ಮುಳಬಾಗಿಲು ಕುರಿತು ಡಾ. ಕಮಲಾ ಹಂಪನಾ ಅವರಿಂದಲೂ, ತುಮಕೂರು ಜಿಲ್ಲೆಯಲ್ಲಿರುವ ದೇವರಾಯನದುರ್ಗ ಕುರಿತು ಹಂಪನಾ ಅವರಿಂದಲೂ (ಅವರವರು ಹುಟ್ಟಿದ ಜಿಲ್ಲೆಗಳನ್ನು ಅದಲು ಬದಲು ಮಾಡಿ) ಬರೆಸಲಾಗಿದೆ. ದೇವರಾಯನ ದುರ್ಗದ ಪೌರಾಣಿಕ ಹಿನ್ನೆಲೆ, ಐತಿಹ್ಯಗಳು, ಚಾರಿತ್ರಿಕ ಪರಂಪರೆ, ಸ್ಥಳಪುರಾಣ, ಭೌಗೋಳಿಕ ಪರಿಸರ ಇವಿಷ್ಟೂ ಈ ಪುಸ್ತಕದಲ್ಲಿ ಚಿತ್ರಗಳ ಸಹಿತ ನಿರೂಪಿತವಾಗಿದೆ.

ಸಂ.

# ದ್ರಾವಿಡ ಭಾಷಾ ವಿಜ್ಞಾನ

**ಭಾಷಾ ವಿಜ್ಞಾನ**

| | | |
|---|---|---|
| ಡೆಮ್ಮೈ 1/8 ಆಕಾರ, ಪುಟಗಳು | : | 498+xvi |
| ಪ್ರಥಮ ಮುದ್ರಣ | : | 1966,<br>ಹರ್ಷವರ್ಧನ ಪ್ರಕಾಶನ, ಬೆಂಗಳೂರು |
| ದ್ವಿತೀಯ ಮುದ್ರಣ | : | (ಮೂರು ಸಾವಿರ ಪ್ರತಿ)<br>1976, ಡಿ. ವಿ. ಕೆ. ಮೂರ್ತಿ, ಮೈಸೂರು. |
| ಪುಟಗಳು | - | 464+xxii. |
| ತೃತೀಯ ಮುದ್ರಣ | : | (ಮೂರು ಸಾವಿರ ಪ್ರತಿ)<br>1991, ಕನ್ನಡ - ಸಂಸ್ಕೃತಿ ನಿರ್ದೇಶನಾಲಯ,<br>ಕರ್ನಾಟಕ ಸರ್ಕಾರ. |
| ಪುಟಗಳು | - | 458. |
| ನಾಲ್ಕನೆಯ (ಪರಿಷ್ಕೃತ) ಮುದ್ರಣ | : | (ಮೂರು ಸಾವಿರ ಪ್ರತಿ)<br>1994, ಡಿ. ವಿ. ಕೆ. ಮೂರ್ತಿ, ಮೈಸೂರು, |
| ಪುಟಗಳು | - | 288 |
| ಐದನೆಯ ಮುದ್ರಣ | : | 2006, ಪುಟಗಳು 274<br>ಡಿ. ವಿ. ಕೆ. ಮೂರ್ತಿ, ಮೈಸೂರು |

**ಅಭಿಪ್ರಾಯಗಳು:**

1. ಈ ಗ್ರಂಥ ವಿದ್ವಾಂಸರೆಲ್ಲಾ ಓದಬೇಕಾದುದು, ಓದುವವರೆಲ್ಲಾ ವಿದ್ವಾಂಸರೂ ಆಗಬಹುದು. ಗ್ರಂಥದ ಮೌಲ್ಯ ಅದು.

**--ಪ್ರೊ. ತೀ. ನಂ. ಶ್ರೀಕಂಠಯ್ಯ**

2. ಅತ್ಯಾಧುನಿಕ ವಿಚಾರಧಾರೆಯನ್ನೊಳಗೊಂಡು ಸಕಲ ದ್ರಾವಿಡ ಭಾಷೆಗಳ ಸಮಗ್ರ ಚಿತ್ರವನ್ನು ಪರಿಚಯ ಮಾಡಿಕೊಡುವ ಗ್ರಂಥ ಸದ್ಯಕ್ಕೆ ಇದೊಂದೇ ಎಂದು ಧಾರಾಳವಾಗಿ ಹೇಳಬಹುದು.

**--ಪ್ರೊ. ದೇಜಗೌ**

3. ದ್ರಾವಿಡ ಭಾಷಾ ವಿಜ್ಞಾನವನ್ನು ಹೊಸದಾಗಿ ವ್ಯಾಸಂಗ ಮಾಡಲಿಚ್ಛಿಸುವವರಿಗೆ ಇದೊಂದು ಉತ್ತಮ ಪ್ರವೇಶಿಕೆ: ವ್ಯಾಸಂಗ ಮಾಡಿರುವವರಿಗೆ ವಿಚಾರ ಪ್ರಚೋದಕ.

**--ಪ್ರೊ. ಎಂ. ವಿ. ಸೀತಾರಾಮಯ್ಯ**

4. ನಿಮ್ಮ ಉಪಾಧ್ಯಾಯರು ನಿಮ್ಮನ್ನು ತಮ್ಮ ವಿದ್ಯಾರ್ಥಿಗಳೆಂದು ಹೆಮ್ಮೆಯಿಂದ ಹೇಳಿಕೊಳ್ಳುವಷ್ಟು ಪ್ರೌಢವಾಗಿದೆ ನಿಮ್ಮ ಗ್ರಂಥ, ನನ್ನ ಅಭಿನಂದನೆಗಳು, ನೀವು ಮಾಡಿರುವ ಒಳ್ಳೆಯ ಕೆಲಸಕ್ಕಾಗಿ.

**--ಡಾ. ಡಿ. ಎಲ್. ನರಸಿಂಹಾಚಾರ್**

5. ಡಾ. ಹಂಪನಾ ಅವರ 'ದ್ರಾವಿಡ ಭಾಷಾ ವಿಜ್ಞಾನ' ಈ ಕ್ಷೇತ್ರದ ಪ್ರಪ್ರಥಮ ಕನ್ನಡ ಗ್ರಂಥ. ಬಹುದಿನಗಳವರೆಗೆ ಈ ಕ್ಷೇತ್ರದ ಏಕೈಕ ಕೃತಿ ಎಂಬ ಖ್ಯಾತಿಗೆ ಇದು ಪಾತ್ರವಾಗಿತ್ತು.

**--ಡಾ. ಎಂ. ಬಿ. ನೇಗಿನಹಾಳ**

6. ಹಂಪ. ನಾಗರಾಜ್ಯನವರು 'ದ್ರಾವಿಡ ಭಾಷಾವಿಜ್ಞಾನ' ಎಂಬ ಉದ್ಗ್ರಂಥವನ್ನು ರಚಿಸಿದ್ದಾರೆ. ದ್ರಾವಿಡಭಾಷಾವಿಜ್ಞಾನ ಕ್ಷೇತ್ರದಲ್ಲಿ ಇದುವರೆಗೆ ನಡೆದಿರುವ ಸಂಶೋಧನೆಯ ಫಲಗಳನ್ನೆಲ್ಲ ಅವರು ಒಂದೆಡೆಗೆ ತಂದು ಜೋಡಿಸಿದ್ದಾರೆ.

**--ಡಾ. ಹಾ. ಮಾ. ನಾಯಕ**

7. ಕನ್ನಡದಲ್ಲಿ ಭಾಷಾಶಾಸ್ತ್ರ ಕುರಿತಾದ ಗ್ರಂಥ'ಗಳಲ್ಲಿ ಇದನ್ನು ಅಗ್ರಗಣ್ಯವೆನ್ನಬಹುದು. ವಿದ್ವಾಂಸರೂ, ವಿದ್ಯಾರ್ಥಿಗಳೂ, ಭಾಷಾಶಾಸ್ತ್ರಿಗಳು ಓದಲೇ ಬೇಕಾದ ಬೃಹತ್ ಕೃತಿಯಿದು. ಗ್ರಂಥಕರ್ತರು ಕನ್ನಡಿಗರಿಗೆ ನಿಜಕ್ಕೂ ಉಪಕಾರಿಗಳು.

**-- ಪದ್ಮಶ್ರೀ. ಬಿ. ಶಿವಮೂರ್ತಿಶಾಸ್ತ್ರಿ**

8. ನೇರ ನಿರೂಪಣೆ, ಸರಳ ವಿವರಣೆ, ಸೂಕ್ತ ಪರಿಚಿತ ಉದಾಹರಣೆಗಳ ಮೂಲಕ ದ್ರಾವಿಡ ಭಾಷಾ ವಿಜ್ಞಾನ ಓದುಗರಿಗೆ ತಲುಪುವಂತೆ ಹಂಪನಾ ಮಾಡಿದ್ದಾರೆ.

**--ಡಾ. ವಿಲ್ಯಂಮಾಡ್ತಾ**

# ದ್ರಾವಿಡ ಸಂಖ್ಯಾವಾಚಕಗಳು

**ದ್ರಾವಿಡ ಭಾಷಾವಿಜ್ಞಾನ**

| | | |
|---|---|---|
| ಡೆಮ್ಮೆ 1/8 ಆಕಾರ, ಪುಟಗಳು | : | 46+iv |
| ಪ್ರಥಮ ಮುದ್ರಣ | : | 1973 |
| ಪ್ರಕಾಶಕರು | : | ಪ್ರಸಾರಾಂಗ<br>ಬೆಂಗಳೂರು ವಿಶ್ವವಿದ್ಯಾಲಯ. |

ಹಂಪನಾ ಅವರಿಂದ ರಚಿತವಾದ ಮಹತ್ವದ ಕೃತಿಗಳಲ್ಲಿ 'ದ್ರಾವಿಡ ಸಂಖ್ಯಾವಾಚಕಗಳು' ಕೃತಿಯೂ ಒಂದು. ಸಂಖ್ಯಾವಾಚಕಗಳನ್ನು ಕುರಿತು ಅವರು ಈ ಹಿಂದೆಯೇ ತಮ್ಮ ದ್ರಾವಿಡ ಭಾಷಾ ವಿಜ್ಞಾನ ಕೃತಿಯಲ್ಲಿ ಸಂಕ್ಷಿಪ್ತವಾಗಿ ಬರೆದಿದ್ದರು. ಅದೇ ವಿಷಯವನ್ನು ಮತ್ತಷ್ಟು ವಿಸ್ತಾರವಾಗಿ, ಸಂಖ್ಯಾವಾಚಕಗಳ ಮೂಲ ಚೂಲಗಳನ್ನು ಸಮಗ್ರವಾಗಿ ಪಾಂಡಿತ್ಯಪೂರ್ಣವಾಗಿ ಇಲ್ಲಿ ವಿಶ್ಲೇಷಿಸಲಾಗಿದೆ. ದ್ರಾವಿಡ ಭಾಷಾ ವಿಜ್ಞಾನದ ಬಗೆಗಿನ ಆಳವಾದ ಪಾಂಡಿತ್ಯಕ್ಕೆ ನಿದರ್ಶನವಾಗಿ ಈ ಕೃತಿ ಹೊರಬಂದಿದೆಯೆಂದು ಹೇಳಬಹುದು.

ಸಂ.

# ನಾಗಕುಮಾರ ಷಟ್ಪದಿ

**ಗ್ರಂಥ ಸಂಪಾದನೆ: ಷಟ್ಪದಿ ಕಾವ್ಯ**

| | | |
|---|---|---|
| ಡೆಮ್ಮೆ 1/8 ಆಕಾರ, ಪುಟಗಳು | : | xvi+150+878=1044 |
| ಪ್ರಥಮ ಮುದ್ರಣ | : | 1977 |
| ಪ್ರಕಾಶಕರು | : | ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ |

ಜೈನ ಪುರಾಣಗಳಲ್ಲಿ 24 ಜನ ಕಾಮದೇವರ ವಿಚಾರ ವರ್ಣಿತವಾಗಿದೆ. ಅವರಲ್ಲೊಬ್ಬನಾದ ನಾಗಕುಮಾರನನ್ನು ಕಥಾನಾಯಕನನ್ನಾಗಿಸಿ ರಚಿಸಿರುವ ಭಾಮಿನಿ ಷಟ್ಪದಿಯ ಈ ಕಾವ್ಯ ಬೊಮ್ಮಣ ಕವಿಯದು. ಇದುವರೆಗೆ ಅಪ್ರಕಟಿತವಾಗಿದ್ದ ಈ ಕಾವ್ಯದ ಎರಡು ಓಲೆಗರಿ ಹಸ್ತಪ್ರತಿಗಳನ್ನು ಸಂಶೋಧಿಸಿ, ಅಚ್ಚಿನ ಪ್ರತಿಯನ್ನು ಸಿದ್ಧಪಡಿಸಿ ಇದನ್ನು ಶ್ರಮವಹಿಸಿ ಹೊರತಂದಿದ್ದಾರೆ. ಈ ಕಾವ್ಯದಲ್ಲಿ 2988 ಷಟ್ಪದಿ ಪದ್ಯಗಳಿವೆ. ಕವಿ ಬೊಮ್ಮಣನು ತುಮಕೂರು ಜಿಲ್ಲೆಯ ಬಿದರೆ (ವೇಣುಪುರ) ಗ್ರಾಮದವನು. ನಾಗೇಂದ್ರನ ಮಗನಾದ ಬೊಮ್ಮಣನು ಶ್ರೀರಂಗಪಟ್ಟಣದ ಇಮ್ಮಡಿ ಕೃಷ್ಣರಾಜೇಂದ್ರನ ಕಾಲದಲ್ಲಿ, ಕ್ರಿ. ಶ. 1740 ರಲ್ಲಿ ಜೀವಿಸಿದ್ದನು. ಆದಿಪುರಾಣ ಯಕ್ಷಗಾನ ಈ ಕವಿಯ ಇನ್ನೊಂದು ಕೃತಿ. ಬಾಹುಬಲಿ ಮತ್ತು ವರ್ಧಮಾನ ಕವಿಗಳು ಸಂಯುಕ್ತವಾಗಿ ರಚಿಸಿದ್ದ 'ನಾಗಕುಮಾರ ಚರಿತೆ' (ಸಾಂಗತ್ಯ) ಕಾವ್ಯವೇ ಈ ಬೊಮ್ಮಣ ಕವಿಗೆ ಆಧಾರ. ಹಲವು ದೃಷ್ಟಿಗಳಿಂದ ಮಹತ್ವಪಡೆದಿದ್ದ ಈ ಕೃತಿಯನ್ನು ಹಂಪನಾ ಉತ್ತಮವಾಗಿ ಸಂಪಾದಿಸಿದ್ದಾರೆ.

**ಅಭಿಪ್ರಾಯಗಳು:**

1. ಗ್ರಂಥ ಸಂಪಾದಕರ ಸರಿತೂಕದ ಸಮರ್ಥ ಪರಿಶೀಲನೆಗಳಿಂದ ಈ ಕಾವ್ಯ. ಆಪ್ಯಾಯಮಾನವಾಗುತ್ತದೆ. ನಾಗಕುಮಾರನನ್ನು ಕುರಿತು ಸಂಸ್ಕೃತ, ಪ್ರಾಕೃತ, ಕನ್ನಡ ಭಾಷೆಗಳಲ್ಲಿ ಯಾವ ಕೃತಿಗಳು ಬಂದಿವೆಯೆಂಬುದನ್ನು ಸಂಪಾದಕರು ಅವುಗಳ ರೂಪರೇಖೆಯೊಂದಿಗೆ ಪ್ರಸ್ತಾಪಿಸಿದ್ದಾರೆ. ** ಕಾವ್ಯ ಸಮೀಕ್ಷೆಯನ್ನೆತ್ತಿಕೊಂಡು ಉತ್ತಮ-ನ್ಯಾಯಾಧೀಶನಂತೆ ತೀರ್ಪುಕೊಟ್ಟಿದ್ದಾರೆ. * ನಾಗಕುಮಾರನ ಕತೆಯಲ್ಲಿ ಅಡಕವಾಗಿರುವ ಜನಪದ ಆಶಯಗಳನ್ನು ಸಂಪಾದಕರು ಚೆನ್ನಾಗಿ ನಿರೂಪಿಸಿದ್ದಾರೆ.* ಈ ಕತೆಯಲ್ಲಿ ಪುಷ್ಪದಂತಾದಿಗಳ ಪ್ರಾಕೃತ ಪರಂಪರೆ, ಜಯದೇವ- ಮಲ್ಲಿಷೇಣಾದಿಗಳ ಸಂಸ್ಕೃತ ಪರಂಪರೆ,

ಶ್ರೀ ಪಂಚಮೀ ನೋಂಪಿಯ ಪರಂಪರೆ- ಹೀಗೆ ಎರಡು ಮೂರು ಪರಂಪರೆಯಿರುವುದನ್ನು ಪತ್ತೆಮಾಡಿದ್ದಾರೆ.

** ಈ ಗ್ರಂಥದ ಸಂಪಾದನೆ ಇನ್ನಷ್ಟು ಯಶಸ್ವಿಯಾಗಿರುವುದು ಅವಶ್ಯಕ ಅನುಬಂಧಗಳಿಂದ. * ಈ ಸಂಪಾದನೆಯಿಂದ ಒಂದು ಕೃತಿಗೆ ಹೊಸತಾದ ಜೀವದಾನ ಮಾಡಿದಂತಾಗಿದೆ. ಓರ್ವ ಪುರಾಣ ಪುರುಷನ ಜೀವನ ಕಥೆಗೆ ಹಾಗೂ ಅದೇ ಜೀವದಾನ ಕಥೆಯುಳ್ಳ ಇತರ ಸಾಹಿತ್ಯ ಕೃತಿಗಳಿಗೆ ಕೂಡ ನವಚೇತನವನ್ನು ಮೂಡಿಸಿದಂತಾಗಿದೆ. ಈ ಕೃತಿ ವಿಶೇಷಾಧ್ಯಯನಕ್ಕೂ ಸಂಶೋಧನೆಗೂ ಹೊಸ ಬಾಗಿಲು ತೆರೆದಂತಾಗಿದೆ.

**--ವಿದ್ವಾನ್ ಟಿ. ಕೇಶವಭಟ್**

2. ನಾಗಕುಮಾರ ಷಟ್ಪದಿಯ 150 ಪುಟಗಳ ವಿಸ್ತಾರವಾದ ಪ್ರಸ್ತಾವನೆ ಅವರ ಸುದೀರ್ಘ ಕಾಲದ ಸತ್ಫಲಗಳನ್ನು ಗರ್ಭೀಕರಿಸಿಕೊಂಡಿದೆ. *ಕಾವ್ಯಾಭ್ಯಾಸಿಗಳಿಗೆ ಮುಂದಿನ ಸಂಶೋಧನೆಗಳಿಗೆ, ವಿಮರ್ಶಕರಿಗೆ ಅನುಕೂಲವಾಗುವಂತೆ, ಆಶ್ಚರ್ಯಕರವಾದ ರೀತಿಯಲ್ಲಿ ಹೇರಳವಾದ ಸಾಮಗ್ರಿಯನ್ನು ರಾಶಿರಾಶಿಯಾಗಿ ಸಂಗ್ರಹಿಸಿಕೊಟ್ಟು, ಪ್ರಸ್ತಾವನೆಯ ಉಪಯುಕ್ತತೆಯನ್ನು ಹೆಚ್ಚಿಸಿರುವುದು, ಆ ಮೂಲಕ ಒಟ್ಟು ಕೃತಿಯ ಘನತೆಯನ್ನು ಹೆಚ್ಚಿಸಿರುವುದು ಹಂಪನಾ ಅವರ ಶಿಸ್ತಿನ ಸತತ ಅಭ್ಯಾಸಕ್ಕೆ, ನಿರಂತರ ಪರಿಶ್ರಮಕ್ಕೆ ಸಾಕ್ಷಿಯಾಗಿದೆ.

**--ಡಾ. ಎಸ್. ಎನ್. ಕೋತಿನ**

# ನಾಗಚಂದ್ರ : ಇತಿವೃತ್ತ

**ಸಂಶೋಧನ ಕೃತಿ**

| | | |
|---|---|---|
| ಡೆಮ್ಮೈ 1/8 ಆಕಾರ, ಪುಟಗಳು | : | 92+20=112. |
| ಪ್ರಥಮ ಮುದ್ರಣ | : | 1992 (1-6-92) |
| ಪ್ರಕಾಶಕರು | : | ವಿದ್ಯಾನಿಧಿ ಪ್ರಕಾಶನ,<br>ಗದಗ - 582 102 |

ನಾಗಚಂದ್ರನು ಚಂಪೂ ಸಾಹಿತ್ಯ ಪ್ರಕಾರದಲ್ಲಿ ಗಣ್ಯನಾದ ಕವಿ. ಈತನ ಮಲ್ಲಿನಾಥ ಪುರಾಣ ಮತ್ತು ರಾಮಚಂದ್ರ ಚರಿತ ಪುರಾಣ (ಪಂಪರಾಮಾಯಣ) ಶ್ರೇಷ್ಠ ದರ್ಜೆಯ ಪ್ರೌಢ ಕಾವ್ಯಗಳು. ನಾಗಚಂದ್ರನ ದೇಶ ಕಾಲ ಪರಿಸರ ಕುರಿತು ನೂರು ವರ್ಷಗಳಿಂದ ವಾದ- ವಿವಾದ ನಡೆದಿದೆ. ಹಂಪ. ನಾಗರಾಜಯ್ಯ ಈ ವಿವಾದಗಳಿಗೆ, ತಮ್ಮ ಖಚಿತ ಸಂಶೋಧನೆಯಿಂದ, ತೆರೆ ಎಳೆದಿದ್ದಾರೆ. ಅಂತರ-ಬಾಹ್ಯ ಪ್ರಮಾಣಾಧಾರ ಮತ್ತು ಶಾಸನಗಳ ಸಹಾಯದಿಂದ ಅವರು ಕೈಗೊಂಡ ಸುದೀರ್ಘ ಸಂಶೋಧನೆಯ ಫಲಿತಗಳನ್ನು ಇಲ್ಲಿ ಮಂಡಿಸಿದ್ದಾರೆ. ನಾಗಚಂದ್ರ ಕವಿಯ ಸ್ಥಳ, ವಂಶವೃಕ್ಷ, ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು, ಗುರುಗಳು- ಕುರಿತ ಮಾಹಿತಿಗಳನ್ನು ನಿಚ್ಚಳವಾಗಿರಿಸಿದ್ದಾರೆ, ಹೊಸ ಬೆಳಕು ಬೀರಿದ್ದಾರೆ.

ಇದು, ಇದೇ ಲೇಖಕರ, 'ನಾಗಚಂದ್ರನ ಕಾಲ- ಸ್ಥಳ' (1989) ಎಂಬ ಪುಸ್ತಕದ ಪರಿಷ್ಕೃತ (ತಿದ್ದಿದ) ಮುದ್ರಣ.

ಈ ಸಂಶೋಧನ ಗ್ರಂಥವನ್ನು ಆಸ್ಥಾನ ವಿದ್ವಾಂಸರೂ ಪಂಡಿತರತ್ನರೂ ಆದ ಎರ್ತೂರು ಶಾಂತಿರಾಜ ಶಾಸ್ತ್ರಿಗಳ ಶತಮಾನೋತ್ಸವ ನೆನಪಿಗೆ (1888-1988) ಅರ್ಪಿಸಿದ್ದಾರೆ.

ಸಂ.

# ನಾಗಚಂದ್ರನ ಕಾಲ- ಸ್ಥಳ

**ಸಂಶೋಧನ ಕೃತಿ**

| | | |
|---|---|---|
| ಡೆಮ್ಮೈ 1/8 ಆಕಾರ, ಪುಟಗಳು | : | 80+xvi |
| ಪ್ರಥಮ ಮುದ್ರಣ | : | 1989 |
| ಪ್ರಕಾಶಕರು | : | ಅನುಗ್ರಹ ಪ್ರಕಾಶನ, ಬೆಂಗಳೂರು |

"ಡಾ. ಹಂಪನಾ ಅನೇಕ ವರ್ಷಗಳಿಂದ ನಾಗಚಂದ್ರನ ಚರಿತ್ರೆಯ ಶೋಧದಲ್ಲಿ ತೊಡಗಿಕೊಂಡವರು, ಇದರ ಫಲವೆನಿಸಿದ ಈ ಪುಸ್ತಿಕೆ 58 ಪ್ಯಾರಾಗಳಲ್ಲಿ ಹಂಚಿಹೋಗಿದೆ. ಮೊದಲಿನ 48 ಪ್ಯಾರಾಗಳಲ್ಲಿ ನಾಗಚಂದ್ರನ ಜೀವಿತದ ಕಾಲಾವಧಿ -ಗುರು ಪರಂಪರೆಗಳನ್ನೂ, ಆಮೇಲಿನ ಪ್ಯಾರಾಗಳಲ್ಲಿ ಕವಿಯ ಗ್ರಾಮ- ವಂಶಾವಳಿಗಳನ್ನೂ ಚಿತ್ರಿಸಲಾಗಿದೆ. ಪೂರ್ವಾರ್ಧ ಹೊಸ ಹೊಸ ಆಕರ ವ್ಯಾಖ್ಯಾನಗಳಿಂದ ಇಡಿ ಕಿರಿದಿದ್ದು, ಉತ್ತರಾರ್ಧ ಈವರೆಗಿನ ಶೋಧಗಳ ಆಳವಾದ ಪರಿಶೀಲನೆ ಎನಿಸಿದೆ.

ಶಾಖೋಪಶಾಖೆಯಾಗಿ ಹಬ್ಬಿರುವ ಜೈನ ಗುರುಪರಂಪರೆಯ ಅಧ್ಯಯನ ದಿಕ್ಕು ತಪ್ಪಿಸುವಷ್ಟು ಜಟಿಲವಾಗಿದೆ. ನಾಗಚಂದ್ರನ ಗುರುಪರಂಪರೆ ಇದಕ್ಕೆ ಪರಮಾವಧಿ ನಿದರ್ಶನ. ಹೀಗಿದ್ದೂ ಎಲ್ಲ ಎಳೆಗಳನ್ನು ಸೂಕ್ಷ್ಮವಾಗಿ ಬಿಡಿಸಿಕೊಂಡು ಮತ್ತೆ ಗಟ್ಟಿಯಾಗಿ ಜೋಡಿಸಿಕೊಳ್ಳುವಲ್ಲಿ ವಹಿಸಿದ ಶ್ರಮ, ತೋರಿದ ಸಂಯಮ, ಮೆರೆದ ಚಾರಿತ್ರಿಕ ಪ್ರಜ್ಞೆ ಡಾ. ಹಂಪನಾ ಅವರಿಗೆ ಮಾತ್ರ ಸಾಧ್ಯವೆಂದು ನಮ್ಮ ಸ್ಪಷ್ಟ ಅಭಿಪ್ರಾಯ. ಆಕರಗಳನ್ನು ಆಧಾರವಾಗಿರಿಸಿಕೊಳ್ಳುವವರಿಗೆ ಮಾದರಿಯೆಂಬಂತೆ ಮೂಡಿ ಬಂದಿರುವ ಈ ಭಾಗ ಈ ಪುಸ್ತಕದ ಬೆಲೆಯುಳ್ಳ ಬರವಣಿಗೆಯಾಗಿದ್ದು, ಇದರ ನಿರೂಪಣೆಯೂ ಗಣಿತದಂತೆ ನಿರ್ದಿಷ್ಟಗತಿಯಲ್ಲಿ ನಡೆದು, ಸಂಶೋಧನೆಯ ಶಿಸ್ತಿಗೆ ಅದ್ಭುತವಾಗಿ ಒಳಪಟ್ಟಿದೆ.

ಆರ್. ನರಸಿಂಹಾಚಾರ್ ಅವರ ಕರ್ಣಾಟಕ ಕವಿಚರಿತೆಯ ಆಮೂಲಾಗ್ರ ಪರಿಷ್ಕರಣ ಇಂದಿನ ಬಹುಮುಖ್ಯ ಕೆಲಸವಾಗಿರುವಂತೆ, ಈ ತಲೆಮಾರಿನ ಸಂಶೋಧಕರಿಗೆ ಬಹುದೊಡ್ಡ ಆಹ್ವಾನವೂ ಆಗಿದೆ. ಆಗಾಗ ಈ ಆಹ್ವಾನಕ್ಕೆ ವಿನಮ್ರವಾಗಿ ಸ್ಪಂದಿಸುತ್ತ ಬಂದ ಡಾ. ಹಂಪನಾ ಅವರ ಈ ಕೃತಿ, ಆಕರಗಳ ಸಂಗ್ರಹ, ಶೋಧ, ಅವುಗಳ ಪರಿಶೀಲನ, ವರ್ಗೀಕರಣ, ವ್ಯಾಖ್ಯಾನ ಮತ್ತು ಕ್ರಮಬದ್ಧ ನಿರೂಪಣೆ ಇತ್ಯಾದಿ ಗುಣಗಳಿಂದಾಗಿ ಕರ್ಣಾಟಕ ಕವಿಚರಿತೆಗೆ ಒಂದು ಯೋಗ್ಯ ತಿದ್ದುಪಡಿಯಾಗಿದೆ, ಕನ್ನಡ ವಿದ್ವತ್ ಕ್ಷೇತ್ರಕ್ಕೆ ಮಹತ್ವದ ಕೊಡುಗೆಯಾಗಿದೆ.

ಡಾ. ಹಂಪನಾ ಅವರು ಕಳೆದ ಮೂರು ದಶಕಗಳಿಂದ ಕನ್ನಡದ ಪ್ರಸಿದ್ಧಿ ಪ್ರಸಾರ ಚಟುವಟಿಕೆಗಳ ಮುಖ್ಯ ಭಾಗವಾಗಿ ಬೆಳೆದಿದ್ದಾರೆ. ಈ ಚಟುವಟಿಕೆಗಳ ಅಬ್ಬರದಲ್ಲಿ ಅವರ ವಿದ್ವತ್ತಿನ ಧ್ವನಿ, ನನ್ನಂಥ ಕೆಲವರನ್ನು ಬಿಟ್ಟರೆ, ಬಹುಜನರಿಗೆ ಕೇಳಿಸದೆ ಹೋದುದು ವಿಷಾದದ ಸಂಗತಿ. ಆ ಧ್ವನಿಯ ಒಂದು ಅಲೆಯಾಗಿರುವ ಈ ಕೃತಿಯಿಂದಾಗಿ ಹಂಪನಾ ಅವರ 'ನಿಜದ ನೆಲೆ'ಯನ್ನು ಕನ್ನಡ ಲೋಕ ಇನ್ನು ಮೇಲಾದರೂ ವ್ಯಾಪಕವಾಗಿ ಗುರುತಿಸುವುದೆಂದು ನಂಬುತ್ತೇನೆ. ಈ ಉತ್ತಮ ಕೃತಿ ರಚನೆಗಾಗಿ ಅವರನ್ನು ಅಭಿನಂದಿಸುತ್ತೇನೆ"

**- ಡಾ. ಎಂ. ಎಂ. ಕಲಬುರ್ಗಿ**

**'ಮುನ್ನುಡಿ'ಯಿಂದ.**

# ನಾಗಶ್ರೀ

**ಪೌರಾಣಿಕ ಕಾದಂಬರಿ**

| | | |
|---|---|---|
| ಕ್ರೌನ್ 1/8 ಆಕಾರ, ಪುಟಗಳು | : | 143 |
| ಮೊದಲನೆಯ ಮುದ್ರಣ | : | 1965 (11-01-1965) ಕರ್ನಾಟಕ ಸಹಕಾರಿ ಪ್ರಕಾಶನ ಚಾಮರಾಜಪೇಟೆ, ಬೆಂಗಳೂರು. |
| ಎರಡನೆಯ ಮುದ್ರಣ | : | 1975. ವಿವೇಕೋದಯ ಗ್ರಂಥಮಾಲೆ, ಗುಡಿಬಂಡೆ. |
| ಮೂರನೆಯ ಮುದ್ರಣ | | 1985. ವರ್ಧಮಾನ ಪ್ರಕಾಶನ, ಬೆಂಗಳೂರು. |
| ನಾಲ್ಕನೆಯ ಮುದ್ರಣ | | 1995 (13-04-1995) ವಿದ್ಯಾನಿಧಿ ಪ್ರಕಾಶನ, ಗದಗ. |

ಭ್ರಾಜಿಷ್ಣು ಕನ್ನಡದ ಪ್ರಾಚೀನ ಲೇಖಕ, ಸುಮಾರು ಕ್ರಿ. ಶ. 800 ರಲ್ಲಿ ಇದ್ದವನು. ಸೊಗಸಾದ ಕಥೆಗಾರ. ಆತನ ಕಥಾನಿರೂಪಣೆಯ ಶೈಲಿ, ಅಳವಡಿಸುವ ತಂತ್ರ ಇಂದಿಗೂ ಆಧುನಿಕ ಹಾಗೂ ಸಮಕಾಲಿಕ ಎನಿಸುವಷ್ಟು ಹೊಸತನದ ಜೀವಕಳೆಯಿಂದ ಕೂಡಿದೆ. 'ಆರಾಧನಾ ಕರ್ಣಾಟ ಟೀಕಾ' ಎಂಬ ಹೆಸರಿನ ಆತನ ಕಥಾಸಂಕಲನದ 19 ಕಥೆಗಳು 'ವಡ್ಡಾರಾಧನೆ' ಎಂಬ ಹೆಸರಿನಿಂದ ಜನಪ್ರಿಯವಾಗಿವೆ. ಅದರಲ್ಲಿನ ಮೊದಲನೆಯ 'ಸುಕುಮಾರ ಸ್ವಾಮಿಯ ಕಥೆ'ಯನ್ನು ಆಧರಿಸಿ ರಚಿಸಿರುವ ಪೌರಾಣಿಕ ಕಾದಂಬರಿ ಈ 'ನಾಗಶ್ರೀ'.

ಈ ಕಾದಂಬರಿಯನ್ನು ಲೇಖಕರು ತಮ್ಮ ತಾಯಿ ಪದ್ಮಾವತಮ್ಮನವರಿಗೂ, ತಂದೆ ಶ್ಯಾನುಭೋಗ ಪದ್ಮನಾಭಯ್ಯನವರಿಗೂ ಅರ್ಪಿಸಿದ್ದಾರೆ.

**ಅಭಿಪ್ರಾಯ:**

ನಾಗಶ್ರೀ ಕಾದಂಬರಿ ಹತ್ತು ಸ್ಥಿರ ಶೀರ್ಷಿಕೆಗಳನ್ನು ಒಳಗೊಂಡಿದ್ದು, ಒಂದೊಂದರಲ್ಲೂ ಕಥಾ ಭಿತ್ತಿ ಮೊಟಕಾಗದೆ ಮುಂದೆ ಸರಿಯುವುದರಿಂದಲೇ, ಕಾದಂಬರಿ ಸುಲಭವಾಗಿ ಓದಿಸಿಕೊಂಡು ಹೋಗುವ ತಂತ್ರವನ್ನು ಕಾದಂಬರಿಕಾರರು ಯಶಸ್ವಿಯಾಗಿ ಉಪಯೋಗಿಸಿಕೊಂಡಿದ್ದಾರೆ. ಕಾದಂಬರಿಯ ವಸ್ತು ಪೌರಾಣಿಕವಾದರೂ, ಸಮಕಾಲೀನ ಪ್ರಜ್ಞೆಯಿಂದಾಗಿ ಕಾದಂಬರಿ ಸಾರ್ವತ್ರಿಕ ಮನ್ನಣೆಗೆ ಪಾತ್ರವಾಗುತ್ತದೆ. ಕಾದಂಬರಿಯಲ್ಲಿ ಬಳಸಿರುವ ಜನಪದ ಆಟಗಳು, ಗಾದೆ, ನಾಣ್ನುಡಿಗಳು, ಜೊತೆಗೆ ವಿಧಿ ಸಂಪ್ರದಾಯ- ಇವೆಲ್ಲ ಕಾದಂಬರಿಕಾರರಿಗಿರುವ ವಿಸ್ತಾರವಾದ ಪರಿಜ್ಞಾನದ ದ್ಯೋತಕವಾಗಿದೆ. ಹಾಗೆಯೇ ಪಾತ್ರ ಪೋಷಣೆಯೂ ಸಂದರ್ಭಕ್ಕೆ ತಕ್ಕಂತೆ ಬಂದಿದೆ. ಮತ್ತೆ ಮತ್ತೆ ಮೆಲುಕುಹಾಕಬಲ್ಲ ಆಹಾರವೂ ಕಾದಂಬರಿಯಲ್ಲಿದೆ.

**--ಡಾ. ಚಿಕ್ಕಣ್ಣ ಯೆಣ್ಣೆಕಟ್ಟೆ**

## ನಾಡೋಜ ಪಂಪ

**ಶಿಶುಸಾಹಿತ್ಯ**

| | | |
|---|---|---|
| ಕ್ರೌನ್ 1/8 ಆಕಾರ, ಪುಟಗಳು | : | 54 |
| ಪ್ರಥಮ ಮುದ್ರಣ | : | 1971 |
| ದ್ವಿತೀಯ ಮುದ್ರಣ | : | 1971 |
| ತೃತೀಯ ಮುದ್ರಣ | : | 1972 |
| ಪ್ರಕಾಶಕರು | : | ಐಬಿಎಚ್ ಪ್ರಕಾಶನ,<br>ಬೆಂಗಳೂರು- 560 009 |

ಕನ್ನಡದ ಆದಿಕವಿ ಎಂಬುದಾಗಿ ಕೀರ್ತಿಶಾಲಿಯಾಗಿರುವ ಮಹಾಕವಿ ಪಂಪನ ಇತಿವೃತ್ತವನ್ನೂ, ಆತನ ವಿಕ್ರಮಾರ್ಜುನ ವಿಜಯ ಮತ್ತು ಆದಿಪುರಾಣ ಎಂಬೆರಡು ಮಹಾಕಾವ್ಯಗಳನ್ನು ತಿಳಿಗನ್ನಡದಲ್ಲಿ ಎಳೆಯರಿಗೆ ತಿಳಿಸಿಕೊಡುವ ಸಲುವಾಗಿ ಬರೆದ ಪುಸ್ತಕ. ಕೆಲವು ಊಹಾತ್ಮಕ ಚಿತ್ರಗಳೂ ಸೇರ್ಪಡೆಯಾಗಿವೆ.

ಕಥೆ ಹೇಳುವ ಧಾಟಿಯಲ್ಲಿ, ಮಕ್ಕಳಿಗೆ ಹಿಡಿಸುವಂತೆ, ಬೇಸರವಾಗದಂತೆ ಸ್ವಾರಸ್ಯವಾದ ನಿರೂಪಣೆಯಿಂದ ಈ ಗ್ರಂಥ ಜನಪ್ರಿಯವಾಗಿದೆ. ದೊಡ್ಡವರೂ ಇದನ್ನು ಓದುವ ಹಾಗಿದೆ. ಪಂಪನು ನಾಡೋಜ, ಎಂದರೆ ಇಡಿಯ ಕನ್ನಡ ಅಕ್ಷರ ಲೋಕದ ಆಚಾರ್ಯ ಎಂಬ ಅರ್ಥ ಬರುವ ರೀತಿಯಲ್ಲಿ ಗ್ರಂಥದ ಸಂಯೋಜನೆ ಇದೆ. ಪಂಪನ ಕಾವ್ಯಗಳನ್ನು ಚೆನ್ನಾಗಿ ಓದಿಕೊಂಡಿರುವ ಸಾಹಿತಿಗಳಲ್ಲಿ ಹಂಪನಾ ಒಬ್ಬರೆಂಬುದು ಎಲ್ಲರಿಗೂ ಗೊತ್ತಿರುವ ವಿಷಯ.

**ಅಭಿಪ್ರಾಯ:**

ಪಂಪ ಕವಿಯನ್ನು ಕುರಿತು ಬರೆದ ಈ ಕಿರುಹೊತ್ತಿಗೆ ಶಿಶು ಸಾಹಿತ್ಯ ಚರಿತ್ರೆಯಲ್ಲಿ ಮೈಲಿಗಲ್ಲು.

**--ಸಿ. ಹನುಮಂತರಾಯಪ್ಪ**

# ನೆನಪಿನಂಗಳದಲ್ಲಿ ಮಾಸ್ತಿ

**ವ್ಯಕ್ತಿಚಿತ್ರಣ**

| | | |
|---|---|---|
| ಡೆಮ್ಮೈ 1/8 ಆಕಾರ, ಪುಟಗಳು | : | 80+xxxii |
| ಪ್ರಥಮ ಮುದ್ರಣ | : | 1993 |
| ಪ್ರಕಾಶಕರು | | ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು |

ಇಪ್ಪತ್ತನೆಯ ಶತಮಾನದ ಕನ್ನಡದ ಮಹಾನ್ ಸಾಹಿತಿಗಳಲ್ಲಿ ಒಬ್ಬರಾದ ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್ (ಶ್ರೀನಿವಾಸ) ಅವರ ನಿಡುಬಾಳನ್ನು ಹತ್ತಿರದಿಂದ ಬಲ್ಲವರು, ಅವರ ನಿಕಟವರ್ತಿಗಳ ಬಳಗಕ್ಕೆ ಸೇರಿದವರು ಹಂಪ. ನಾಗರಾಜಯ್ಯ. ಮಾಸ್ತಿಯವರ ಬದುಕಿನ ಒಲವು-ನಿಲವು, ಸವಿ - ಕಾಂತಿಗಳನ್ನು ಬೊಗಸೆ ಬೊಗಸೆಯಾಗಿ, ಸಿಹಿಸಿಹಿಯಾಗಿ ಹಿಡಿದಿಟ್ಟಿರುವುದು ಈ ಪುಸ್ತಕದ ಸಾಧನೆ. ಈ ಕೃತಿಗೆ ಇನ್ನೊಬ್ಬ ಹಿರಿಯ ಸಾಹಿತಿ ಡಾ. ಚದುರಂಗ ಮುನ್ನುಡಿ ಬರೆದಿದ್ದಾರೆ.

**ಅಭಿಪ್ರಾಯಗಳು:**

1. 'ನೆನಪಿಂಗಳದಲ್ಲಿ ಮಾಸ್ತಿ' ಒಂದು ಅಪೂರ್ವ ಗ್ರಂಥ. ಕನ್ನಡದಲ್ಲಿ ಇಷ್ಟೊಂದು ಆಪ್ತವಾಗಿ ಬಂದಿರುವ ಇನ್ನೊಂದು ಜೀವನ ಚರಿತ್ರೆಯನ್ನು ನಾನಂತೂ ಓದಿಲ್ಲ: ಅಥವಾ ನನ್ನ ಕಣ್ಣಿಗೆ ಬಿದ್ದಿಲ್ಲ. ಹಂಪ. ನಾಗರಾಜಯ್ಯನವರು ಮಾಸ್ತಿಯವರ ಜೊತೆಗೆ ನೆರಳಿನಂತೆ ಇದ್ದುಕೊಂಡು ಆ ದೊಡ್ಡ ಚೇತನದ ದೀಪ್ತಿಯನ್ನು, ಇಂಗ್ಲಿಷಿನಲ್ಲಿ ಜಾನ್‌ಸನ್‌ಗೆ ಬಾಸ್ವೆಲ್ ಆದಂತೆ, ಮಾಸ್ತಿಯವರಿಗೆ ಕನ್ನಡದ ಬಾಸ್ವೆಲ್ ಆಗಿ, ನಮ್ಮ ಕಣ್ಣಿನ ಮುಂದೆ ಮಾಸ್ತಿಯವರನ್ನು ಕುಶಲ ಕುಂಚದಿಂದ ವೈಭವೋಪೇತವಾಗಿ ಬೆಳೆಸುತ್ತಾರೆ. ಜೊತೆಗೆ ತಾವೂ ಬೆಳೆದು ನಿಲ್ಲುತ್ತಾರೆ; ಹಾಗೆಯೇ ಕನ್ನಡಿಗರೆಲ್ಲರ ಕೃತಜ್ಞತೆಗೂ ಪಾತ್ರರಾಗುತ್ತಾರೆ.

--ಚದುರಂಗ

'ಮುನ್ನುಡಿ'ಯಿಂದ

2. ಈಚಿನ ದಿನಗಳಲ್ಲಿ ಇಷ್ಟು ಲವಲವಿಕೆಯ ಪುಸ್ತಕವನ್ನು ನಾನು ಓದಿರಲಿಲ್ಲ. ಪುಸ್ತಕದ ಹೊಳಪಿನ ಸಾಲುಗಳು ತಮ್ಮ-ಅವರ ನಡುವಣ ಗಾಢ ಸಂಪರ್ಕ, ಸ್ನಿಗ್ಧ ಸ್ನೇಹ, ನಿರ್ವ್ಯಾಜ ಪ್ರೀತಿಗಳನ್ನು ಹೊರಚೆಲ್ಲುತ್ತವೆ. ಇತರರು ಕಾಣಲಾಗದ, ಊಹಿಸಲಾಗದ ಮಾಸ್ತಿ ಬದುಕಿನ

ಒಳಮೊಗಗಳು ಹಲವು ಇಲಿವೆ. ಅವರ ವ್ಯಕ್ತಿತ್ವದ ಗುಣ- ದೌರ್ಬಲ್ಯಗಳೆರಡೂ ಇಲ್ಲಿ ಗಾಂಭೀರ್ಯದ ಅಂಚು ದಾಟದೆ ಸಂಸ್ಕಾರಯುತವಾಗಿ ಚಿತ್ರಿತವಾಗಿವೆ. ಇದೊಂದು ಅಪರೂಪದ ಪುಸ್ತಕ.

**-- ಡಾ. ಎನ್. ಎಸ್. ತಾರಾನಾಥ**

3. ಆಭರಣ ಪ್ರಸಂಗಗಳ ಒಂದು ಪುಟ್ಟ ಪೆಟ್ಟಿಗೆ 'ನೆನಪಿಂಗಳದಲ್ಲಿ ಮಾಸ್ತಿ'

**-- ಡಾ. ಹಾ. ಮಾ. ನಾಯಕ**

4. ಈ ಕೃತಿಯಲ್ಲಿ ಹಂಪನಾ ಅವರು ಮಾಸ್ತಿಯವರ ಜೀವನ - ಸಾಧನೆ- ಸಿದ್ಧಿ ಗುಣಸ್ವಭಾವ ವ್ಯಕ್ತಿವೈಶಿಷ್ಟ್ಯಗಳನ್ನು ತುಂಬ ಆತ್ಮೀಯವಾಗಿ ಆಪ್ಯಾಯಮಾನವಾಗಿ ಬಿಡಿಸಿ ತೋರಿಸಿದ್ದಾರೆ. ಇದೊಂದು ಮಾಸ್ತಿಯವರ ಸುಸಂಸ್ಕೃತ ಶ್ರೀಮಂತ ಬದುಕಿನ ದರ್ಶನ ಮಾಡಿಸುವ ರಂಗಶಾಲೆಯಾಗಿದೆ. ಅಪೂರ್ವವಾದ ನಿರೂಪಣೆ, ಸಮತೂಕದ ನಿರರ್ಗಳ ವಿಚಾರ ಸರಣಿಗಳಿಂದ ಈ ಕೃತಿ ಓದುಗನಿಗೆ ಹೊಸ ಅನುಭವವನ್ನು ಕೊಡುತ್ತದೆ.

**-- ಡಾ. ವೀರಣ್ಣ ರಾಜೂರ**

5. ಮೇಸ್ಟ್ರೆ, ನೀವು ಸ್ವಲ್ಪ ನಿಮ್ಮ ಸಂಶೋಧನೆ ಪಕ್ಕಕ್ಕಿಟ್ಟು, ಇಂಥ ಬರವಣಿಗೆ ಮಾಡಿ.

**-- ಡಾ. ಡಿ. ಆರ್. ನಾಗರಾಜ್**

## ಪುಣ್ಯಕೋಟಿ

ಗೋವಿನ ಕಥೆ – ಮಕ್ಕಳ ಪುಸ್ತಕ

| | | |
|---|---|---|
| ರಾಯಲ್ 1/4 ಆಕಾರ, ಪುಟಗಳು | : | 100 |
| ಪ್ರಥಮ ಮುದ್ರಣ | : | 2006 |
| ಪ್ರಕಾಶಕರು | : | ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ<br>ಶ್ರೀ ಆದಿಚುಂಚನಗಿರಿ ಕ್ಷೇತ್ರ<br>ಮಂಡ್ಯ ಜಿಲ್ಲೆ |

"ಭಾರತೀಯ ಸಂಸ್ಕೃತಿಯಲ್ಲಿ ಗೋವು ಮಹತ್ವದ ಸ್ಥಾನ ಪಡೆದಿದೆ. ಭಾರತೀಯರಿಗೆ ಅದು ಕೇವಲ ಪ್ರಾಣಿಯಲ್ಲ. ನಮ್ಮ ಸಂಸ್ಕೃತಿಯ ಪ್ರತೀಕ. ಗೋವು ಎಂದರೆ ಪೂಜ್ಯ ಭಾವನೆ. ರೈತರ ಪಾಲಿಗಂತೂ ಜೀವದ ಗೆಳೆಯ, ಪ್ರೀತಿಯ ಮಕ್ಕಳಿಗೆ ತ್ಯಾಗಮಯಿ ತಾಯಿ ಇದ್ದಂತೆ. ಜನಪದ ಕಾವ್ಯದಲ್ಲಿ ಗೋವಿಗೆ ಸಂಬಂಧಿಸಿದಂತೆ ಬರುವ ಗೋವಿನ ಹಾಡು ಚಿರಪರಿಚಿತವಾದುದು. ನಮ್ಮ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಸತ್ಯ, ನ್ಯಾಯ, ಧರ್ಮ ಮುಂತಾದ ಸಾರ್ವಕಾಲಿಕ ಜೀವನ ಮೌಲ್ಯಗಳನ್ನು ಎತ್ತಿ ಹಿಡಿದಿರುವ ಮೂಲಿಕ ಕಥನಕಾವ್ಯ. ಆ ಕಾವ್ಯವನ್ನು ಖ್ಯಾತ ಸಾಹಿತಿಗಳಾದ ಶ್ರೀಯುತ ಡಾ|| ಹಂಪ. ನಾಗರಾಜಯ್ಯ ಅವರು ಕಿರಿಯರಿಗಾಗಿ ಸರಳ ಕನ್ನಡ ಕಥನ ರೂಪದಲ್ಲಿ ಕೃತಿಗಿಳಿಸಿದ್ದಾರೆ. ಇದೊಂದು ಸ್ತುತ್ಯರ್ಹ ಸೇವೆ. ಪ್ರಸ್ತುತ ಸಂದರ್ಭದಲ್ಲಿ ಜೀವನ ಮೌಲ್ಯಗಳನ್ನು ಮೈಗೂಡಿಸಿಕೊಳ್ಳಲು ಈ ಕೃತಿ ಮಕ್ಕಳಿಗೆ ದಾರಿದೀಪವಾಗಿದೆ. ಆ ನಿಟ್ಟಿನಲ್ಲಿ ಪ್ರತಿಯೊಬ್ಬರೂ ಈ ಗೋವಿನ ಕಥೆಯನ್ನು ಓದಿ ಇದರಲ್ಲಿರುವ ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಸಜ್ಜನರೆನಿಸಿಕೊಳ್ಳಲೆಂದೂ, ಶ್ರೀಯುತ ಹಂಪ. ನಾಗರಾಜಯ್ಯ ಅವರಿಗೆ ಭಗವಂತನು ಆಯುರಾರೋಗ್ಯಾದಿ ಸಕಲ ಸನ್ಮಂಗಳವನ್ನು ಕರುಣಿಸಲೆಂದು ತುಂಬು ಹೃದಯದಿಂದ ಹಾರೈಸುತ್ತೇವೆ."

ಇಂತು ಭಗವತ್ಸೇವೆಯಲ್ಲಿ
(ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು)

**ಅಭಿಪ್ರಾಯ :**

ಕನ್ನಡ ಬಲ್ಲ ಪ್ರತಿಯೊಬ್ಬರಿಗೂ ಪರಿಚಯವಿರುವ ಏಕೈಕ ಕಾವ್ಯವೆಂದರೆ ಗೋವಿನಹಾಡು. ಅಂತಹ ಗೋವಿನಹಾಡಿಗೆ ಒಂದು ನುಡಿತೋರಣವನ್ನು ಹಂಪನಾ ಕಟ್ಟಿದ್ದಾರೆ. ಗೋವಿನ ಹಾಡಿಗಿರುವ ಸಾಂಸ್ಕೃತಿಕ ಪರಂಪರೆ, ಪೌರಾಣಿಕ ಹಿನ್ನೆಲೆ ಮೊದಲಾದ ಆಯಾಮಗಳನ್ನು ಮಕ್ಕಳಿಗೆ ಅರ್ಥವಾಗುವಂತೆ ಸರಳವಾಗಿ ನಿರೂಪಿಸಿದ್ದಾರೆ. ಗೋವಿನಹಾಡಿನ ಸರಳಗದ್ಯಾನುವಾದವನ್ನೂ ಮಾಡಿದ್ದಾರೆ. ಸರಳವಾಗಿ ಸರ್ವರಿಗೂ ಅರ್ಥವಾಗುವಂತೆ ಅಜ್ಞಾತಕವಿಯೊಬ್ಬನಿಂದ ರಚಿತವಾಗಿರುವ ಗೋವಿನಹಾಡು ಕಾವ್ಯರೂಪದಲ್ಲಿಯೇ ಪರಿಪೂರ್ಣವಾದುದು. ಆದರೆ ಶ್ರೇಷ್ಠ ಸಾಹಿತ್ಯವೊಂದು ಗದ್ಯ–ಪದ್ಯಗಳೆರಡರಲ್ಲೂ ಇದ್ದರೆ ಒಳ್ಳೆಯದು. ಆ ಕೊರತೆಯನ್ನು ಹಂಪನಾ ಅರ್ಥಪೂರ್ಣವಾಗಿ ಈ ಸಚಿತ್ರಪುಸ್ತಕದಲ್ಲಿ ತುಂಬಿದ್ದಾರೆ.

ಡಾ|| ಎಂ. ಬೈರೇಗೌಡ

# ನೆನಪಿನ ಹೊತ್ತಗೆ

ಸಂಪಾದಕರು

ಡೆಮ್ಮೈ 1/8 ಆಕಾರ ಪುಟಗಳು : 200

ಪ್ರಥಮ ಮುದ್ರಣ : 1970

ಪ್ರಕಾಶಕರು : ಕೋಲಾರ ಜಿಲ್ಲಾ ಸಾಹಿತ್ಯ ಸಮ್ಮೇಳನ ಸಮಿತಿ
ಬಂಗಾರಪೇಟೆ

ಜಗದ್ಗುರು ನಿಡುಮಾಮಿಡಿ ಸ್ವಾಮಿಯವರು (ಡಾ. ಜಚನಿ, ಅನೇಕ ಕನ್ನಡ ಕೃತಿಗಳ ಕರ್ತೃ) ಬಂಗಾರಪೇಟೆಯಲ್ಲಿ ಕೋಲಾರ ಜಿಲ್ಲಾ ಸಾಹಿತ್ಯ ಸಮ್ಮೇಳನವನ್ನು ಏರ್ಪಡಿಸಿದ್ದರು. 1970 ರಲ್ಲಿ ನಡೆದ ಈ ಸಮ್ಮೇಳನದ ಸಾಹಿತ್ಯ ವಿಭಾಗದ ಸಂಪೂರ್ಣ ಹೊಣೆಯನ್ನು ಹಂಪನಾ ಅವರಿಗೆ ವಹಿಸಿದ್ದರು. ಆ ಸಂದರ್ಭದ ನೆನಪಿಗೆಂದು ತಂದ ಸ್ಮರಣ ಸಂಪುಟಕ್ಕೆ 'ನೆನಪಿನ ಹೊತ್ತಗೆ' ಎಂದು ಹೆಸರಿಡಲಾಗಿದೆ. ಇದರ ಸಂಪಾದಕರಾದ ಹಂಪನಾ ಅವರು ಕೋಲಾರ ಜಿಲ್ಲೆಯ ಸಾವಿರಾರು ವರ್ಷಗಳ ಭೌಗೋಳಿಕ, ಚಾರಿತ್ರಿಕ, ಸಾಂಸ್ಕೃತಿಕ ಹಾಗೂ ಸಾಹಿತ್ಯಿಕ ಪರಂಪರೆಯನ್ನು ನಿರೂಪಿಸುವ ಅಭ್ಯಾಸಪೂರ್ಣವಾದ ಲೇಖನಗಳನ್ನು ಬರೆಸಿದ್ದಾರೆ. ಹಲವು ಉಪಯುಕ್ತ ಚಿತ್ರಗಳನ್ನೂ ಹಾಕಿದ್ದಾರೆ. ಇದರಲ್ಲಿರುವ ಮೌಲಿಕವಾದ ಲೇಖನಗಳಿಂದಾಗಿ ಈ ಪುಸ್ತಕ ಇಂದಿಗೂ ಉಪಾದೇಯವಾಗಿದೆ.

ಸಂ.

# ಕರ್ಣಪಾರ್ಯ ಕವಿಯ
# ನೇಮಿನಾಥ ಪುರಾಣಂ

**ಗ್ರಂಥ ಸಂಪಾದನೆ: ಚಂಪೂಕಾವ್ಯ**

ಡೆಮ್ಮೈ 1/8 ಆಕಾರ (ಎರಡು ಸಂಪುಟಗಳು)

| | |
|---|---|
| ಪುಟಗಳು | ಸಂಪುಟ- 1 (54+426) |
| | ಸಂಪುಟ- 2 (10+512) |

ಒಟ್ಟು 1092 ಪುಟಗಳು.

| | | |
|---|---|---|
| ಪ್ರಥಮ ಮುದ್ರಣ | : | 1981 |
| ಸಹ ಸಂಪಾದಕರು | : | ಆರ್. ವಿ. ಕುಲಕರ್ಣಿ (ರಾಕು) |
| ಪ್ರಕಾಶಕರು | : | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು -18. |

ಕರ್ಣಪಾರ್ಯ (ಕಣ್ಣಪ) ಕವಿಯ ಚಂಪೂ ಕಾವ್ಯವಾದ ನೇಮಿನಾಥ ಪುರಾಣವನ್ನು ಗದ್ಯಾನುವಾದ ಸಹಿತ ಪ್ರಕಟಿಸಲಾಗಿದೆ. ಕರ್ಣಪಾರ್ಯ ಕವಿಯ ಇತಿವೃತ್ತ ಹಾಗೂ ನೇಮಿನಾಥ ಪುರಾಣ ಕಾವ್ಯದ ಪಾಂಡಿತ್ಯ ಪೂರ್ಣವಾದ ವಿಮರ್ಶೆ ಇವನ್ನು ಹಂಪನಾ ಬರೆದಿದ್ದಾರೆ. ಪ್ರೌಢವೂ ಸಂಸ್ಕೃತಮಯವೂ ಆದ ಕರ್ಣಪಾರ್ಯನ ಕಾವ್ಯದ ಪದ್ಯ-ಗದ್ಯಗಳಿಗೆ ಹೊಸಗನ್ನಡ ಗದ್ಯಾನುವಾದವನ್ನೂ ಒದಗಿಸಿರುವುದು ಹಳೆಗನ್ನಡ ಸಾಹಿತ್ಯಾಸಕ್ತರ ಸ್ವತಂತ್ರವಾದ ಓದಿಗೆ ತುಂಬ ನೆರವಾಗುವಂತಿದೆ. ಒಟ್ಟು, ಎರಡು ಸಂಪುಟಗಳಿಂದ, 1092 ಪುಟಗಳಿರುವ ಈ ಬೃಹತ್ ಗಾತ್ರದ ಚಂಪೂ ಕಾವ್ಯದ ಪ್ರಕಟಣೆಯಿಂದ, ಅಲಭ್ಯವಾಗಿದ್ದ ಕರ್ಣಪಾರ್ಯನ ಕಾವ್ಯ ಮೂಲ ಪದ್ಯ ಮತ್ತು ಹೊಸಗನ್ನಡ ಗದ್ಯಾನುವಾದ ಸಹಿತ ಓದುಗರಿಗೆ ದೊರಕುವಂತಾಗಿದೆ.

ನೇಮಿನಾಥ ಪುರಾಣ ಮಾರ್ಗಕಾವ್ಯವನ್ನೂ ಸಂಪಾದಿಸಿರುವುದರ ಜೊತೆಗೆ ದೇಸಿ ಕಾವ್ಯವಾದ ಸಾಳ್ವ ಭಾರತವನ್ನೂ ಹಂಪನಾ ಅವರು ಸಂಪಾದಿಸಿರುವುದು ಒಂದು ಯೋಗಾಯೋಗವೇ ಸರಿ. (ನೋಡಿ: ಈ ಕೃತಿಯಲ್ಲಿಯೇ, ಸಾಳ್ವಭಾರತ ಕುರಿತ ಟಿಪ್ಪಣಿ).

**ಅಭಿಪ್ರಾಯ:**

1.ಹಂಪನಾರವರ ಕವಿಕಾವ್ಯ ವಿಚಾರವಾಗಿ ಬರೆದಿರುವ ವಿದ್ವತ್ ಪ್ರಚುರವಾದ ಉಪೋದ್ಘಾತದಲ್ಲಿ ಅನೇಕ ಉಪಯುಕ್ತವಾದ, ಮೌಲಿಕವಾದ ವಿಮರ್ಶೆಯ ಮಾತುಗಳಿವೆ.

ಎಲ್ಲ ಜೈನಪುರಾಣಗಳನ್ನು ಅಭ್ಯಾಸ ಮಾಡುವವರಿಗೂ ಈ ಉಪೋದ್ಘಾತ ಉಪಯುಕ್ತವಾಗಿರುತ್ತದೆ.

**--ವಿ. ಕೃ. ಗೋಕಾಕ್**

**'ಮುನ್ನುಡಿ'ಯಿಂದ**

2. ಹಳೆಗನ್ನಡ ಕಾವ್ಯಗಳಲ್ಲಿ ಸಾಮಾನ್ಯವಾಗಿ ಕಂಡು ಬರುವ ಪಾಠ ಕ್ಲೇಶ, ಇನ್ನೂ ಅರ್ಥೈಸಲು ಸಾಧ್ಯವಾಗದ ಕೆಲವು ಶಬ್ದಪ್ರಯೋಗಗಳು, ಹಾಗೂ ಮತೀಯ ಪರಿಭಾಷೆ ಇವುಗಳಿಂದಾಗಿ ಅನುವಾದಕನ ಕೆಲಸ ಕೆಲವು ಸಲ ತುಂಬ ತೊಡಕಿಗೆ ಸಿಕ್ಕುತ್ತದೆ. ಶ್ರೀ. ಹಂಪ. ನಾಗರಾಜಯ್ಯನವರು ಈ ವಿಷಯದಲ್ಲಿ ತಮ್ಮ ಪಾಂಡಿತ್ಯದ ಸಂಪೂರ್ಣ ಸಹಕಾರವನ್ನು ನನಗೆ ನೀಡಿದ್ದಾರೆ.

ಇದರಲ್ಲಿಯ ಗುಣದ ಶ್ರೇಯಸ್ಸು ಅವರಿಗೆ ಸಲ್ಲುತ್ತದೆ.

**ಆರ್. ವಿ. ಕುಲಕರ್ಣಿ (ರಾಕು)**

**'ಬಿನ್ನಹ'ದಿಂದ.**

3. ಕವಿಯ ಜೀವನ, ಕಾಲ, ನೇಮಿನಾಥವಾಙ್ಮಯ, ಜೈನಪುರಾಣ ಪರಂಪರೆ ಮುಂತಾದ ವಿಷಯಗಳನ್ನು ಹಂಪನಾ ವಿದ್ವತ್ಪೂರ್ಣವಾಗಿ ವಿವೇಚಿಸಿದ್ದಾರೆ. ಅಭ್ಯಾಸಿಗಳಿಗೆ ಇದು ತುಂಬಾ ಉಪಯುಕ್ತವಾಗಿದೆ. ಬಾಹ್ಯ ಮತ್ತು ಅಂತರ್ ಪ್ರಮಾಣಗಳ ಸಹಾಯದಿಂದ ಕರ್ಣಪಾರ್ಯನ ಕಾಲವನ್ನು ನಿರ್ಣಯಿಸಿದ್ದಾರೆ. ನೇಮಿನಾಥಪುರಾಣಗಳ ಸಾಲಿನಲ್ಲಿ ಕರ್ಣಪಾರ್ಯನ ಕೃತಿಗಿರುವ ಸ್ಥಾನವನ್ನು ಸರಿಯಾಗಿ ಗುರುತಿಸಿದ್ದಾರೆ.

**ಡಾ. ಬಸವರಾಜ ಮಲಶೆಟ್ಟಿ**

## ಪಂಪ

**ಗ್ರಂಥ ಸಂಪಾದನೆ**

| | | |
|---|---|---|
| ಕ್ರೌನ್ 1/8 ಆಕಾರ, ಪುಟಗಳು | : | 100 |
| ಪ್ರಥಮ ಮುದ್ರಣ | : | 1998 |
| ಪ್ರಕಾಶಕರು | : | ಕರ್ನಾಟಕ ಸಾಹಿತ್ಯ ಅಕಾಡೆಮಿ<br>ಮುತ್ತಿನಮಾಲೆ ಪ್ರಕಟಣೆ<br>ಬೆಂಗಳೂರು |

## ಪಂಪ ಭಾರತ ಸಂಗ್ರಹ

**ಗ್ರಂಥ ಸಂಪಾದನೆ**

| | | |
|---|---|---|
| ಕ್ರೌನ್ 1/8 ಆಕಾರ, ಪುಟಗಳು | : | 180 |
| ಪ್ರಥಮ ಮುದ್ರಣ | : | 1964 |
| ಪ್ರಕಾಶಕರು | : | ಪ್ರಾಚ್ಯಕಾವ್ಯ ಪ್ರಕಾಶನ ಮಂದಿರ,<br>ರಾಜಾಜಿನಗರ, ಬೆಂಗಳೂರು -560 010. |
| ದ್ವಿತೀಯ ಮುದ್ರಣ | : | 1969. |
| ತೃತೀಯ ಮುದ್ರಣ | : | 2002 |
| ಪ್ರಕಾಶಕರು | : | ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು |
| ಸಹಸಂಪಾದಕರು | : | ಎನ್. ಬಸವರಾಧ್ಯ ಮತ್ತು ಪ್ರೊ. ಅ. ರಾ. ಮಿತ್ರ. |

ಕನ್ನಡದ ಆದಿಮಹಾಕವಿ ಪಂಪನ ವಿಕ್ರಮಾರ್ಜುನ ವಿಜಯ (ಪಂಪ ಭಾರತ)ದ ಸಂಗ್ರಹವಿದು. ಇದಕ್ಕೆ ಪ್ರಸ್ತಾವನೆ ಮತ್ತು ಶಬ್ದಾರ್ಥ ಕೊಡಲಾಗಿದೆ. ಇದು ಬೆಂಗಳೂರು ವಿಶ್ವವಿದ್ಯಾಲಯದ ಪದವಿ ತರಗತಿಯ ವಿದ್ಯಾರ್ಥಿಗಳಿಗೆ ಪಠ್ಯ ಪುಸ್ತಕವಾಗಿತ್ತು. ಪಂಪಭಾರತದ ಅತ್ಯಂತ ಉತ್ತಮ ಸಂಗ್ರಹ ಕೃತಿ ಇದೆಂದು ಹೇಳಬಹುದು.

ಕೃತಿಯ ಮೂಲ ರೂಪಕ್ಕೆ ಅಥವಾ ಕಥಾ ನಿರೂಪಣೆಗೆ ಯಾವುದೇ ರೀತಿಯ ಭಂಗ ಬಾರದಂತೆ ಈ ಕೃತಿಯನ್ನು ಸಂಪಾದಿಸಲಾಗಿದೆ. ಸಂಪಾದಕರ ಸಂಗ್ರಹ ಗುಣದ ಕುಶಲತೆ ಈ ಕೃತಿಯಲ್ಲಿ ಎದ್ದು ಕಾಣುತ್ತದೆ.

ಸಂ.

# ಪೆನುಗೊಂಡೆ : ಜೈನ ಕ್ಷೇತ್ರ

**ಸಂಶೋಧನೆ**

| | | |
|---|---|---|
| ಡೆಮ್ಮಿ 1/8 ಆಕಾರ, ಪುಟಗಳು | - | 38+98 |
| ಪ್ರಥಮ ಮುದ್ರಣ | : | 2004 |
| ಪ್ರಕಾಶಕರು | : | ಶ್ರೀ ಪಚ್ಚೆ ಪಾರ್ಶ್ವನಾಥಸ್ವಾಮಿ ಧರ್ಮ ಗ್ರಂಥ ಪ್ರಕಾಶನ ಸಮಿತಿ, ತುಮಕೂರು |

ಆಂಧ್ರ ಪ್ರದೇಶ ಅನಂತಪುರ ಜಿಲ್ಲೆಯ ಪೆನುಗೊಂಡೆ ಐತಿಹಾಸಿಕ ಮಹತ್ವದ ಪಟ್ಟಣ. ಇದು ಜೈನರಿಗೂ ವೈಶ್ಯರಿಗೂ ಧಾರ್ಮಿಕ ಕೇಂದ್ರ. ಮೂಲಶ್ರೇಷ್ಠಿ (ಶೆಟ್ಟಿ, ಸೆಟ್ಟಿ) ಪರಂಪರೆಯ ಕವಲೊಡೆದು ಜೈನರಿಂದ ಬೇರೆಯಾದದ್ದು ಪೆನುಗೊಂಡೆಯಲ್ಲೇ ಎಂಬುದು ಪ್ರಸಿದ್ಧ ಸಾಹಿತಿ ಪ್ರೊ. ಕಾಶಿ ವಿಶ್ವನಾಥ ಶೆಟ್ಟಿಯವರ ಅಭಿಪ್ರಾಯ. ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ರಾಜಧಾನಿಯೆನಿಸಿದ ಪೆನುಗೊಂಡೆಯಲ್ಲಿ ಜೈನ ಬಸದಿಗಳೂ ಮಠವೂ ಪ್ರಸಿದ್ಧಿ ಪಡೆದಿದ್ದವು. ಕಾಲಾಂತರದಲ್ಲಿ ಬಸದಿಗಳನ್ನು ನಾಶಪಡಿಸಿ ಜೈನಮಠವನ್ನು ಮಸೀದಿಯನ್ನಾಗಿ ಪರಿವರ್ತಿಸಲಾಗಿದೆ.

ಇಂದಿಗೂ ಇಲ್ಲಿ ಪಾರ್ಶ್ವನಾಥ ಜಿನಾಲಯ ಮತ್ತು ಅಜಿತನಾಥರ ಬಸದಿ ಉಳಿದು ಗತ ಇತಿಹಾಸದ ನೆನಪಾಗಿವೆ. ಅನೇಕ ಶಾಸನ ಹಾಗೂ ವಾಸ್ತು-ಶಿಲ್ಪ ಪೆನುಗೊಂಡೆಯಲ್ಲೂ ನೆರೆಹೊರೆಯಲ್ಲೂ ದೊರೆತಿವೆ. ಇಲ್ಲಿನ ಪ್ರಾಚೀನ ಶಿಲ್ಪಗಳು ದಾನವುಲಪಾಡು (ಕಡಪ ಜಿಲ್ಲೆ) ಮತ್ತು ಮದರಾಸು ಮ್ಯೂಸಿಯಮ್ಮಿನಲ್ಲಿವೆ. ಪ್ರಸ್ತುತ ಪುಸ್ತಕದಲ್ಲಿ ಅನೇಕ ಅಪೂರ್ವ ನಿಶಿಧಿಗಳ ಚಿತ್ರಗಳು ಸೇರ್ಪಡೆ ಆಗಿವೆ. ಪೆನುಗೊಂಡೆ ಕ್ಷೇತ್ರದ ಹಿಂದಿನ - ಇಂದಿನ ಸ್ಥಿತಿಗತಿಗಳನ್ನು ಸವಿವರವಾಗಿ ಆಧಾರಗಳನ್ನಿತ್ತು ದಾಖಲಿಸಿದ್ದಾರೆ. ಪಚ್ಚೆ ಪಾರ್ಶ್ವನಾಥ ಬಸದಿಗೂ ಅದರಲ್ಲಿರುವ ಪದ್ಮಾವತೀ ಮತ್ತು ಜ್ವಲಾಮಾಲಿನಿ ಶಾಸನದೇವಿಯರಿಗೂ ನಿತ್ಯ ಪೂಜೆ ನಡೆಯುತ್ತಿದ್ದು ಬಸದಿಯನ್ನು ಆಮೂಲಾಗ್ರವಾಗಿ ಖಂಡ ಸ್ಫುಟಿತ ಜೀರ್ಣೋದ್ಧಾರ ಮಾಡಿದ್ದಾರೆ.

ಸಂ.

# ಪೈಯವರ ಮೂರು ನಾಟಕಗಳು

**ವಿಮರ್ಶೆ**

| | | |
|---|---|---|
| ಕ್ರೌನ್ 1/8 ಆಕಾರ, ಪುಟಗಳು | : | 20 |
| ಪ್ರಥಮ ಮುದ್ರಣ | : | 1967 |
| ಪ್ರಕಾಶಕರು | : | ಭಂಡಾರ್ಕರ್ಸ್ ಆರ್ಟ್ಸ್ ಮತ್ತು ಸೈನ್ಸ್ ಕಾಲೇಜು ಕುಂದಾಪುರ (ದ. ಕ) |

ರಾಷ್ಟ್ರಕವಿ ಮಂಜೇಶ್ವರ ಗೋವಿಂದಪೈಯವರು ರಚಿಸಿದ ತಾಯಿ, ಹೆಬ್ಬೆರಳು, ಚಿತ್ರಭಾನು ಅಥವಾ 1942- ಎಂಬ ಮೂರು ನಾಟಕಗಳ ಪ್ರಾಯೋಗಿಕ ವಿಮರ್ಶೆಯಿದು. ಈ ನಾಟಕಗಳನ್ನು ಆಳವಾಗಿ ಅಭ್ಯಸಿಸಿ ಆ ಕುರಿತು ಗೋವಿಂದ ಪೈ ಸ್ಮಾರಕೋತ್ಸವ ದಿನದಂದು ಇತ್ತ ವಿಮರ್ಶಾತ್ಮಕ ಭಾಷಣವನ್ನು ಕಿರು ಹೊತ್ತಗೆಯ ರೂಪದಲ್ಲಿ ಪ್ರಕಟಿಸಲಾಗಿದೆ.

**ಅಭಿಪ್ರಾಯ:**

ಪೈಯವರ ಮೂರು ಸುಂದರ ನಾಟಕಗಳ ವಿಮರ್ಶೆ ಇಲ್ಲಿದೆ. ಹಂಪನಾ ಅವರ ವಿಮರ್ಶನ ಶಕ್ತಿಗೆ ಇದೊಂದು ಉತ್ತಮ ನಿದರ್ಶನವಾಗಿದೆ. ಅವರು ಒಳ್ಳೆಯ ವಿಮರ್ಶಕರೆಂದು ನಿರ್ಧರಿಸಲು ಇದೊಂದೇ ಕೃತಿ ಸಾಕು. ಕಿರಿಯ ವಿಮರ್ಶಕರಿಗೆ ಇದು ಮಾರ್ಗದರ್ಶಕವಾಗಿದೆ.

--ಡಾ. ನೀಲಮ್ಮ ಕತ್ನಳ್ಳಿ

## ಪೊನ್ನ ಕಮಲಭವ ಸಂಪುಟ

**ಸಂಪಾದಕರು**

| | | |
|---|---|---|
| ಡೆಮ್ಮಿ 1/8 ಆಕಾರ, ಪುಟಗಳು | : | XLII+828 |
| ಪ್ರಥಮ ಮುದ್ರಣ | : | 2006 |
| ಪ್ರಕಾಶಕರು | : | ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ -583276 |

**ಅಭಿಪ್ರಾಯ :**

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹತ್ತನೇ ಶತಮಾನದ ಕವಿತ್ರಯರಲ್ಲಿ ಪಂಪ ಮತ್ತು ರನ್ನರ ನಡುವೆ ಪೊನ್ನಕವಿಯ ಹೆಸರು ಕಾಣಿಸಿಕೊಂಡು ಆ ಹೆಸರು ಅಪ್ರಜ್ಞಾಪೂರ್ವಕವಾಗಿ ಕನ್ನಡ ಓದುಗರ ಮನಸ್ಸಿನಲ್ಲಿ ಬೇರೂರಿದೆ. ಆದರೆ, ಪಂಪ ಮತ್ತು ರನ್ನರ ಕಾವ್ಯಗಳು ಅಧ್ಯಯನಕ್ಕೆ ಒಳಗಾದ ಪ್ರಮಾಣ ಮತ್ತು ಸಂದರ್ಭಗಳನ್ನು ಗಮನಿಸಿದರೆ ಪೊನ್ನಕವಿಯ ಕೃತಿ ಅಂತಹ ಪಠಣ ಮತ್ತು ಜನಪ್ರಿಯತೆಯ ಭಾಗ್ಯವನ್ನು ಪಡೆದಿಲ್ಲ. ಆದರೆ, ಪಂಪ ಪೊನ್ನ ರನ್ನ ಎನ್ನುವ ಕವಿತ್ರಯರ ಹೆಸರುಗಳು ಅನುಕ್ರಮಣಿಕೆಯಲ್ಲಿ ಪ್ರಾಚೀನ ಕನ್ನಡ ಸಾಹಿತ್ಯವನ್ನು ಕುರಿತ ಉದ್ಗಾರಗಳಲ್ಲಿ ನಿರಾಯಾಸವಾಗಿ ಕಾಣಿಸಿಕೊಳ್ಳುತ್ತವೆ. ಇಂತಹ ಸಾಹಿತ್ಯ ಜನಪ್ರಿಯತೆಯ ತಾರತಮ್ಯಕ್ಕೆ ಅನೇಕ ಕಾರಣಗಳಿವೆ. ಪೊನ್ನನ ಲೌಕಿಕಕಾವ್ಯ ಎಂದು ಭಾವಿಸಲಾದ ಭುವನೈಕರಾಮಾಭ್ಯುದಯ ಪೂರ್ಣವಾಗಿ ಲಭ್ಯವಾಗಿಲ್ಲ. ಆತನ ಆಗಮಿಕಕಾವ್ಯ **ಶಾಂತಿಪುರಾಣ** ತನ್ನ ಬಾಹುಳ್ಯ ಮತ್ತು ಹೊಸನೋಟಗಳ ಕೊರತೆಯಿಂದ ಆದಿಪುರಾಣ ಮತ್ತು ಅಜಿತಪುರಾಣಗಳ ಜತೆಗೆ ಸ್ಪರ್ಧಿಸುವ ಶಕ್ತಿಯನ್ನು ಹೊಂದಿಲ್ಲ. ಹೀಗೆ ಅನುಪಲಬ್ಧವಾದ ಒಂದು ಕೃತಿ ಮತ್ತು ಉಪಲಬ್ಧವಾಗಿಯೂ ಅಧ್ಯಯನಕ್ಕೊಳಗಾಗದ ಇನ್ನೊಂದು ಕೃತಿಗಳಿಂದಾಗಿ ಕವಿ ಪೊನ್ನನು ಕನ್ನಡಿಗರ ಅಲಂಕಾರಿಕ ಕವಿಯಾಗಿ ಮಾತ್ರ ಉಳಿದುಬಿಟ್ಟಿದ್ದಾನೆ.

ಕಮಲಭವನ **ಶಾಂತೀಪುರಾಣ** ಜೈನತೀರ್ಥಂಕರನನ್ನು ಕುರಿತು ರಚಿಸಿದ, ಪೊನ್ನನ ಬಳಿಕದ ಇನ್ನೊಂದು ಪುರಾಣಕಾವ್ಯ. ಹದಿಮೂರನೇ ಶತಮಾನದ ಪೂರ್ವಾರ್ಧದಲ್ಲಿದ್ದ ಕಮಲಭವನು ಪೊನ್ನನ ಶಾಂತಿಪುರಾಣ ರಚನೆಯಾದ ಮುನ್ನೂರು ವರ್ಷಗಳ ಬಳಿಕ ಅದೇ ವಸ್ತುವನ್ನು ಇಟ್ಟುಕೊಂಡು ಕಾವ್ಯ ರಚನೆ ಮಾಡುವ ಸಾಹಸ ಮಾಡಿದ್ದಾನೆ. ಪೊನ್ನನ 'ಶಾಂತಿಪುರಾಣ'ದ ಒಂದು ಸಾವಿರ ಓಲೆಗರಿ ಪ್ರತಿಗಳನ್ನು ಬರೆಸಿ ಅತ್ತಿಮಬ್ಬೆ ಶಾಸ್ತ್ರದಾನ ಮಾಡಿಸಿದ ಉಲ್ಲೇಖ ಆ ಕಾವ್ಯದಲ್ಲಿ ದೊರಕುತ್ತದೆ. ಹಾಗಿದ್ದೂ ಕಮಲಭವನ ಶಾಂತೀಶ್ವರ ಪುರಾಣ ನಿರ್ಮಾಣಗೊಂಡಿರುವುದು ಜೈನಧಾರ್ಮಿಕ ಪರಂಪರೆಯ ಆಶಯಕ್ಕೆ ಅನುಗುಣವಾಗಿಯೇ ಇದೆ. ಅಲ್ಲಿ ಪುನರಾವರ್ತನೆ ಎನ್ನುವುದು ದೋಷವಲ್ಲ. ಒಂದು ನೋಂಪಿಯ ಭಾಗವಾಗಿ ಅಣುವ್ರತದ

ಅಂಗವಾಗಿ ಶಾಸ್ತ್ರದಾನದ ಪರಿಕರವಾಗಿ ಜೈನ ಶಾಸ್ತ್ರ ಪುರಾಣ ಕಾವ್ಯಗಳು ರಚನೆಗೊಳ್ಳುತ್ತಿದ್ದ ಚಾರಿತ್ರಿಕ ಸನ್ನಿವೇಶವನ್ನು ಗಮನಿಸಬೇಕಾಗುತ್ತದೆ. ಕಮಲಭವನು ವಿಸ್ತಾರದಲ್ಲಿ ಮತ್ತು ವಿವರಗಳಲ್ಲಿ ಕೆಲವೊಮ್ಮೆ ಪೊನ್ನನ ಶಾಂತಿಪುರಾಣವನ್ನು ಮೀರಿಸುತ್ತಾನೆ. ಬಹಳಕಡೆ ಪೊನ್ನನಿಗಿಂತ ವಾಚ್ಯವಾಗಿ ಕಾವ್ಯರಚಿಸುವ ಕಮಲಭವನು ತನ್ನ ಕಾವ್ಯವು ನಾನಾರಸಗಳಿಂದ, ಅರಮನೆ, ಸೂಳೆಗೇರಿ, ಜಿನಾಲಯಗಳ ವರ್ಣನೆಗಳಿಂದ, ದೇಸಿಯ ಗುಣದಿಂದ ಉತ್ತಮ 'ವಸ್ತುಕ ಕಾವ್ಯ'ವಾಗಿದೆಯೆಂದು ಹೇಳಿಕೊಳ್ಳುತ್ತಾನೆ. ಶಾಂತಿನಾಥ ತೀರ್ಥಂಕರನನ್ನು ವಸ್ತುವನ್ನಾಗಿ ಇಟ್ಟುಕೊಂಡು ಶಾಂತೀಶ್ವರ ಪುರಾಣ ಎಂಬ ವಸ್ತುಕಕಾವ್ಯವನ್ನು ಅಷ್ಟಾದಶ ವರ್ಣನೆಗಳ ವರ್ಣಕ ಗುಣಗಳಿಂದ ಅಲಂಕರಿಸಿದ ಕಮಲಭವನು ಒಂದೆಡೆ ತೀರ್ಥಂಕರ ಕಾವ್ಯ ನಿರ್ಮಾಣದ ಪುಣ್ಯಕ್ಕೆ, ಇನ್ನೊಂದೆಡೆ ಕಾವ್ಯಶರೀರದ ಎಲ್ಲ ರಸಗಳ ಪ್ರವಾಹದ ಮಡುಗಟ್ಟಿದ ರಸಿಕತೆಗೆ ಸಮಪ್ರಮಾಣದಲ್ಲಿ ಭಾಜನನಾಗುತ್ತಾನೆ. ಪೊನ್ನ – ಕಮಲಭವರು ಶಾಂತಿನಾಥನನ್ನು ಕುರಿತು ಎರಡು ದೀರ್ಘ ಪುರಾಣ ಕಾವ್ಯಗಳನ್ನು ರಚಿಸಿ ಜೈನಪುರಾಣ ಪರಂಪರೆಯನ್ನು ಕನ್ನಡ ಕಾವ್ಯ ಪರಂಪರೆಯೊಂದಿಗೆ ಜೋಡಿಸಿದ್ದಾರೆ.

ಪೊನ್ನ-ಕಮಲಭವರ ಈ ಎರಡೂ ಕಾವ್ಯಗಳನ್ನು ತಮ್ಮ ಪಾಂಡಿತ್ಯ ಪರಿಶ್ರಮ ಮತ್ತು ಪ್ರೀತಿಯಿಂದ ಸಮರ್ಪಕವಾಗಿ ಸಂಪಾದಿಸಿಕೊಟ್ಟವರು ಕನ್ನಡದ ಹಿರಿಯ ವಿದ್ವಾಂಸರಾದ ಪ್ರೊ. ಹಂಪ. ನಾಗರಾಜಯ್ಯನವರು. ಪ್ರಾಚೀನ ಕನ್ನಡ ಸಾಹಿತ್ಯ, ಜೈನ ಸಂಸ್ಕೃತಿ ಮತ್ತು ತೌಲನಿಕ ಅಧ್ಯಯನ ಕ್ಷೇತ್ರಗಳಲ್ಲಿ ವಿಶೇಷ ಪಾಂಡಿತ್ಯವುಳ್ಳ ಪ್ರೊ. ಹಂಪನಾ ಅವರು ವಡ್ಡರಾಧನೆ : ಸಮಗ್ರ ಅಧ್ಯಯನ, ಕನ್ನಡದಲ್ಲಿ ಬಾಹುಬಲಿ: ರೂಪ ಸ್ವರೂಪ ವಿಶ್ವರೂಪ, ಚಂದ್ರಕೊಡೆ, ಜೈನ ಕಥಾಕೋಶ, ಚಾರುವಸಂತ ಕೃತಿಗಳನ್ನು, ಇಂಗ್ಲಿಷಿನಲ್ಲಿ ಎ ಹಿಸ್ಟರಿ ಆಫ್ ರಾಷ್ಟ್ರಕೂಟಾಸ್ ಆಫ್ ಮಳ್ಖೇಡ್, ಮಾನಸ್ತಂಭ-ಜೈನ ಪಿಲ್ಲರ್ ಆಫ್ ಎಮಿನೆನ್ಸ್ ಮುಂತಾದ ಕೃತಿಗಳನ್ನು ಪ್ರಕಟಿಸುವುದರ ಮೂಲಕ ಕನ್ನಡ ಸಾಹಿತ್ಯಕ್ಕೆ ವಿಶೇಷ ಕೊಡುಗೆಗಳನ್ನು ಕೊಟ್ಟಿದ್ದಾರೆ. ಜೈನ ಸಾಹಿತ್ಯದ ಅಧ್ಯಯನಕ್ಕೆ ಸಂಬಂಧಿಸಿದಂತೆ ಅನೇಕ ಶೋಧಗಳನ್ನು ನಡೆಸಿ ಹೊಸ ಸತ್ಯಗಳನ್ನು ಕಂಡುಕೊಂಡಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಹೊಸ ಲೇಖಕರ ಅನ್ವೇಷಣೆ, ಕೃತಿಗಳ ಪ್ರಕಟಣೆಗಳ ಮೂಲಕ ಸಾಂಸ್ಕೃತಿಕ ಕನ್ನಡನಾಡನ್ನು ಸಮೃದ್ಧಿಗೊಳಿಸಿದ ದಕ್ಷ ಸಾಂಸ್ಕೃತಿಕ ನೇತಾರರಾಗಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ಈ ಯೋಜನೆಯ ಆರಂಭದಿಂದಲೂ ಹುಮ್ಮಸ್ಸು ಮತ್ತು ಅಕ್ಕರೆಯಿಂದ ತಮ್ಮನ್ನು ತೊಡಗಿಸಿಕೊಂಡು ಮಾರ್ಗದರ್ಶನ ನೀಡಿದ್ದಾರೆ. ಪೊನ್ನ–ಕಮಲಭವರ ಈ ಎರಡೂ ಕಾವ್ಯಗಳ ಸಮರ್ಥ ಸಂಪಾದನೆಯ ಉಪಕಾರಕ್ಕಾಗಿ ಅವರಿಗೆ ವಿಶೇಷ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

**ಬಿ. ಎ. ವಿವೇಕ ರೈ**

ಕುಲಪತಿ

# ಫಣಿಕುಮಾರ ಕಥಾ ಸಾಹಿತ್ಯ

**ತೌಲನಿಕ ಹಾಗೂ ವಿಮರ್ಶೆ**

ಡೆಮ್ಮೈ 1/8 ಆಕಾರ

| | | |
|---|---|---|
| ಪುಟಗಳು | : | 175+xii (8ಪುಟಗಳ ಚಿತ್ರಗಳಿವೆ) |
| ಪ್ರಥಮ ಮುದ್ರಣ | : | 1977. |
| ಪ್ರಕಾಶಕರು | : | ಚಂದ್ರ ಸಾಗರವರ್ಣಿ ಗ್ರಂಥಮಾಲೆ ಬೆಂಗಳೂರು. |

ವಿಕ್ರಮಂಧರ, ಪ್ರತಾಪಂಧರ, ನಾಗಕುಮಾರ, ಫಣಿಕುಮಾರ ಎಂಬ ಹೆಸರುಗಳಿಂದ ಪ್ರಸಿದ್ಧನಾಗಿರುವ ಜೈನ ಜನಪದ ಕಥಾ ಸಾಹಿತ್ಯದ ನಾಯಕನನ್ನು ಕುರಿತು ಪ್ರಾಕೃತ, ಸಂಸ್ಕೃತ, ಕನ್ನಡ, ತಮಿಳು ಭಾಷಾ - ಸಾಹಿತ್ಯದಲ್ಲಿ ಸಿಗುವ ಒಂದು ದೊಡ್ಡ ಕಥಾ ಪರಂಪರೆಯನ್ನು ಮೊಟ್ಟ ಮೊದಲನೆಯ ಬಾರಿಗೆ ಗುರುತಿಸಿರುವ ತೌಲನಿಕ ಅಧ್ಯಯನವಿದು. ಫಣಿಕುಮಾರನನ್ನು ಕುರಿತು ಯಕ್ಷಗಾನ ಮತ್ತು ಜಾನಪದ ಹಾಡುಗಳು ಕೂಡ ಸಿಗುತ್ತವೆಂಬುದನ್ನು ಉದಾಹರಣೆ ಸಹಿತ ಈ ಸಂಶೋಧನ ಗ್ರಂಥದಲ್ಲಿ ತೋರಿಸಲಾಗಿದೆ.

ಶ್ರವಣಬೆಳಗೊಳದ ಜೈನ ಮಠದ ಗೋಡೆಗಳಲ್ಲಿ ಇರುವ ಫಣಿಕುಮಾರನ ಕಥಾ ಪರಂಪರೆಯ ಹಲವಾರು ಚಿತ್ರಗಳನ್ನು ಪ್ರಥಮ ಬಾರಿಗೆ ಹಂಪನಾರವರು ಗುರುತಿಸಿ ಈ ಗ್ರಂಥದಲ್ಲಿ ಅವುಗಳನ್ನು ಅಳವಡಿಸಿದ್ದಾರೆ. ಪ್ರಾಕೃತ ಮತ್ತು ಸಂಸ್ಕೃತ ಭಾಷೆಗಳ ಮೂಲ ಆಕರಗಳನ್ನು ಒದಗಿಸಿ ಫಣಿಕುಮಾರ ಕಥಾಸಾಹಿತ್ಯದ ವ್ಯಾಪಕ ಪರಂಪರೆಯ ಸ್ವರೂಪಕ್ಕೆ ಕನ್ನಡ ಕವಿ ಕಾವ್ಯ ಪರಂಪರೆ ಸ್ಪಂದಿಸಿರುವುದನ್ನು ಈ ಕೃತಿ ಸ್ಪಷ್ಟಪಡಿಸಿದೆ.

ಸಂ.

# ಬಸವಪ್ಪ ಶಾಸ್ತ್ರಿ

**ವ್ಯಕ್ತಿ ಚಿತ್ರಣ**

| | | |
|---|---|---|
| ಕ್ರೌನ್ 1/16 ಆಕಾರ, ಪುಟಗಳು | : | 1-48 |
| ಪ್ರಥಮ ಮುದ್ರಣ | : | 1975 |
| ಸಹಲೇಖಕರು | : | ಡಾ. ಎಸ್. ಪಿ. ಪದ್ಮಪ್ರಸಾದ್ (ಕಾವ್ಯಜೀವಿ) |
| ಪ್ರಕಾಶಕರು | : | ರಾಷ್ಟ್ರೋತ್ಥಾನ ಸಾಹಿತ್ಯ ಪ್ರಕಾಶನ, ಬೆಂಗಳೂರು |

ಮಹಾಕವಿ ಕಾಳಿದಾಸನ ಸಂಸ್ಕೃತ ನಾಟಕ 'ಅಭಿಜ್ಞಾನ ಶಾಕುಂತಲ'ವನ್ನು ಕನ್ನಡಕ್ಕೆ ಶ್ರೇಷ್ಠ ರೀತಿಯಲ್ಲಿ ಅನುವಾದಿಸಿದ ಬಸವಪ್ಪ ಶಾಸ್ತ್ರಿಗಳು 'ಅಭಿನವ ಕಾಳಿದಾಸ' ಎಂದು ಗೌರವಾರ್ಹ ಕೀರ್ತಿಗಳಿಸಿದರು. ಕಾಳಿದಾಸನ ವಿಕ್ರಮೋರ್ವಶೀಯ ನಾಟಕವನ್ನೂ ಕನ್ನಡಿಸಿದ್ದಾರೆ. ಬಸವಪ್ಪಶಾಸ್ತ್ರಿಗಳಿಗೆ ಇಂಗ್ಲಿಷಿನಲ್ಲಿ ಪರಿಶ್ರಮವಿರದಿದ್ದರೂ, ಬೇರೆಯವರಿಂದ ಓದಿಸಿ ಕೇಳಿ, ಗ್ರಹಿಸಿ, ಷೇಕ್ಸ್‌ಪಿಯರ್ ಕವಿಯ ಒಥೆಲೋ ನಾಟಕವನ್ನು 'ಶೂರಸೇನ ಚರಿತೆ' ಎಂಬ ಹೆಸರಿನಿಂದ ಕನ್ನಡಕ್ಕೆ ತಂದರು; ಇದು ಅವರ ಸರ್ವಗ್ರಾಹಿ ಮುಕ್ತ ಚಿಂತನೆಗೆ ಸಾಕ್ಷಿ. ಹೀಗೆ ಅತ್ಯಂತ ಪ್ರತಿಭಾವಂತರಾದ ಹಿರಿಯ ಚೇತನ ಬಸವಪ್ಪ ಶಾಸ್ತ್ರಿಗಳ ಬಾಲ್ಯ, ಯೌವನ, ಗೃಹಸ್ಥ ಜೀವನ, ಅರಮನೆ ಸಂಪರ್ಕ, ಮಹಾರಾಜರಿಂದ ಗೌರವ, ಬದುಕಿನ ಸಮಸ್ಯೆಗಳು, ಸಾಹಿತ್ಯಸೇವೆ, ಕಲಾಸೇವೆ- ಇವನ್ನು ಸರಳವಾಗಿ ಹೃದ್ಯವಾದ ರೀತಿಯಲ್ಲಿ ಲೇಖಕರು ನಿರೂಪಿಸಿದ್ದಾರೆ.

**ಅಭಿಪ್ರಾಯ:**

ಈ ಜೀವನ ಚರಿತ್ರೆಯು ಗಾತ್ರದಲ್ಲಿ ಕಿರಿದಾಗಿದ್ದರೂ ಗುಣದಲ್ಲಿ ಬೃಹತ್ತಾದದ್ದು. ಬಿಂದುವಿನಲ್ಲಿ ಸಿಂದುವನ್ನು ತೋರುವ ಕೃತಿಯಾಗಿದೆ. ಜೀವನ ಚರಿತ್ರೆಯನ್ನು ಹೇಗೆ ರಚಿಸಬೇಕೆಂಬುದಕ್ಕೊಂದು ಉತ್ಕೃಷ್ಟ ಮಾದರಿಯಾಗಿದೆ ಎಂದರೆ ಅತಿಶಯೋಕ್ತಿಯಾಗಲಾರದು.

ಪ್ರೊ. ಹಂಪನಾ ಅವರು ಕಾವ್ಯಜೀವಿ ಅವರೊಡನೆ ಸೇರಿ ರಚಿಸಿದ ಬಸವಪ್ಪಶಾಸ್ತ್ರಿ ಕೃತಿಯು ಗಾತ್ರದಲ್ಲಿ ಕಿರಿದಾದರೂ ಶ್ರೇಷ್ಠ ಕೃತಿಯ ಎಲ್ಲಾ ಸಲಕ್ಷಣಗಳನ್ನೂ ತನ್ನಲ್ಲಿ ಗರ್ಭೀಕರಿಸಿಕೊಂಡಿದೆ.

--'ನಾ'ವುಜಿರೆ

## ಬಾಹುಬಲಿ: ರೂಪ, ಸ್ವರೂಪ, ವಿಶ್ವರೂಪ

ಸಂಶೋಧನೆ

ಕ್ರೌನ್ 1/4 ಆಕಾರ, ಪುಟಗಳು : 156
ಪ್ರಥಮ ಮುದ್ರಣ : 2006
ಪ್ರಕಾಶಕರು : ಸಿವಿಜಿ ಪಬ್ಲಿಕೇಷನ್ಸ್
ಬೆಂಗಳೂರು - 560 003

ಅಭಿಪ್ರಾಯ:s

## ಗ್ರಂಥ ದರ್ಪಣದಲ್ಲಿ ಬಾಹುಬಲಿ ದರ್ಶನ

ಹಳಗನ್ನಡದ ಒಬ್ಬ ಕವಿ 'ಬೆಲೆಯಿಂದಕ್ಕುಮೆ ಕೃತಿಗಾವಿಲ?' ಎಂಬ ಪ್ರಶ್ನೆ ಕೇಳಿ 'ಭುವನದ ಭಾಗ್ಯದಿಂದಕ್ಕುಂ' ಎಂದು ತಾನೇ ಅದಕ್ಕೆ ಉತ್ತರವನ್ನೂ ಹೇಳಿದ್ದಾನೆ. ಆ ಪದ್ಯದಲ್ಲಿರುವ 'ಕೃತಿ' ಎಂಬ ಪದಕ್ಕೆ 'ಕಾವ್ಯ ಕೃತಿ'ಯೆಂದೇ ಅರ್ಥ, ಅಧ್ಯಾಹಾರ. ಲೋಕೋತ್ತರವಾದ ಜೀವನ, ಕಥನ ಮತ್ತು ಆ ಎರಡರ ದರ್ಶನವನ್ನು ಒಳಗೊಂಡ ಒಂದು ಮಹಾ ಕಾವ್ಯವನ್ನು ರಕ್ತ ಮಾಂಸ ಮಜ್ಜೆಗಳ ಒಬ್ಬ ನರರೂಪೀ ಕವಿ ಬರೆಯುತ್ತಾನೆ ಎಂಬುದು ಆಂಶಿಕ ಸತ್ಯ; ಅಥವಾ ನೂರೋ ಸಾವಿರವೋ ಎಂದು ಬೆಲೆ ಕಟ್ಟುವುದರಿಂದಲೂ ಅದು ಮಹಾ ಕಾವ್ಯ ಆಗುವುದಿಲ್ಲ ಎಂಬುದೂ ಅಷ್ಟೇ ಸತ್ಯ. ಭುವನದ ಎಂದರೆ ಜನಕೋಟಿಯ ತೀವ್ರಾಭೀಪ್ಸೆಯ, ಮಾನಸಿಕ ತಪಸ್ಸಿನ ಮತ್ತು ಆರ್ಜಿಸಿದ ಪುಣ್ಯ ಬಲದಿಂದಲೇ ಒಂದು ಮಹಾಕಾವ್ಯ ಸೃಷ್ಟಿಯಾಗಬಲ್ಲದು. ಕವಿ ಜನಾಶಯದ ಪ್ರಕಟನೆಗೆ ನಿಮಿತ್ತಮಾತ್ರವಾದ ಕರಣವೆನಿಸುತ್ತಾನೆ. ಕಾವ್ಯದ ಮುಖಬೆಲೆ ಎಂಬುದು ಅದರ ಅಂತಃಸತ್ವದ ಒಂದು ಸೂಚ್ಯಂಕ ಮಾತ್ರ ಆಗುತ್ತದೆ. ಇದು ಹಳಗನ್ನಡ ಪದ್ಯದ ಒಟ್ಟು ತಾತ್ಪರ್ಯ.

'ಕೃತಿ' ಎಂಬುದಕ್ಕೆ 'ಕಾವ್ಯ ಕೃತಿ'ಯಂತೆಯೇ ಕಲಾಕೃತಿಯೆಂದೂ ಅರ್ಥ ಮಾಡಬಹುದು. ಭುವನದ ಭಾಗ್ಯ ವಿಶೇಷ ಎನ್ನಬಹುದಾದ ಮೂರ್ತಿ, ಸೌಧ ಅಥವಾ ಸ್ಥಾವರ ರೂಪದ ದಾರು, ಲೋಹ ಅಥವಾ ಶಿಲ್ಪ ಕೃತಿಗಳು ಸಾರ್ವದೇಶಿಕವಾಗಿವೆ. ನಮ್ಮ ಕರ್ನಾಟಕದಲ್ಲೇ ಅಂತಹ ನೂರಾರು ಶಿಲ್ಪಗಳಿವೆ. ಅವುಗಳಲ್ಲಿ ಕೆಲವು ನೇತ್ರಾನಂದಕರ; ಮತ್ತೆ ಕೆಲವು ಅತ್ಯಂತ ಪೂಜನೀಯ. ಏಕಕಾಲಕ್ಕೆ ಪೂಜನೀಯವೂ ಜಗದ್ಭವ್ಯವೂ ಆಗಿರುವ ಶಿಲ್ಪ ಕೃತಿಗಳೆಂದರೆ ಕರ್ನಾಟಕದಲ್ಲಿರುವ ಉನ್ನತೋನ್ನತ ಬಾಹುಬಲಿ ಪ್ರತಿಮೆಗಳು. ಆದುದರಿಂದಲೇ ನಮ್ಮ ರಾಷ್ಟ್ರಕವಿ ಗೋವಿಂದ ಪೈಯವರು 'ಬಿಳಿಯ ಕೊಳದ ಕಾರ್ಕಳದ ನಿಡುಕರೆಸಿತೊ ಬಂಧುರಂ'

ಎಂದು ಕನ್ನಡಿಗರ ತಾಯನ್ನು ಕೈವಾರಿಸಿದ್ದು. ಬಿಳಿಯ ಕೊಳ (ಶ್ರವಣಬೆಳಗೊಳ), ಕಾರ್ಕಳಗಳಲ್ಲಿ ಮಾತ್ರ ಗೊಮ್ಮಟ ಮೂರ್ತಿಗಳಿರುವುದಿಲ್ಲ. ವೇಣೂರು, ಧರ್ಮಸ್ಥಳಗಳಲ್ಲಿವೆ. ಎತ್ತರದಲ್ಲಿ ಅಷ್ಟಿಲ್ಲದಿದ್ದರೂ ಚೆಲುವಿನಲ್ಲಿ ಅವಕ್ಕೆ ತೀರ ಕಡಿಮೆಯಿಲ್ಲದ ಬಾಹುಬಲಿ ಸ್ವಾಮಿ ಬಿಂಬಗಳು ಕರ್ನಾಟಕದಲ್ಲಿ ಇನ್ನೂ ನಾಲ್ಕಾರು ಇವೆ. ಹಾಗೆಯೇ ನಮ್ಮ ಭರತ ಖಂಡದ ಅನೇಕ ಪ್ರದೇಶಗಳಲ್ಲೂ ಇವೆ. ತ್ಯಾಗ ವೈರಾಗ್ಯಗಳಂತಹ ಪರಮೋಚ್ಚ ಜೀವನ ಮೌಲ್ಯಗಳ ಮೂರ್ತ ರೂಪ ಬಾಹುಬಲಿಸ್ವಾಮಿ. ಆದುದರಿಂದಲೇ ಆತನ ನಿರ್ಮಲ ಚರಿತ್ರೆ - ಚಾರಿತ್ರ್ಯಗಳ ಅಮೃತ ಪ್ರವಾಹ ಭಾರತದ ಸೀಮೋಲ್ಲಂಘನ ಮಾಡಿ ವಿದೇಶಗಳಿಗೂ ವ್ಯಾಪಿಸಿದೆ!

ಇಂತಹ ಬಾಹುಬಲಿ ಸ್ವಾಮಿಯ ಅಂತರಂಗದ ಸೌಂದರ್ಯ, ಬಹಿರಂಗದ ಭವ್ಯತೆ ಮತ್ತು ಆತನ ವಿಶ್ವವ್ಯಾಪಕತೆಯನ್ನು ಸಚಿತ್ರವಾಗಿ, ಸವಿವರವಾಗಿ ಮತ್ತು ಸೋದಾಹರಣವಾಗಿ ಬರೆದು, ಬಣ್ಣಿಸಿ ಭಾವಕ ಜನರ ಕಣ್ಣೆದುರು ನಿಲ್ಲಿಸುವ, ಅತ್ಯಂತ ಶ್ರಮಸಾಧ್ಯವಾದ, ಆದರೆ ಪರಮ ಶ್ಲಾಘನೀಯವಾದ ಒಂದು ಅಕ್ಷರ ಯಜ್ಞವನ್ನು ಮಾಡಿದ್ದಾರೆ ಡಾ. ಹಂಪ ನಾಗರಾಜಯ್ಯ. ಅದೇ **'ಬಾಹುಬಲಿ: ರೂಪ, ಸ್ವರೂಪ ಮತ್ತು ವಿಶ್ವರೂಪ'** ಎಂಬ ಗ್ರಂಥ ರಚನೆ.

'ಬಾಹುಬಲಿ: ರೂಪ, ಸ್ವರೂಪ, ವಿಶ್ವರೂಪ' ಎರಡೂ ಅರ್ಥದಲ್ಲಿ ತೂಕದ ಗ್ರಂಥ. ಕ್ರೌನ್ 1/4ರ ದೊಡ್ಡ ಅಪಾರ ದಪ್ಪ ರಟ್ಟು, ಗಟ್ಟಿ ಬೈಂಡು, ಹಾಲು ಬಣ್ಣದ ಆರ್ಟ್ ಕಾಗದ; ಪುಟ ನೂರ ಐವತ್ತಾರು, ಆದರೆ ಚಿತ್ರ ನೂರ ಎಪ್ಪತ್ತಕ್ಕೂ ಹೆಚ್ಚು. ಒಂದು ಸಣ್ಣ ಮಗ್ಗಿ ಪುಸ್ತಕವನ್ನೇ ಆದರೂ ಎತ್ತುವುದಕ್ಕೂ ತೆರೆಯುವುದಕ್ಕೂ ಎರಡು ಕೈಗಳು ಹತ್ತಿರ ಹತ್ತಿರ ಬರಬೇಕು. ಇನ್ನು 'ಬಾಹುಬಲಿ...'ಯಂತೂ ಉದ್ಗ್ರಂಥ. ಅದರಲ್ಲಿ ಅಡಗಿರುವುದು ಎಲ್ಲರೂ ಕಣ್ಣರಳಿಸಿ ನೋಡುವ, ತಲೆ ಬಾಗಿ ಕೈ ಮುಗಿವ ಬಾಹುಬಲಿ ಸ್ವಾಮಿಯ ಚರಿತ್ರ, ಚಿತ್ರ. ಭಾರವಾಗದೇ ಇದ್ದೀತೇ?

ಹಂಪನಾ ಅವರು ಗ್ರಂಥಕ್ಕೆ ಇರಿಸಿರುವ ಹೆಸರು 'ಬಾಹುಬಲಿ: ರೂಪ, ಸ್ವರೂಪ, ವಿಶ್ವರೂಪ'. ಕವಿ ಕುವೆಂಪು ಬೇರೊಂದು ಸಂದರ್ಭದಲ್ಲಿ 'ಹೆಸರಿನ ಮಹಿಮೆ ಉಸಿರಿಗೆ ಅನ್ವಯ' ಎಂದದ್ದುಂಟು. ಪ್ರಕೃತ ಗ್ರಂಥ ಶೀರ್ಷಿಕೆ ಅದರ ಅಂತರಂಗಕ್ಕೆ ಹಿಡಿದ ಮಣಿದೀಪಿಕೆಯೂ ಹೌದು. ಗ್ರಂಥ ಪರಿಪ್ರೇಕ್ಷ್ಯದಲ್ಲಿ 'ಬಾಹುಬಲಿಗೆ ಕೈ ಮುಗಿದು ಒಳಗೆ ಬನ್ನಿ' ಎಂದು ಆರಂಭದಲ್ಲಿ ಆಸಕ್ತ ಸಹೃದಯನನ್ನು ಆಮಂತ್ರಿಸುವ ಹಂಪನಾ ಮುಂದೆ ಪ್ರಾಕೃತ, ಸಂಸ್ಕೃತ, ಕನ್ನಡಗಳಲ್ಲಿರುವ ಬಾಹುಬಲಿ ಸಾಹಿತ್ಯದ ಸಿಂಹಾವಲೋಕನ ಮಾಡುತ್ತಾರೆ. ಆಮೇಲೆ 'ಗೊಮ್ಮಟ ಪ್ರತಿಮೆಯ ವಿನ್ಯಾಸ'ವನ್ನು ವಿಶ್ಲೇಷಿಸುತ್ತಾರೆ. ಮುಂದಿನ ಅಂಕಣದಲ್ಲಿ 'ಬಾಹುಬಲಿ ಎಲ್ಲೆಲ್ಲಿ' ಎಂಬ ತಲೆಕಟ್ಟಿನಲ್ಲಿ ಸ್ವಾಮಿಯ ವಿಶ್ವರೂಪ ಮತ್ತು ವಿಶ್ವವ್ಯಾಪಕತೆಗಳನ್ನು ವರ್ಣಿಸುತ್ತಾರೆ. ಐದನೆಯದಾದ 'ಸಮಾರೋಪ' ನಾಲ್ಕನೆಯ ಅಧ್ಯಾಯದಲ್ಲೇ ಅಂತರ್ಗತವಾದಂತಿದೆ. ಆರನೆಯದು ಪುಟ್ಟ ಅನುಬಂಧ. ಹೀಗೆ ಷಡ್ಭುಜ ಸುಂದರವಾದದ್ದು ಗ್ರಂಥ ಸೌಧ.

ಬಾಹುಬಲಿ ಸ್ವಾಮಿ ಯಾವ ಯಾವ ಕ್ಷೇತ್ರಗಳಲ್ಲಿ ಎಷ್ಟು ಪಟ್ಟು ಎತ್ತರದಲ್ಲಿ ಎಂತೆಂತಹ ಭಂಗಿಗಳಲ್ಲಿ ನೆಲೆ ನಿಂತಿದ್ದಾನೆ ಅಥವಾ ಕೂತಿದ್ದಾನೆ ಎಂಬುದನ್ನು ವಿವರಿಸುವ ವ್ಯಾಜದಲ್ಲಿ ಹಂಪನಾ ಅವರು ಅನುಷಂಗಿಕವಾದರೂ ಜಿಜ್ಞಾಸುಗಳಿಗೆ ಉಪಯುಕ್ತವಾದ ಅನೇಕ ಮಾಹಿತಿಗಳನ್ನು ಸಂಗ್ರಹಿಸಿದ್ದಾರೆ. ಜಗತ್ತಿನ ಅನೇಕ ಶಿಲಾ ಮೂರ್ತಿಗಳಲ್ಲಿ ಅಥವಾ ವಾಸ್ತು ಶಿಲ್ಪದಲ್ಲಿ ಎದ್ದು ಕಾಣುವ ಒಂದು ಅಂಶ ಅವುಗಳ ಔನ್ನತ್ಯ. ನಮ್ಮ ಬಾಹುಬಲಿ ಸ್ವಾಮಿಯ ಬಿಂಬ ದರ್ಶನ ಮಾಡುವಾಗಲೂ ಭಾವಕನ ಮನಸ್ಸನ್ನು ಮೊದಲು ತುಂಬುವುದು ಅದು ಎತ್ತರ. ಈ ಎತ್ತರ ಬರಿಯ ಎತ್ತರಕ್ಕಾಗಿಯೇ ಇದೆಯೋ ಅಥವಾ ಅದರ ಹಿಂದೆ ಏನಾದರೂ ಉತ್ತರವಿದೆಯೇ ಎಂಬುದನ್ನು ಹಂಪನಾ ಹುಡುಕಿ ತೋರಿಸಿದ್ದಾರೆ. ಜೈನ ಸಂಪ್ರದಾಯದಂತೆ ತೀರ್ಥಂಕರರಿಗೆ, ಶಾಸನ ದೇವತೆಗಳಿಗೆ ಮತ್ತು ಶ್ರುತ ದೇವಿಗೆ ಸಲ್ಲುವಂತಹ ಅಭಿಷೇಕ, ಪೂಜೆಗಳು ತೀರ್ಥಂಕರನಲ್ಲದ, ಶಾಸನ ದೇವತೆಯಲ್ಲದ ಬಾಹುಬಲಿ ಸ್ವಾಮಿಗೂ ಸಲ್ಲುವಂತಾಗಲು ಕಾರಣವೇನು? ಆತನ ಲೋಕಪೂಜ್ಯತೆಯ ರಹಸ್ಯ ಯಾವುದು ಎಂಬುದನ್ನು ಸೊಗಸಾಗಿ ಬಿಡಿಸಿ ತಿಳಿಸಿದ್ದಾರೆ. ಹಾಗೆಯೇ ದಿಗಂಬರ ಮತ್ತು ಶ್ವೇತಾಂಬರ ಸಂಪ್ರದಾಯಗಳಲ್ಲಿ ಬಾಹುಬಲಿ ಸ್ವಾಮಿಯ ಮೂರ್ತಿ ಕಲ್ಪನೆ, ಆರಾಧನಾ ಕ್ರಮಗಳು ಹೇಗಿವೆ ಎಂಬುದನ್ನು ಹಂಪನಾ ಎತ್ತಿ ಹೇಳಿದ್ದಾರೆ.

ಹಂಪನಾ ಅವರು ತಮ್ಮ ಉದ್ಗ್ರಂಥದಲ್ಲಿ ಪ್ರಾಕೃತ, ಸಂಸ್ಕೃತ ಮತ್ತು ಕನ್ನಡದಲ್ಲಿರುವ ಗೊಮ್ಮಟ ಸಾಹಿತ್ಯಗಳ ಮೇಲೂ ಹಕ್ಕಿ ನೋಟ ಹಾಯಿಸಿದ್ದಾರೆ. ಕನ್ನಡದಲ್ಲಿರುವ ಗೊಮ್ಮಟ ವಾಙ್ಮಯದ ಪ್ರಸ್ತಾವವನ್ನು ಅವರು ಹಳಗನ್ನಡಕ್ಕೆ ಮಾತ್ರ ನಿರ್ಬಂಧಿಸಿದ್ದಾರೆ. ಇಪ್ಪತ್ತನೆಯ ಶತಮಾನದಿಂದ ಈಚೆಯ ಹೊಸಗನ್ನಡದಲ್ಲಿ ಬಂದಿರುವ ವಿಪುಲವಾಗಿಯೇ ಇರುವ ಬಾಹುಬಲಿ ಸಾಹಿತ್ಯದ ಉಲ್ಲೇಖವನ್ನು ಉದ್ದೇಶಪೂರ್ವಕ ಬಿಟ್ಟಂತೆ ಕಾಣುತ್ತದೆ. ಹಳತನ್ನು ಎಲ್ಲರೂ ನೋಡಿರಲಾರರು, ಅದಕ್ಕಾಗಿ ನೆನಪಿಸಿದ್ದಾರೆ. ಹೊಸತೆಲ್ಲ ಕಣ್ಣ ಮುಂದೆಯೇ ಇದೆಯಲ್ಲ. ಆದ್ದರಿಂದ ಹೇಳಬೇಕಾಗಿಯೇ ಇಲ್ಲ. ಪ್ರಾಯಃ ಇದೇ ಹಂಪನಾ ಅವರ ನಿಲುವೆಂದು ತೋರುತ್ತದೆ.

ಒಟ್ಟಿನಲ್ಲಿ 'ಬಾಹುಬಲಿ...' ತದ್ವಿಷಯಕವಾದ ಒಂದು ಅಪೂರ್ವ ಗ್ರಂಥ. ಶ್ರೀ ಬಾಹುಬಲಿ ಸ್ವಾಮಿಯ ಪುಣ್ಯ ಕಥನದಲ್ಲೂ ಆತನ ಭವ್ಯ ಮೂರ್ತಿಗಳಲ್ಲೂ ಶ್ರದ್ಧಾಸಕ್ತಿ ಉಳ್ಳವರು ಆಗಾಗ ಎತ್ತಿಕೊಂಡು, ಪುಟಗಳನ್ನು ತಿರುವುತ್ತ ವಿಷಯ ಸಂಗ್ರಹಣ ಮಾಡುವುದಕ್ಕೆ ಇದೊಂದು ಆಕರ ಸೂಚಕವಾದ ಅಧಿಕೃತ ಗ್ರಂಥವಾಗಬಲ್ಲುದು. ಡಾ. ಹಂಪನಾ ಅವರು ಅಲ್ಲಿ ಒಂದಿಷ್ಟು ಚೂರು, ಇಲ್ಲಿ ಇನ್ನೂ ಒಂದು ಚೂರು ತಿದ್ದಿಕೆ ತೀಡಿಕೆ ಮಾಡಿ ವಿಷಯದ ಹವಣಿಕೆ-ಅನುಕ್ರಮಣಿಕೆಗಳಲ್ಲಿ ಸ್ವಲ್ಪ ಹೆಚ್ಚಿನ ಓರಣವನ್ನು ತರುತ್ತಿದ್ದಿದ್ದರೆ ಖಂಡಿತವಾಗಿಯೂ ಗ್ರಂಥ ಸತ್ವ ಅತಿಶಯವೆನಿಸಿ, ಅದರ ಸೌಂದರ್ಯ ವೃದ್ಧಿಸುತ್ತಿತ್ತು ಎಂಬುದರಲ್ಲಿ ಸಂದೇಹವೇ ಇರಲಾರದು. ಆದರೆ ಈಗ ಇರುವಷ್ಟರಲ್ಲೇ ಅದು ಕನ್ನಡದ ಸರಸ್ವತೀ ಭಂಡಾರಕ್ಕೊಂದು ಬಹುಮೂಲ್ಯವಾದ ಕೊಡುಗೆ.

**-ಪ್ರೊ. ಎಂ. ರಾಮಚಂದ್ರ**

ಉದಯವಾಣಿ, ಜೂನ್ 4, 2006

# ಭರತೇಶ ವೈಭವ

**ಗ್ರಂಥ ಸಂಪಾದನೆ: ಸಾಂಗತ್ಯ ಕಾವ್ಯ**

| | | |
|---|---|---|
| ಡೆಮ್ಮೈ 1/8 ಆಕಾರ, ಪುಟಗಳು | : | 120+765=885 |
| ಪ್ರಥಮ ಮುದ್ರಣ | : | 1967 |
| ಸಹಸಂಪಾದಕರು | : | ಪ್ರೊ. ಜಿ. ಬ್ರಹ್ಮಪ್ಪ ಮತ್ತು<br>ಪ್ರೊ. ಸಿ. ಆರ್. ಕಮಲಮ್ಮ<br>(ಡಾ. ಕಮಲಾ ಹಂಪನಾ) |
| ಪ್ರಕಾಶಕರು | : | ಅತ್ತಿಮಬ್ಬೆ ಪ್ರಕಾಶನ,<br>ಬೆಂಗಳೂರು. |
| ಎರಡನೆಯ ಮುದ್ರಣ | : | 2003 |
| ಪ್ರಕಾಶಕರು | : | ಕನ್ನಡ ಸಾಹಿತ್ಯ ಪರಿಷತ್ತು<br>ಬೆಂಗಳೂರು. |

ಮೂರು ಶತಕಗಳನ್ನೂ, ಇನ್ನೂರಕ್ಕೂ ಹೆಚ್ಚು ಹಾಡುಗಳನ್ನೂ ರಚಿಸಿರುವ ಮಹಾಕವಿ ರತ್ನಾಕರವರ್ಣಿಯ ಬೃಹತ್ ಸಾಂಗತ್ಯ ಕಾವ್ಯವಾದ ಭರತೇಶ ವೈಭವವನ್ನು ಮೂರು ಹಸ್ತಪ್ರತಿಗಳ ಸಹಾಯದಿಂದ ಸಂಪಾದಿಸಿದ್ದಾರೆ. ಸುದೀರ್ಘವಾದ ಪ್ರಸ್ತಾವನೆಯಲ್ಲಿ ರತ್ನಾಕರವರ್ಣಿಯ ಈ ಮಹಾಕಾವ್ಯದ ಸಮಗ್ರ ಅಧ್ಯಯನಕ್ಕೆ ಅನುಕೂಲಕರವಾದ ಪಾಂಡಿತ್ಯಪೂರ್ಣ ಕಾವ್ಯ ಪರಿಚಯ ಹಾಗೂ ವಿಮರ್ಶೆಯನ್ನು ಹೊಂದಿರುವುದು ಈ ಕೃತಿಯ ಹೆಗ್ಗಳಿಕೆ.

**ಅಭಿಪ್ರಾಯ :**

ರತ್ನಾಕರವರ್ಣಿಯ ವ್ಯಕ್ತಿತ್ವ ಹಾಗೂ ಆತನ ಕಾವ್ಯದ ಬಗ್ಗೆ ಸವಿವರವಾದ, ಸಮಗ್ರವಾದ ವಿಮರ್ಶೆ ಬಂದಿದೆ. ರತ್ನಾಕರರ್ಣಿಯ ಕಾಲನಿರ್ಣಯದ ಬಗ್ಗೆ ಬಾಹ್ಯ ಮತ್ತು ಆಂತರಿಕ ಪ್ರಮಾಣಗಳನ್ನು ಸಂಗ್ರಹಿಸಿ ಆತನ ಜೀವನ ಕಾಲಮಾನಾವಧಿಯನ್ನು ನಿಗದಿಗೊಳಿಸಿದ್ದಾರೆ. *ಭರತೇಶ ವೈಭವವನ್ನು ಕುರಿತು ವಿಮರ್ಶೆಮಾಡುವಾಗ ಸಂಪಾದಕರು ಆಯ್ಕೆಮಾಡಿಕೊಂಡಿರುವ ವಿಷಯ ವಿವರಣೆ ಸುಸಂಗತವಾಗಿದೆ. ರತ್ನಾಕರನ ಭೇದ ವಿಜ್ಞಾನ, ಚಿದಂಬರ ರಹಸ್ಯ- ಮೊದಲಾದ ವಿಭಾಗಗಳಾಗಿ ವಿಂಗಡಿಸಿಕೊಂಡಿದ್ದಾರೆ.

ಸಂಪಾದಕರು ಬಹು ಅಚ್ಚುಕಟ್ಟಾಗಿ ವಿಷಯ ನಿರ್ವಹಣೆಯನ್ನು ಮಾಡಿದ್ದಾರೆ. ವಿಮರ್ಶೆಯಲ್ಲಿ ಎಲ್ಲೂ ಉದ್ವಿಗ್ನತೆಯನ್ನು ತೋರದೆ, ಭಾವಪರವಶರಾಗದೆ, ವಿಷಯವನ್ನು

ವಸ್ತುನಿಷ್ಠವಾಗಿ ಪರಿಶೀಲಿಸಿದ್ದಾರೆ, ಮತ್ತು ವಿಮರ್ಶೆಯಲ್ಲಿ ಬಹು ಸಂಯಮವನ್ನು ತೋರಿದ್ದಾರೆ**. ಒಟ್ಟಿನಲ್ಲಿ ಸಂಪಾದಕರು ಬಹು ಎಚ್ಚರಿಕೆಯಿಂದ, ಶ್ರದ್ಧೆ ಆಸಕ್ತಿಗಳಿಂದ ಈ ಬೃಹತ್ ಕಾವ್ಯವನ್ನು ಸಂಪಾದಿಸಿದ್ದಾರೆ.

**--ಡಾ. ಎಚ್. ಎಸ್. ಹರಿಶಂಕರ್**

**ವಿ. ಸೂ. :** ಈ ಅಭಿಪ್ರಾಯದ ಮಾತುಗಳು ಕೇವಲ ಹಂಪ. ನಾಗರಾಜಯ್ಯ ಅವರಿಗೇ ಅಲ್ಲದೆ ಈ ಕಾವ್ಯದ ಇನ್ನಿಬ್ಬರು ಸಂಪಾದಕರಿಗೂ ಅನ್ವಯಿಸುತ್ತದೆ.

ಯೋಗಾಯೋಗವೆಂಬಂತೆ ಈ ಮಹಾಕಾವ್ಯದ ಸಂಪಾದಕತ್ರಯರಲ್ಲಿ ಒಬ್ಬರಾದ ಪ್ರೊ. ಕಮಲಾಹಂಪನಾ ಅವರು ಮೂಡಬಿದರೆಯಲ್ಲಿ 2003 ರ ಡಿಸೆಂಬರ್ 18 ರಿಂದ 21 ರ ವರೆಗೆ ನಾಲ್ಕು ದಿವಸ ನಡೆದ ಅಖಿಲ ಭಾರತ 71ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದರು. ಆ ಸಂದರ್ಭದ ಸವಿ ನೆನಪಿಗೆಂದು ಕನ್ನಡ ಸಾಹಿತ್ಯ ಪರಿಷತ್ತು ಭರತೇಶ ವೈಭವದ ಮರು ಮುದ್ರಣಗೊಳಿಸಿ ಸುಲಭ ಬೆಲೆಯಲ್ಲಿ ಓದುಗರಿಗೆ ಸಿಗುವಂತೆ ವ್ಯವಸ್ಥೆ ಮಾಡಿತು. ಅಲ್ಲದೆ ಸಂಪಾದಕರು ಯಾವ ಸಂಭಾವನೆಯನ್ನೂ ನಿರೀಕ್ಷಿಸದೆ ಮರುಮುದ್ರಣಕ್ಕೆ ಒಪ್ಪಿಗೆಯಿತ್ತರು.

ಸಂ.

# ಭಾರತದ ಭಾಷಾ ಸಮಸ್ಯೆ

## ಭಾಷಾ ಸಮಸ್ಯೆಯ ಪರಿಶೀಲನೆ

| | | |
|---|---|---|
| ಕ್ರೌನ್ 1/8 ಆಕಾರ, ಪುಟಗಳು | : | 33+vii |
| ಪ್ರಥಮ ಮುದ್ರಣ | : | 1968 |
| ಪ್ರಕಾಶಕರು | : | ಹಿಂದ್ ವಿದ್ಯಾರ್ಥಿ ಯುವಕ ಸಮ್ಮೇಲ ಮಲ್ಲೇಶ್ವರಂ, ಬೆಂಗಳೂರು. |

ದಕ್ಷಿಣ ಭಾರತದ ಮೇಲೆ ಉತ್ತರದ ಪ್ರಭುತ್ವ ಹಿಂದಿ ಭಾಷೆಯನ್ನು ಒತ್ತಾಯದಿಂದ ಹೇರುತ್ತಿರುವುದನ್ನು ಪ್ರತಿಭಟಿಸುವ ಸಲುವಾಗಿ ಹಂಪನಾ ಅವರ ಮುಂದಾಳತ್ವದಲ್ಲಿ ಕೆಲವು ಯುವಕರು ಸೇರಿ 'ಹಿಂದ್ ವಿದ್ಯಾರ್ಥಿ ಯುವಕರ ಸಮ್ಮೇಲ' ನವನ್ನು ನಡೆಸಿದರು. ಆ ಸಂದರ್ಭದಲ್ಲಿ ಭಾರತದಲ್ಲಿ ಇರುವ ಭಾಷಾ ಸಮಸ್ಯೆಯನ್ನು ವಸ್ತುನಿಷ್ಠವಾದ ಗ್ರಹಿಕೆಯಿಂದ ವಿಶ್ಲೇಷಿಸಿ ರಚಿಸಿದ ಗ್ರಂಥವಿದು. ಮಾತೃಭಾಷೆಗೆ ಏಕೆ ಆದ್ಯತೆ ಕೊಡಬೇಕು ಎಂಬುದನ್ನೂ ಹಿಂದಿ ಭಾಷೆಯನ್ನು ಒಂದು ಭಾರತೀಯ ಭಾಷೆಯಾಗಿ ಸ್ವೀಕರಿಸಬೇಕೆಂಬುದನ್ನೂ ಇದರಲ್ಲಿ ಪ್ರತಿಪಾದಿಸಲಾಗಿದೆ.

[ನೋಡಿ : ಕನ್ನಡದ ಮೂವರು ಕಟ್ಟಾಳುಗಳು]

ಈ ಕೃತಿಯ ರಾಷ್ಟ್ರಪಿತ ಮಹಾತ್ಮಗಾಂಧೀಜಿ ಮತ್ತು ಶ್ರೀ ರಾಮಮನೋಹರ ಲೋಹಿಯಾ ಅವರಿಗೆ ಅರ್ಪಿಸಲಾಗಿದೆ.

**ಅಭಿಪ್ರಾಯ:**

ಭಾರತದ ಭಾಷೆ ಸಮಸ್ಯೆಯನ್ನು ಹಂಪನಾ ಅವರು. 1. ರಾಷ್ಟ್ರಭಾಷೆಯ ಹಿನ್ನೆಲೆ, 2. ರಾಷ್ಟ್ರಭಾಷೆಯ ಇತಿಹಾಸ, 3. ವಿರೋಧ ಹೊಸದಲ್ಲ, 4. ಭಾಷಾವಾರು ಪ್ರಾಂತರಚನೆ, 5. ಕಿಡಿಹಾರಿತು, 6. ಹಿಂದಿ ಏಕೆ ರಾಜ್ಯ ಭಾಷೆಯಾಗಬೇಕು, 7. ಹಿಂದಿ ಭಾಷೆಗೆ ಇರುವ ಅನುಕೂಲ, 8. ಇಂಗ್ಲಿಷಿನ ಮೋಡಿ. 9. ಕನ್ನಡ ಏಕೆ ರಾಜ್ಯ ಭಾಷೆಯಾಗಬಾರದು- ಎಂಬುದಾಗಿ ವಿಂಗಡಿಸಿ ವಿವೇಚಿಸಿದ್ದಾರೆ. * ಕನ್ನಡಿಗರಾದ ಹಂಪನಾವರು ತಮ್ಮ ತಾಯ್ನುಡಿಯ ಬಗೆಗೆ ವ್ಯಕ್ತ ಪಡಿಸಿರುವ ಕಾಳಜಿ ಸಹಜ. ಹಾಗಾಗಿ ಕನ್ನಡ ಆಡಳಿತ ಭಾಷೆಯಾಗಬೇಕು. ಬಡ ಬೋರೇಗೌಡರೇ ತುಂಬಿರುವ ಕನ್ನಡ ನಾಡಿನಲ್ಲಿ ಅವರ ಭಾಷೆಯಲ್ಲಿಯೇ ವ್ಯವಹಾರ ನಡೆಯಬೇಕೆಂದು ಸಕಾರಣವಾಗಿ ನಿರೂಪಿಸಿದ್ದಾರೆ. ಕನ್ನಡದ ಮಕ್ಕಳು ಕಣ್ದೆರೆದು ಗರ್ಜಿಸಬೇಕೆಂಬುದನ್ನು ಸೂಚಿಸಿದ್ದಾರೆ; ಅದಕ್ಕಾಗಿ ಕನ್ನಡಿಗರು ಹೋರಾಡಬೇಕೆಂಬ ಸೂಚನೆಯೂ ಇದೆ.

--ಪ್ರೊ. ಆರ್. ರಾಚಪ್ಪ

# ಭಾಷೆ

ಭಾಷಾ ವಿಜ್ಞಾನ

ಕ್ರೌನ್ 1/8 ಆಕಾರ, ಪುಟಗಳು : 54+iv
ಪ್ರಥಮ ಮುದ್ರಣ : 1973
ಪ್ರಕಾಶಕರು 1079, 5 ಬ್ಲಾಕು, ರಾಜಾಜಿನಗರ,
ಬೆಂಗಳೂರು - 560010.

ಈ ಪುಟ್ಟ ಪುಸ್ತಕ ಭಾಷೆ ಎಂದರೇನು ಎಂಬುದರ ವಿವರಣೆ. ಇದರಲ್ಲಿ ಒಟ್ಟು ನೂರು ಪ್ಯಾರಾಗಳಿವೆ, ಪ್ಯಾರಾದಿಂದ ಪ್ಯಾರಾಕ್ಕೆ ಬೇರೆ ಬೇರೆ ವಿಷಯಗಳು, ಭಾಷೆಯ ವ್ಯಾಖ್ಯಾನ-ನಿರ್ವಚನ ಪ್ರಬುದ್ಧವಾಗಿ ಬಂದಿವೆ.

ಈ ಕೃತಿಯನ್ನು ಕಮಲಾ ಹಂಪನಾ ಅವರಿಗೆ ಉಡುಗೊರೆಯಾಗಿ ಅರ್ಪಿಸಲಾಗಿದೆ.

**ಅಭಿಪ್ರಾಯ:**

'ಭಾಷೆಯೆಂದರೇನು' ಎಂಬುದರ ಕುರಿತು ಆಧುನಿಕರ ವಿಚಾರಗಳನ್ನು ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ಎರಕ ಹೊಯ್ದಿಟ್ಟಿರುವುದೇ ಈ ಪುಸ್ತಿಕೆಯ ವಿಷಯ.* ಭಾಷೆಯ ವ್ಯಾಖ್ಯೆಯನ್ನು, ಅದರ ಸಾಮಾನ್ಯ ತತ್ವಗಳ ಆಳಗಲಗಳನ್ನು ಸ್ಥೂಲವಾಗಿ ಪರಿಚಯಿಸಿಕೊಡುವಲ್ಲೆಲ್ಲ ಇಂಗ್ಲಿಷಿನಲ್ಲಿ ಈ ಕುರಿತಾಗಿ ಬಂದ ಆಧುನಿಕ ವಿಚಾರಗಳನ್ನು ಸುಲಲಿತ ಕನ್ನಡದಲ್ಲಿ ಸಾರವತ್ತಾಗಿ ಸೋಸಿ ನಿರೂಪಿಸುತ್ತ ಸಾಗಿದ್ದಾರೆ.* ಈ ಎಲ್ಲ ವಿಷಯಗಳೂ ಸಾಕಷ್ಟು ಗಂಭೀರವೂ ವಿಶಾಲ ವಿವರಣೆಗೆ ಅಳವಡುವಂತಹವೂ ಆಘಿವೆ; ಅವುಗಳನ್ನು 'ಕರಿಯನ್ನು ಕೈ ಗನ್ನಡಿಯಲ್ಲಿ ಹಿಡಿದು ಹಂಪನಾ ನಮ್ಮ ಕೈಗಿತ್ತಿದ್ದಾರೆ. *** ಪುಸ್ತಿಕೆಯಲ್ಲಿನ ಭಾಷಾ ಶೈಲಿಯ ಬಗೆಗೆ ಒಂದು ಮಾತು_ ಭಾಷೆ ತೀರ ಆತ್ಮೀಯ ಹಾಗೂ ಲವಲವಿಕೆಯಿಂದ ಕೂಡಿದೆ, ನೇರವೂ ಆಗಿದೆ. ಆದರೆ ಕೆಲವೆಡೆ ಏಕ್‌ದಂ ಪ್ರೌಢವಾಗಿ ಬಿಡುತ್ತದೆ.* ಭಾಷೆಯನ್ನು ಸಮಗ್ರವಾಗಿ ಆಧುನಿಕ ತತ್ವಗಳ ಹಿನ್ನೆಲೆಯಲ್ಲಿ ತುಂಬ ಚೆನ್ನಾಗಿ ಪರಿಚಯಿಸಿಕೊಡಬಲ್ಲ ಕೃತಿ 'ಭಾಷೆ'. ಪುಟ್ಟದಾದ ಈ ಪುಸ್ತಕ ಖಂಡಿತವಾಗಿಯೂ ಉಪಯುಕ್ತ ಕೈ ಪಿಡಿಯಾಗಿದೆ; ಹಂಪನಾ ಅವರ ಶಾಸ್ತ್ರೀಯ ಬೆಳವಣಿಗೆಗೆ ಉತ್ತಮ ಸಾಕ್ಷಿಯಾಗಿದೆ.

**--ಡಾ. ಸಂಗಮೇಶ ಸವದತ್ತಿಮಠ**

# ಭಾಷಾ ವಿಜ್ಞಾನ

**ಐತಿಹಾಸಿಕ ಭಾಷಾವಿಜ್ಞಾನ**

ಡೆಮ್ಮೆ 1/8 ಆಕಾರ, ಪುಟಗಳು : 352+xx

ಪ್ರಥಮ ಮುದ್ರಣ : 1968

ಪ್ರಕಾಶಕರು : ಡಿ. ವಿ. ಕೆ ಮೂರ್ತಿ, ಮೈಸೂರು.

ಇದು ಭಾಷಾ ವಿಜ್ಞಾನದ ಒಟ್ಟು ರೂಪರೇಖೆಗಳ ಸ್ಥೂಲ ವಿವೇಚನೆ ಇರುವ ಚಾರಿತ್ರಿಕ ವಿಜ್ಞಾನ. ಇದರಲ್ಲಿ ಒಟ್ಟು 23 ಅಧ್ಯಾಯಗಳಿವೆ, 5 ಅನುಬಂಧಗಳಿವೆ. ಡಿ. ಎಲ್. ನರಸಿಂಹಾಚಾರ್ಯರು ಮುನ್ನುಡಿ ಬರೆದಿದ್ದಾರೆ.

ಈ ಪುಸ್ತಕವನ್ನು ದೇ. ಜವರೇಗೌಡರಿಗೆ 50 ವರ್ಷ ತುಂಬಿದ ಸವಿನೆನಪಿಗೆ ಅರ್ಪಿಸಲಾಗಿದೆ.

**ಅಭಿಪ್ರಾಯ:**

ಈ ಗ್ರಂಥವನ್ನು ಶ್ರೀ ಹಂಪ. ನಾಗರಾಜಯ್ಯನವರು ಬರೆದು ಕನ್ನಡಿಗರಿಗೆ ಮಾಡಿರುವ ಉಪಕಾರವನ್ನು ಅಷ್ಟಿಷ್ಟೆಂದು ಹೇಳುವ ಹಾಗಿಲ್ಲ. ಅನೇಕ ಆಧಾರ ಗ್ರಂಥಗಳನ್ನು ಅವಲೋಕಿಸಿ ಮನನಮಾಡಿ ಸಾರಭೂತವಾದ ಅಂಶಗಳನ್ನು ಒಂದೆಡೆ ಸೇರಿಸಿ ಸೌಧವನ್ನು ಕಟ್ಟುವ ಶಿಲ್ಪಿಯಂತೆ ಅವರು ತಮ್ಮ ಗ್ರಂಥವನ್ನು ಬರೆದಿದ್ದಾರೆ. ಅವರ ಭಾಷೆ ನಿರರ್ಗಳವಾಗಿ ಓಡುತ್ತದೆ; ಅದು ಸುಲಭವೂ ಸಂಯಮಯುಕ್ತವೂ ಆಗಿದೆ. ಅವರ ಉತ್ಸಾಹ ಅವರ ಭಾಷೆಯಲ್ಲಿ ಹೊಳಲು ಕೊಡುತ್ತಿದೆ. ಇಷ್ಟು ಒಳ್ಳೆಯ ಶಾಸ್ತ್ರಗ್ರಂಥವನ್ನು ಬರೆದ ಅವರಿಗೆ ಅಭಿನಂದನೆಗಳು ಸಲ್ಲುತ್ತವೆ.

**--ಡಿ. ಎಲ್. ನರಸಿಂಹಾಚಾರ್**

(‘ಮುನ್ನುಡಿ’ಯಿಂದ)

# ಭಾಷಾ ವಿಜ್ಞಾನಿಗಳು

**ಭಾಷಾವಿಜ್ಞಾನದ ವ್ಯಕ್ತಿ ಚಿತ್ರಗಳು**

| | | |
|---|---|---|
| ಡೆಮ್ಮಿ 1/8 ಆಕಾರ, ಪುಟಗಳು | : | 392+iv+ii |
| ಪ್ರಥಮ ಮುದ್ರಣ | : | 1980 |
| ಪ್ರಕಾಶಕರು | : | ಪ್ರಗತಿ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, ಬೆಂಗಳೂರು. |

ಭಾಷಾವಿಜ್ಞಾನ ಕ್ಷೇತ್ರ ಇತ್ತೀಚೆಗೆ ಹಲವು ಒಳ ಶಾಖೆಗಳನ್ನು ಪಡೆದು ದೊಡ್ಡದಾಗಿ ಬೆಳೆಯುತ್ತಿದೆ. ಈ ಜ್ಞಾನ ಶಾಖೆಯ ಬೆಳವಣಿಗೆಗೆ ಕಾರಣಪುರುಷರಾದ ಭಾಷಾ ವಿಜ್ಞಾನಿಗಳು ಪ್ರಪಂಚದ ಬೇರೆ ಬೇರೆ ಭಾಗಗಳಿಗೆ ಸೇರಿದವರಾಗಿದ್ದಾರೆ. ಜನ ಸಾಮಾನ್ಯರೂ ಸಹ ಅಂತಹವರ ಸಾಧನೆಗಳನ್ನು ಪರಿಚಯಿಸಿಕೊಳ್ಳಬೇಕಾದ್ದಿದೆ. ಈ ಅಭಿಪ್ರಾಯವನ್ನು ಹೊಂದಿ ಲೇಖಕರು ಪ್ರಸ್ತುತ ಗ್ರಂಥದಲ್ಲಿ 67 ಜನ ಪ್ರಾತಿನಿಧಿಕರಾದವರ ಬದುಕನ್ನೂ ಬರವಣಿಗೆಯನ್ನೂ ತಿಳಿಯಾದ ಶೈಲಿಯಲ್ಲಿ, ಭಾಷಾ ವಿಜ್ಞಾನದ ಪಾರಿಭಾಷಿಕ ಹೊರೆಯಿಲ್ಲದಂತೆ, ರೂಢಿಯ ಮಾತುಗಳನ್ನೇ ಬಳಸಿಕೊಂಡು ಪರಿಚಯಿಸಿದ್ದಾರೆ. ಪಾಣಿನಿಯಂತಹ ಎರಡು ಸಾವಿರ ವರ್ಷಗಳ ಹಿಂದಿನ ಪ್ರಾಚೀನ ಪ್ರಾಜ್ಞರೂ ಆತ್ಯಾಧುನಿಕರೂ ಇದರಲ್ಲಿ ಸೇರ್ಪಡೆ ಆಗಿದ್ದಾರೆ.

ಇವುಗಳಲ್ಲಿನ ಬಹುಮಟ್ಟಿನ ವ್ಯಕ್ತಿಚಿತ್ರಣಗಳು ಈ ಮೊದಲೇ ಅನ್ಯತ್ರ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದವು, ಅವುಗಳ ಸಂಕಲನವೇ ಈ ಕೃತಿ.

**ಅಭಿಪ್ರಾಯ:**

ಇದೊಂದು ಶ್ಲಾಘನೀಯ ಪ್ರಯತ್ನ. ಈ ಬಗೆಯ ಕೆಲಸ ಯಾವುದೇ ಭಾರತೀಯ ಭಾಷೆಯಲ್ಲಿ ಈ ಪ್ರಮಾಣದಲ್ಲಿ ಕಾಣಿಸಿಕೊಂಡಿರುವುದು ನನ್ನ ಗಮನಕ್ಕೆ ಬಂದಿಲ್ಲ*.

ಈ ಬಗೆಯ ಕೆಲಸವೊಂದನ್ನು ಕೈಗೆತ್ತಿಕೊಂಡು ಡಾ. ಹಂಪ. ನಾಗರಾಜಯ್ಯನವರು ಸಾಹಸ ಮಾಡಿದ್ದಾರೆ, ಯಶಸ್ವಿಯಾಗಿದ್ದಾರೆ**. ಇವರು ಕೊಟ್ಟ ವಿವರಣೆ, ವಿಶ್ಲೇಷಣೆ ಇಂದಿನ ಅಧ್ಯಯನಕ್ಕೆ ನಾಂದಿ ಸ್ವರೂಪದ್ದಾಗಿದೆ. ಇವರ ಕೊಡುಗೆ ಎಷ್ಟು ಅನಿವಾರ್ಯವಾಗಿತ್ತು ಎಂಬುದನ್ನು ಹಂಪನಾ ತುಂಬಾ ಪ್ರಬುದ್ಧವಾಗಿ ಪ್ರತಿಪಾದಿಸಿದ್ದಾರೆ. ಹಾಗೆಯೇ ಈ ಆಧಾರ ಸ್ಥಂಭಗಳನ್ನು ಸೊಗಸಾಗಿ ಕಡೆದಿದ್ದಾರೆ ತಮ್ಮ ನುಡಿ ಚಾಣದಿಂದ. *ಈ ಕ್ಷೇತ್ರದ ಪ್ರಕಾಂಡ ಪಂಡಿತ ಪಾಣಿನಿಯ ಚಿತ್ರಣ ಹಂಪನಾ ಕಡೆದಿರುವ ನುಡಿ ಚಿತ್ರಣಗಳಲ್ಲಿ ಅತ್ಯಂತ ಗಣ್ಯವಾದುದು**.

ಈ ಗ್ರಂಥದ ಆಮೂಲಾಗ್ರ ಪರಿಶೀಲನೆಯ ನಂತರ ಇದರ ಉತ್ಕೃಷ್ಟತೆಗಾಗಿ ಹಂಪ. ನಾಗರಾಜಯ್ಯನವರು ಇನ್ನೂ ಹೆಚ್ಚಿನ ಎಚ್ಚರವಹಿಸುವುದು ಅಗತ್ಯವಿತ್ತೆಂದು ತೋರುತ್ತದೆ**. ಈ ಕ್ಷೇತ್ರದಲ್ಲಿ ಇವರೆಲ್ಲ ಪಟ್ಟ ಶ್ರಮ, ತುಳಿದ ಹಾದಿ, ಅನುಭವಿಸಿದ ನೋವು-ನಲಿವುಗಳನ್ನು ಹಂಪನಾ ಅಮೋಘವಾದ ರೀತಿಯಲ್ಲಿ ನಮ್ಮ ಮನದುಂಬುತ್ತಾರೆ.

**--ಡಾ. ಸೋಮಶೇಖರಗೌಡ**

# ಬೀದರ್ ಸಾಹಿತ್ಯ ಸಮ್ಮೇಳನ

ಸಂಪಾದಕರು

| | | |
|---|---|---|
| ಡೆಮ್ಮಿ 1/8 ಆಕಾರ, ಪುಟಗಳು | : | 464+xii |
| ಪ್ರಥಮ ಮುದ್ರಣ | : | 1986 |
| ಪ್ರಕಾಶಕರು | : | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-18. |

1985ರ ಏಪ್ರಿಲ್ 5, 6, 7 ರಂದು ಮೂರು ದಿನಗಳು ಜಿಲ್ಲಾ ಕೇಂದ್ರವಾದ ಬೀದರ್ ನಗರದಲ್ಲಿ ನಡೆದ ಅಖಿಲ ಭಾರತ 57ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಕಲಾಪಗಳನ್ನು ಕ್ರಮವಾಗಿ ಅಳವಡಿಸಿ ಈ ಪುಸ್ತಕದಲ್ಲಿ ಸಂಯೋಜಿಸಲಾಗಿದೆ. ಸಮ್ಮೇಳನದಲ್ಲಿ ಏರ್ಪಾಟಾಗಿದ್ದ ಎಲ್ಲ ಗೋಷ್ಠಿಗಳ ಪ್ರಬಂಧಗಳೂ, ಕವನಗಳೂ ಈ ಸಂಕಲನದಲ್ಲಿವೆ. ಈ ಸಮ್ಮೇಳನದ ಅಧ್ಯಕ್ಷರಾಗಿದ್ದವರು ಡಾ. ಹಾ. ಮಾ. ನಾಯಕ.

ಸಾಹಿತ್ಯ ಮತ್ತು ಸಾಮಾಜಿಕ ಮೌಲ್ಯಗಳು, ಕೈಲಾಸಂ ನಾಟಕಗಳು, ಸಾಹಿತ್ಯ ಮತ್ತು ಸಂವಹನ ಗೋಷ್ಠಿ, ಕನ್ನಡ ಸಾಹಿತ್ಯದಲ್ಲಿ ಇತ್ತೀಚಿನ ಒಲವುಗಳು, ಆಡಳಿತದಲ್ಲಿ ಕನ್ನಡ, ಜನಪದ ಗೋಷ್ಠಿ, ಕವಿಗೋಷ್ಠಿ- ಇವು ಸಮ್ಮೇಲನದಲ್ಲಿ ಅಳವಡಿಸಿದ ಗೋಷ್ಠಿಗಳು.

ಈ ಗೋಷ್ಠಿಗಳಲ್ಲಿ ಮಂಡಿತವಾದ ಎಲ್ಲ ಪ್ರಬಂಧಗಳು ಹಾಗೂ ಕವನಗಳನ್ನು ಉತ್ತಮವಾಗಿ ಇಲ್ಲಿ ಸಂಕಲಿಸಲಾಗಿದೆ. ಧರ್ಮಸ್ಥಳ, ಬೆಳಗಾವಿ, ಚಿಕ್ಕಮಗಳೂರು, ಮಡಿಕೇರಿ, ಶಿರಸಿ, ಕೈವಾರ- ಸ್ಥಳಗಳಲ್ಲಿ ನಡೆದ ಸಾಹಿತ್ಯ ಸಮ್ಮೇಳನಗಳ ಸಮಗ್ರ ಕಲಾಪಗಳನ್ನು ಪುಸ್ತಕ ರೂಪದಲ್ಲಿ ಹೊರತಂದ ಹಂಪನಾ ಅವರು ಈ ಬೀದರ್ ಸಮ್ಮೇಳನ ಸಂಪುಟವನ್ನು ಸಂಯೋಜಿಸಿರುವುದು ಅರ್ಥಪೂರ್ಣವಾಗಿದೆ. ಹೊಸಗನ್ನಡ ಸಾಹಿತ್ಯ ಚರಿತ್ರೆಗೆ, ವಿಮರ್ಶೆಗೆ ಇವು ಮೂಲ ಆಕರಗಳು.

ಸಂ.

# ಭೀಮ ಭಕ್ತಿ ಪರೀಕ್ಷೆ

ಅನುವಾದ

| | | |
|---|---|---|
| ಕ್ರೌನ್ 1/8 ಆಕಾರ, ಪುಟಗಳು | : | 42 |
| ಪ್ರಥಮ ಮುದ್ರಣ | : | 1979 |
| ಪ್ರಕಾಶಕರು | : | ಐಬಿಎಚ್ ಪ್ರಕಾಶನ, ಬೆಂಗಳೂರು-9 |

ಇದು ಇಂಗ್ಲಿಷಿನಲ್ಲಿ ಶ್ರೀಮತಿ ಸುಗುಣಾ ಮಂಜೇಶ್ವರ್ ಅವರು ಬರೆದ ಮಕ್ಕಳ ಪುಸ್ತಕದ ಕನ್ನಡ ಅನುವಾದ. ಮಹಾಭಾರತದ ಭೀಮನ ಭಕ್ತಿ, ಆತ್ಮಪ್ರತ್ಯಯ, ಪರಾಕ್ರಮಗಳನ್ನು ತಿಳಿಗನ್ನಡದಲ್ಲಿ ತಿಳಿಸಿರುವ ಪುಸ್ತಕ, ಅರ್ಜುನ, ಕೃಷ್ಣ ಮತ್ತು ಹನುಮಂತ ಮೊದಲಾದ ಪಾತ್ರಗಳು ಇದರಲ್ಲಿವೆ. ಭೀಮ ಭಕ್ತಿಪರೀಕ್ಷೆ, ಭೀಮ- ಹನುಮಾನ್ ಭೇಟಿ, ಅಕ್ಷಯ ಪಾತ್ರೆ, ಬಾಣದ ಸೇತುವೆ, ಸಾವಿನ ಮಡುವು, ಕೃಷ್ಣನ ಭಕ್ತನಿಗಿತ್ತ ಫಲ, ಬಾಯಾರಿಕೆಗೆ ಅಮೃತ, ಅರ್ಜುನನ ಹೆಮ್ಮೆಗೊಂದು ಮದ್ದು- ಎಂಬ ಕಥಾ ಭಾಗಗಳು ಇದರಲ್ಲಿವೆ.

ಅಭಿಪ್ರಾಯ:

1979ರ ಮಕ್ಕಳ ವರ್ಷದ ಸುಸಂದರ್ಭದಲ್ಲಿ ಬರೆಯಲ್ಪಟ್ಟ ಈ ಪುಟ್ಟ ಪುಸ್ತಕ ಕಿಶೋರರ ಮೇಲೆ ತುಂಬಾ ಪ್ರಭಾವ ಬೀರುವ ಕೃತಿಯಾಗಿದೆ. ಈ 'ಭೀಮ ಭಕ್ತಿ ಪರೀಕ್ಷೆ' ಗ್ರಂಥವು ಅನುವಾದಿತವೆಂದು ಅವರೇ ಹೇಳಿದ್ದರಿಂದ ನಂಬಬೇಕಾಗಿದೆ, ಇಲ್ಲವಾದರೆ ಕನ್ನಡದ ಒಂದು ಸ್ವತಂತ್ರ ಕೃತಿ ಎಂಬಂತೆ ಓದುಗನಿಗೆ ಭಾಸವಾಗುವುದು. ಮೂಲದಲ್ಲಿದ್ದ ವಸ್ತು ಕೆಡದಂತೆ ಕನ್ನಡದ ಜಾಯಮಾನಕ್ಕೆ, ಮಕ್ಕಳ ಅಭಿರುಚಿಗೆ ತಕ್ಕಂತೆ ಸರಳ ಸುಂದರ ಚಿಕ್ಕ ಚಿಕ್ಕವಾಕ್ಯಗಳಲ್ಲಿ ಓದುಗರ ಕುತೂಹಲವನ್ನು ಕೆರಳಿಸುತ್ತದೆ ಈ ಕೃತಿ*.

ಭಾಷೆಯಲ್ಲಿ ಸರಳತೆ, ಭಾವನೆಯಲ್ಲಿ ತೀವ್ರತೆ, ಓದುಗರ ಮನಸ್ಸಿನ ಮೇಲೆ ಪರಿಣಾಮವಾಗುವಂತೆ ಚಿತ್ರಿಸಿದ ಭೀಮಭಕ್ತಿ ಪರೀಕ್ಷೆಯು ಮಕ್ಕಳ ಸಾಹಿತ್ಯದಲ್ಲೊಂದು ಮೈಲಿಗಲ್ಲು.

-- ಪ್ರೊ. ಸಿ. ವ್ಹಿ. ಕೆರಿಮನಿ

# ಬೆಳಗಾವಿ ಸಾಹಿತ್ಯ ಸಮ್ಮೇಳನ

**ಸಂಪಾದಕರು**

ಡೆಮ್ಮೈ 1/8ಆಕಾರ, ಪುಟಗಳು : 644+xii

ಪ್ರಥಮ ಮುದ್ರಣ : 1980

ಪ್ರಕಾಶಕರು : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-18.

1980 ರ ಫೆಬ್ರವರಿ 7ರಿಂದ 10 ರ ವರೆಗೆ ನಾಲ್ಕು ದಿನಗಳು ಜಿಲ್ಲಾ ಕೇಂದ್ರವಾದ ಬೆಳಗಾವಿ ಮಹಾನಗರದಲ್ಲಿ ನಡೆದ ಅಖಿಲ ಭಾರತ 52ನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಏರ್ಪಾಟಾಗಿದ್ದ ಎಲ್ಲ ಗೋಷ್ಠಿಗಳ ಪ್ರಬಂಧಗಳು, ಕವಿಗಳ ಕವನಗಳ ಸಂಕಲನ ಇದರಲ್ಲಿದೆ. ಕೆಲವು ಪ್ರಾತಿನಿಧಿಕ ಭಾವಚಿತ್ರಗಳೂ ಸೇರಿವೆ. ಈ ಸಮ್ಮೇಳನದ ಅಧ್ಯಕ್ಷರು ಬಸವರಾಜ ಕಟ್ಟೀಮನಿ. ಈ ಸಮ್ಮೇಳನದಲ್ಲಿದ್ದ ಗೋಷ್ಠಿಗಳು ಪ್ರಸಾರ ಮಾಧ್ಯಮಗಳು, ಗಡಿ- ಹೊರನಾಡು ಸಮಸ್ಯೆಗಳು, ದಲಿತ ಸಾಹಿತ್ಯಗೋಷ್ಠಿ, ಮುದ್ರಣ ಪ್ರಕಟಣೆ ಗೋಷ್ಠಿ, ಕವಿಗೋಷ್ಠಿ ಜಾನಪದಗೋಷ್ಠಿ, ವಿಜ್ಞಾನ ಸಾಹಿತ್ಯಗೋಷ್ಠಿ, ಮರಾಠಿ ಕನ್ನಡ ಬಾಂಧವ್ಯಗೋಷ್ಠಿ- ಮುಂತಾದ ಗೋಷ್ಠಿಗಳಲ್ಲಿ ಮಂಡಿತವಾದ ಪ್ರಬಂಧಗಳು ಸಂಕಲಿತವಾಗಿವೆ.

**ಅಭಿಪ್ರಾಯ:**

ಕರ್ನಾಟಕದ ಬೇರೆ ನಗರಗಳಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನವನ್ನು ನಡೆಸುವುದಕ್ಕೂ ಬೆಳಗಾವಿಯಲ್ಲಿ ಏರ್ಪಡಿಸುವುದಕ್ಕೂ ಅಂತರವಿದೆ. ಬೆಳಗಾವಿ ಎರಡು ಭಾಷೆಗಳು ಬಳಕೆಯಲ್ಲಿರುವ ಮಹಾನಗರ. ಇಲ್ಲಿ ಮರಾಠಿಯನ್ನು ಮಾತೃಭಾಷೆಯಾಗಿ ಬಳಸುವವರು ಲಕ್ಷಕ್ಕೂ ಮೀರಿ ಇದ್ದಾರೆ. ಆದರೆ ನಾಲ್ಕು ದಿನಗಳ ಈ ಅಪೂರ್ವ ಸಮ್ಮೇಳನ ಅದ್ಧೂರಿಯಾಗಿ ಅಷ್ಟೇ ಅಲ್ಲದೆ ಗದ್ದಲವಿಲ್ಲದೆ ನಡೆಯಿತು. ಹಂಪ. ನಾಗರಾಜಯ್ಯ ಸಾಹಿತಿಯಾಗಿ, ಸಂಘಟಕರಾಗಿ, ಆಡಳಿತ ನಿಷ್ಣಾತರಾಗಿ ಮಿಂಚಿದ್ದನ್ನು ಅವರ ಜೊತೆಯಲ್ಲೇ ಇದ್ದು ನೋಡಿದೆ. ಇದೀಗ ಇಡೀ ಸಮ್ಮೇಳನದ ದಾಖಲೆ ನೋಡಿದಾಗ ಆನಂದಬಾಷ್ಪ ಬರುತ್ತದೆ. ಸಮ್ಮೇಳನದ ಹೊಣೆ ಹೊತ್ತವರಲ್ಲಿ ನಾನೂ ಒಬ್ಬ. ಆ ಓಡಾಟದಲ್ಲಿ ಕೆಲವು ಉಪನ್ಯಾಸ ಕೇಳಲಿಕ್ಕೆ ಸವಡು ಇರಲಿಲ್ಲ. ಈಗ ಇಡೀ ಕಾರ್ಯಕ್ರಮವನ್ನು ಆಲಿಸಿದ ಅನುಭವ ಆಯಿತು. ಈ ಮಹಾಗ್ರಂಥದ ಸಂಪಾದಕರು ಒಳ್ಳೆಯ ಕೆಲಸ ಮಾಡಿದ್ದಾರೆ.

-ಪ್ರೊ. ಪಿ. ಕೆ. ಭಾಗೋಜಿ

## ಮಡಿಕೇರಿ ಸಾಹಿತ್ಯ ಸಮ್ಮೇಳನ

ಸಂಪಾದಕರು

| | | |
|---|---|---|
| ಡೆಮ್ಮೆ 1/8 ಆಕಾರ, ಪುಟಗಳು | : | 500+vii |
| ಪ್ರಥಮ ಮುದ್ರಣ | : | 1982 |
| ಪ್ರಕಾಶಕರು | : | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು - 18. |

1981ರ ನವೆಂಬರ್ 27 ರಿಂದ31ರ ವರೆಗೆ ಕೊಡಗು ಜಿಲ್ಲಾ ಕೇಂದ್ರವಾದ ಮಡಿಕೇರಿಯಲ್ಲಿ ನಡೆದ ಅಖಿಲ ಭಾರತ 54 ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಏರ್ಪಾಟಾಗಿದ್ದ ಎಲ್ಲ ಗೋಷ್ಠಿಗಳ ಪ್ರಬಂಧ ಹಾಗೂ ಕವಿತೆಗಳನ್ನು, ಕೆಲವು ಪ್ರಾತಿನಿಧಿಕ ಚಿತ್ರಗಳನ್ನೂ ಒಳಗೊಂಡ ಸಂಕಲನ ಗ್ರಂಥ. ಈ ಸಮ್ಮೇಳನದ ಅಧ್ಯಕ್ಷರು ಶಂ. ಬಾ. ಜೋಶಿ.

**ಅಭಿಪ್ರಾಯ:**

1981ನೆಯ ಸಾಲಿನಲ್ಲಿ ಜರುಗಿದ ಮಡಿಕೇರಿ ಸಾಹಿತ್ಯ ಸಮ್ಮೇಳನ ಕುರಿತ ಸುಂದರ ಸಂಪುಟದಲ್ಲಿ ಸಮ್ಮೇಳನದಲ್ಲಿ ಪ್ರಸ್ತಾಪಿತವಾದ ಸಂಗತಿಗಳ ಮಾಹಿತಿ ಪೂರ್ಣವಾಗಿ ದೊರೆಯುತ್ತದೆ. ಈ ಎಲ್ಲ ವಿಚಾರಗಳನ್ನೊಳಡಗೊಂಡ ಗ್ರಂಥವು 500 ಪುಟದಷ್ಟು ವಿಸ್ತಾರವಾಗಿ, ವೈವಿಧ್ಯಮಯವಾಗಿ, ಆಕರ್ಷಕವಾಗಿ ಪ್ರಕಟವಾಗಿರುವುದು ಮೆಚ್ಚಬೇಕಾದ ವಿಷಯ. ಈ ಗ್ರಂಥವನ್ನು ತೆರೆದು ಓದಿದಾಗ (ಆಯಾ ಸಾಹಿತಿ) ಮುಖಾಮುಖಿಯಾಗಿ ಭೆಟ್ಟಿಯಾಗಿ ಚರ್ಚೆಗೆ ತೊಡಗಿದಂತೆ ಅನ್ನಿಸುತ್ತದೆ. * ಬಹುವಿಧ ಪರಿಣಾಮಕಾರಿಯಾಗಿರುವ ಈ ಸಂಪುಟದ ಕೊನೆಯಲ್ಲಿ ಆಯ್ದ ಕೆಲವು ಭಾವಚಿತ್ರಗಳೂ, ಭಾಗಿಗಳಾಗಿದ್ದ ಸಾಹಿತಿಗಳ ವಿಳಾಸಗಳೂ ಅಚ್ಚಾಗಿದ್ದು ತುಂಬ ಸಹಾಯಕವೆನ್ನಿಸುವಂತಿದೆ.

**--ಡಾ. ನಂ. ತಪಸ್ವೀಕುಮಾರ್**

# ಮಹಾವೀರ

## ಜೀವನ ಚಿತ್ರಣ

| | | |
|---|---|---|
| ಕ್ರೌನ್ 1/8 ಆಕರ, ಪುಟಗಳು | : | 160 |
| ಪ್ರಥಮ ಮುದ್ರಣ | : | 1974 |
| ಸಹಲೇಖಕರು | : | ಡಾ. ಕಮಲಾ ಹಂಪನಾ |
| ಪ್ರಕಾಶಕರು | : | ಹಿಮಾಂಶು ಪ್ರಕಾಶನ, ಬೆಂಗಳೂರು. |

ಜೈನಧರ್ಮ ಪ್ರವರ್ತಕರಾದ 24 ಜನ ತೀರ್ಥಂಕರರಲ್ಲಿ ಕಡೆಯವರಾದ ವರ್ಧಮಾನ ಮಹಾವೀರರ ಜೀವನ ಚಿತ್ರಣ ಈ ಪುಸ್ತಕ. ಇದರಲ್ಲಿ ಜೈನ ಪುರಾಣಗಳಲ್ಲಿ, ಉದಾಹರಣೆಗೆ ನಾಗವರ್ಮ ಮತ್ತು ಅಚಣ್ಣ ಕವಿಗಳ ಕಾವ್ಯಗಳಲ್ಲಿ ನಿರೂಪಿಸುವ ಪಂಚಕಲ್ಯಾಣಗಳ ಪೌರಾಣಿಕ ವರ್ಣನೆಗಳನ್ನು ಕೈ ಬಿಡಲಾಗಿದೆ. ಚಾರಿತ್ರಿಕವಾಗಿ ಕ್ರಿ. ಪೂ. ಆರನೆಯ ಶತಮಾನದಲ್ಲಿ ಆಗಿಹೋದ ವರ್ಧಮಾನ ಮಹಾವೀರರನ್ನು, ಅವರ ಬದುಕನ್ನು ಪವಾಡಗಳಿಂದ ಹಾಗೂ ಪುರಾಣಗಳ ಉತ್ಪ್ರೇಕ್ಷೆಗಳಿಂದ ಬಿಡಿಸಿ ಹೀಗೆ ಒಬ್ಬ ಮಹಾಸಾಧಕನಾದ ಮಹಾಪುರುಷನಂತೆ ಚಿತ್ರಿಸಿರುವುದು ಕನ್ನಡದಲ್ಲಿ ಈ ಪುಸ್ತಕದಲ್ಲಿಯೇ. ಧಾರ್ಮಿಕ ಮನೋಭಾವದ ಸಂಪ್ರದಾಯವಾದಿಗಳು ಕಟುವಾಗಿ ಟೀಕಿಸಿದರೂ ಲೇಖಕರು ತಮ್ಮ ವಸ್ತುನಿಷ್ಠವಾದ ಗ್ರಹಿಕೆಯ ನಿರೂಪಣೆಯನ್ನು ಪ್ರಬುದ್ಧವಾಗಿ ಸಮರ್ಥಿಸಿದ್ದಾರೆ. ಮಹಾವೀರರ ಏಕಾಗ್ರತೆ, ಸಾಧನೆ, ಸಿದ್ಧಿ, ಬೋಧನೆ- ಇವು ಈ ಪುಸ್ತಕದಲ್ಲಿ ನಿರೂಪಿತವಾಗಿರುವ ರೀತಿ ಓದುಗರಿಗೆ ಪ್ರಿಯವಾಗುತ್ತದೆ.

ಸಂ.

# ಮಹಾವೀರ

**ಜೀವನ ಸಾಧನೆ ಚಿತ್ರಣ**

| | | |
|---|---|---|
| ಕ್ರೌನ್ 1/16 ಆಕಾರ, ಪುಟಗಳು | : | 48 |
| ಪ್ರಥಮ ಮುದ್ರಣ | : | 1974 |
| ಪ್ರಕಾಶಕರು | : | ರಾಷ್ಟ್ರೋತ್ಥಾನ ಸಾಹಿತ್ಯ ಪ್ರಕಾಶನ, ಬೆಂಗಳೂರು. |

ವರ್ತಮಾನ ಕಾಲದ ಕಡೆಯ ಹಾಗೂ ಇಪ್ಪತ್ತನಾಲ್ಕನೆಯ ತೀರ್ಥಂಕರರಾದ ಭಗವಾನ್ ವರ್ಧಮಾನ ಮಹಾವೀರರನ್ನು ಮಕ್ಕಳಿಗೆ ಪರಿಚಯಿಸುವುದಕ್ಕೆಂದು ರಚಿಸಲಾದ ಕಿರುಹೊತ್ತಗೆ. ಬಾಲಕರಿಗಾಗಿ ಬರೆಯಲ್ಪಟ್ಟಿದ್ದರೂ ಪ್ರಬುದ್ಧರೂ ಸಹ ಮೆಚ್ಚಿಕೊಳ್ಳುವಂತೆ ಹಂಪನಾ ಅವರು ತಮ್ಮ ಪ್ರತಿಭೆಯನ್ನು ಇಲ್ಲಿ ಮೆರೆದಿದ್ದಾರೆ. ಈ ಪುಟ್ಟ ಪುಸ್ತಕ ಕನ್ನಡದಿಂದ ಇಂಗ್ಲಿಷ್, ಹಿಂದಿ, ಮರಾಠಿ ಭಾಷೆಗಳಿಗೂ ಅನುವಾದಗೊಂಡಿದೆ. ಐವತ್ತು ಸಾವಿರಕ್ಕೂ ಹೆಚ್ಚು ಪ್ರತಿಗಳು ಮಾರಾಟವಾಗಿವೆ! ಇದು ಈ ಪುಸ್ತಕದ ಜನಪ್ರಿಯತೆಯನ್ನು ತಿಳಿಸುತ್ತದೆ. ಮಾರಾಟದ ವಿವರಗಳು:

**ರಾಷ್ಟ್ರೋತ್ಥಾನ ದಾಖಲೆ ಪ್ರಕಾರ:**

| | | |
|---|---|---|
| ಇಂಗ್ಲಿಷ್ | 1982 | 10,000 ಪ್ರತಿ |
| ಹಿಂದಿ | 1975 | 10,000 ಪ್ರತಿ |
| | 1983 | 10,000 ಪ್ರತಿ |
| | 1996-97 | 10,000 ಪ್ರತಿ |
| ಮರಾಠಿ | 1981 | 3000 |
| | 1982 | 3000 |
| | 1984 | 5000 |
| | 1996-97 | 3000 |

ಸಂ.

# ಮಹಾಕವಿ ರನ್ನ

**ಶಿಶು ಸಾಹಿತ್ಯ**

| | | |
|---|---|---|
| ಕ್ರೌನ್ 1/8 ಆಕಾರ, ಪುಟಗಳು | : | 52 |
| ಪ್ರಥಮ ಮುದ್ರಣ | : | 1971 |
| ದ್ವಿತೀಯ ಮುದ್ರಣ | : | 1971 |
| ತೃತೀಯ | : | 1972 |
| ಪ್ರಕಾಶಕರು | : | ಐಬಿಎಚ್ ಪ್ರಕಾಶನ, ಬೆಂಗಳೂರು-560009 |

ಪಂಪ, ಪೊನ್ನ, ರನ್ನ- ಈ ಮೂವರು ಕವಿಗಳನ್ನು ಕನ್ನಡ ಸಾಹಿತ್ಯ ವಿಮರ್ಶಕರು, 'ರತ್ನತ್ರಯರು' ಮತ್ತು 'ಜಿನಸಮಯದೀಪಕರು' ಎಂದು ಕರೆದಿದ್ದಾರೆ. ಪಂಪ- ಪೊನ್ನರ ಪಟ್ಟಶಿಷ್ಯನಾಗಿ ರನ್ನ ಕವಿಯು ರನ್ನಕಂದ ನಿಘಂಟು, ಅಜಿತ ತೀರ್ಥಂಕರ ಪುರಾಣ, ಸಾಹಸ ಭೀಮ ವಿಜಯ (ಗದಾಯುದ್ಧ) ಕಾವ್ಯಗಳನ್ನು ಬರೆದಿದ್ದಾನೆ. ಚಾವುಂಡರಾಯ, ಅತ್ತಿಮಬ್ಬೆ ಮತ್ತು ಕಲ್ಯಾಣ ಚಾಳುಕ್ಯರ ಆಶ್ರಯದಲ್ಲಿ ಕಾವ್ಯ ರಚಿಸಿದ್ದಾನೆ. ಪಂಪನಂತೆಯೇ ಕಲಿಯೂ, ಕವಿಯೂ ಆಗಿದ್ದನು. ಶಾಸನಗಳನ್ನೂ ಬರೆದಿದ್ದಾನೆ. ಕರ್ಣ- ದುರ್ಯೋಧನರ ಗೆಳೆತನವನ್ನು ಶಾಶ್ವತವಾಗಿಸಿದ್ದಾನೆ. ಈತನ ಚಕ್ರೇಶ್ವರ ಚರಿತೆ, ಪರಶುರಾಮ ಚರಿತೆ ಎಂಬೆರಡು ಕಾವ್ಯಗಳ ಸಿಕ್ಕಿಲ್ಲ. ತನ್ನ ಹೆಂಡತಿಯರ, ಮಕ್ಕಳ ವಿಚಾರವನ್ನೂ ರನ್ನ ಛಿವರಿಸಿದ್ದಾನೆ. ಈ ವಿಷಯಗಳು ಈ ಪುಟ್ಟ ಪುಸ್ತಕವನ್ನು ಓದಿದವರ ಮನಸ್ಸಿಗೆ ನಾಟುತ್ತವೆ. ಸುಲಲಿತವಾದ ಓಟ, ಮನಸೆಳೆಯುವ ನಿರೂಪಣೆ- ಇವೇ ಈ ಸಣ್ಣ ಪುಸ್ತಕದ ಹೆಚ್ಚಳಗಳು.

**ಅಭಿಪ್ರಾಯ:**

ರನ್ನ ಕವಿಯನ್ನು ಕುರಿತು ಬರೆದ ಈ ಕಿರು ಹೊತ್ತಗೆ ಶಿಶು ಸಾಹಿತ್ಯ ಚರಿತ್ರೆಯಲ್ಲಿ ಮೈಲಿಗಲ್ಲು.

**--ಸಿ. ಹನುಮಂತರಾಯಪ್ಪ**

# ಮೂರನೆಯ ಮಂಗರಸ

**ಪ್ರಚಾರೋಪನ್ಯಾಸ ಕೃತಿ**

| | | |
|---|---|---|
| ಕ್ರೌನ್ 1/16 ಆಕಾರ, ಪುಟಗಳು | : | 89+vii |
| ಪ್ರಥಮ ಮುದ್ರಣ | : | 1968 |
| ಪ್ರಕಾಶಕರು | : | ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು |

ಮೈಸೂರು ವಿಶ್ವವಿದ್ಯಾನಿಲಯದ ವತಿಯಿಂದ ಮೂರನೆಯ ಮಂಗರಸ ಕವಿ- ಕೃತಿ ಕುರಿತು ಕಾರ್ಕಳದ ಭಂಡಾರಕರ ಕಾಲೇಜಿನಲ್ಲಿ ಹಂಪ. ನಾಗರಾಜಯ್ಯನವರು 1966ರಲ್ಲಿ ಮಾಡಿದ ಉಪನ್ಯಾಸದ ವಿಸ್ತೃತ ರೂಪವೇ ಈ ಕಿರುಹೊತ್ತಗೆ. ಇದರಲ್ಲಿ ಮಂಗರಸ ಕವಿಯ ಇತಿವೃತ್ತ, ಶ್ರೀಪಾಲ ಚರಿತೆ, ಪ್ರಭಂಜನ ಚರಿತೆ, ನೇಮಿಜಿನೇಶಸಂಗತಿ (ಹರಿವಂಶ), ಸಮ್ಯಕ್ತ್ವ ಕೌಮುದಿ, ಸೂಪಶಾಸ್ತ್ರ, ಜಯನೃಪಕಾವ್ಯ- ಎಂಬ ಕೃತಿಗಳ ತೌಲನಿಕ ವಿಮರ್ಶೆ- ಇಷ್ಟನ್ನೂ ಒದಗಿಸಿದ್ದಾರೆ.

**ಅಭಿಪ್ರಾಯ:**

ಈ ಕೃತಿಯಲ್ಲಿ ಕವಿಯ ಹಿನ್ನೆಲೆ, ಕವಿಕಾಲ, ಕವಿಯ ಕೃತಿಗಳು- ವಿಮರ್ಶೆ ಹೀಗೆ ಅನುಕ್ರಮವಾಗಿ ಮೂರು ಮಜಲುಗಳಲ್ಲಿ ಮಂಗರಸನನ್ನು ಕುರಿತಾದ ಹಂಪನಾ ಅವರ ವಿಚಾರಗಳು ಹಬ್ಬಿ ಹರಡಿಕೊಂಡಿವೆ*.

ಮೂರನೆಯ ಮಂಗರಸನನ್ನು ಕುರಿತ ಈ ಕೃತಿ ಪ್ರಾಚೀನ ಕವಿಯೊಬ್ಬನನ್ನು ಪರಿಚಯಿಸುವ ದೃಷ್ಟಿಯಿಂದಲೂ, ಕನ್ನಡ ಸಾಹಿತ್ಯ ಸಂಶೋಧನೆಯ ದೃಷ್ಟಿಯಿಂದಲೂ ಬಹಳ ಉಪಯುಕ್ತ ಮಾಹಿತಿಯನ್ನು ಒದಗಿಸುತ್ತದೆ. ಕವಿಯ ಕಾವ್ಯ ಪ್ರತಿಭೆ, ಛಂದಸ್ಸಿನ ನೈಪುಣ್ಯತೆ ಹಾಗೂ ಕಥೆಯನ್ನು ಹೇಳುವ ಕಲೆಗಾರಿಕೆಗಳನ್ನು ಸಮರ್ಥವಾಗಿ ಗುರುತಿಸುವುದರ ಮೂಲಕ, ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು ಎನ್ನುವ ಮಾತಿಗೆ (ಇದು ಹಂಪನಾ ಅವರಿಗೂ ಅನ್ವಯಿಸುತ್ತದೆ) ಉದಾಹರಣೆಯಾಗಿ ನಿಲ್ಲುತ್ತದೆ.

--ಸಿ. ನಾಗರಾಜು

# ಯಕ್ಷ ಯಕ್ಷಿಯರು

**ಸಂಶೋಧನ ಗ್ರಂಥ**

| | | |
|---|---|---|
| ಡೆಮ್ಮಿ 1/8 ಆಕಾರ, ಪುಟಗಳು | - | 208+xii, 144 ಚಿತ್ರಗಳಿವೆ |
| ಪ್ರಥಮ ಮುದ್ರಣ | : | 1976 |
| ಪ್ರಕಾಶಕರು | : | ಚಂದ್ರಸಾಗರವರ್ಣಿ ಗ್ರಂಥಮಾಲೆ, ಬೆಂಗಳೂರು. |

ಜೈನ ಪರಂಪರೆಯಲ್ಲಿ ಪ್ರತಿಯೊಬ್ಬ ತೀರ್ಥಂಕರರಿಗೂ ಒಬ್ಬೊಬ್ಬ ಯಕ್ಷಿ ಮತ್ತು ಯಕ್ಷರನ್ನು ಪರಿವಾರ ದೇವತೆಗಳನ್ನಾಗಿ ಕಲ್ಪಿಸಲಾಗಿದೆ. ಭಾರತೀಯ ಧರ್ಮ, ಶಿಲ್ಪ ಮತ್ತು ಸಾಹಿತ್ಯಗಳಲ್ಲಿ ಕುಡಿಯಿಟ್ಟ ಯಕ್ಷಾರಾಧನೆ ಪರಿಕಲ್ಪನೆ ತನ್ನ ಪೂರ್ಣ ರೂಪದಲ್ಲಿ ಪಲ್ಲವಿಸಿದ್ದು ಜೈನ ದೇವ- ದೇವಿಯರ ರೂಪದಲ್ಲಿ. ಸಂಸ್ಕೃತ- ಪ್ರಾಕೃತ ಸಾಹಿತ್ಯ ಹಾಗೂ ಭಾರತೀಯ ದೇವಾಲಯಗಳ ಶಿಲ್ಪದಲ್ಲಿ, ಜೈನ ಶಿಲ್ಪದಲ್ಲಿ, ಜೈನ ಸಾಹಿತ್ಯದಲ್ಲಿ ಯಕ್ಷರನ್ನು ಕುರಿತ ಉಲ್ಲೇಖಗಳನ್ನು ವಿಮರ್ಶಿಸಿ, ಅದರ ಉಗಮ ವಿಕಾಸಗಳನ್ನು ಐತಿಹಾಸಿಕವಾಗಿ ಗುರುತಿಸಿರುವ ಈ ಕೆಲಸ ಕನ್ನಡದಲ್ಲಿ ಪ್ರಥಮ ಬಾರಿಗೆ ಈ ಗ್ರಂಥದಲ್ಲಿ ವಿಸ್ತಾರವಾಗಿ ನಡೆದಿದೆ. ಶ್ವೇತಾಂಬರ- ದಿಗಂಬರ ಪರಂಪರೆಯಲ್ಲಿ ಜಿನಶಾಸನ ದೇವತೆಗಳಾದ ಯಕ್ಷ- ಯಕ್ಷಿಯರ ರೂಪ, ಬಣ್ಣ, ವಾಹನ, ಆಯುಧ ವಿಶೇಷ - ಇವೆಲ್ಲವನ್ನೂ ಈ ಸಂಶೋಧನ ಗ್ರಂಥ ನೂರಾರು ರೇಖಾ ಚಿತ್ರಗಳೊಂದಿಗೆ ಪರಿಶೀಲಿಸಿದೆ. ಧರ್ಮಸ್ಥಳದ ಧರ್ಮಾಧಿಕಾರಿ ಪದ್ಮಭೂಷಣ ಡಾ. ಡಿ. ವೀರೇಂದ್ರ ಹೆಗ್ಗಡೆ ಅವರಿಗೆ ಈ ಗ್ರಂಥವನ್ನು ಅರ್ಪಿಸಲಾಗಿದೆ.

**ಅಭಿಪ್ರಾಯಗಳು:**

1. ಇಷ್ಟು ನಿಜ: ಯಕ್ಷ, ಯಕ್ಷಿಣಿ, ಜೈನಶಿಲ್ಪ, ದ್ರಾವಿಡ, ಯಕ್ಷಗಾನ ಮುಂತಾದವುಗಳ ಬಗ್ಗೆ ಅಧ್ಯಯನ ಮಾಡುವವರಿಗೆ ಇದೊಂದು ಆಧಾರ ಗ್ರಂಥ. ಅಧಿಕಾರಿಕವಾದ ವಿಪುಲ ಸಾಮಗ್ರಿಯ, ಅನೇಕ ಚಿತ್ರಗಳ ಈ ಪುಸ್ತಕ ಒಂದು ಅನನ್ಯ ಕೃತಿ: ಕನ್ನಡದಲ್ಲಂತೂ ಇದೇ ಪ್ರಥಮ. ಇದಕ್ಕಾಗಿ ಹಂಪ. ನಾಗರಾಜಯ್ಯನವರನ್ನು ಅಭಿನಂದಿಸುತ್ತೇನೆ.

**-- ಡಾ. ಚಂದ್ರಶೇಖರ ಕಂಬಾರ, 'ಮುನ್ನುಡಿ'ಯಿಂದ**

2. ಇದು ಒಂದು ಸಂಶೋಧನಾತ್ಮಕ ಕೃತಿ*. ಯಾರೂ ಅಷ್ಟಾಗಿ ಗಮನಿಸದಿರುವ ವಿಷಯವನ್ನು ಹಿಡಿದುಕೊಂಡು, ಅದನ್ನು ಕುರಿತಂತೆ ಆಕರಗಳನ್ನು ಅಭ್ಯಸಿಸಿದ ಶ್ರೀಯುತರು ತಮಗೆ ಸಾಧ್ಯವಾದಷ್ಟೂ ಕೆಲಸ ಮಾಡಿದ್ದಾರೆ * ಜೈನಧರ್ಮದಲ್ಲಿ ಯಕ್ಷರ ಪ್ರವೇಶವನ್ನು ಕುರಿತು ಮಾಡಿರುವ ಸಂಶೋಧನೆ ಉಲ್ಲೇಖನೀಯವಾದುದು. ಇದು ಜೈನಧರ್ಮಿಯರಿಗೆ ಹಾಗೂ ಜೈನರಲ್ಲದಂತಹ ಸಾಹಿತ್ಯಾಸಕ್ತರಿಗೆ ಮತ್ತು ಸಂಶೋಧಕರಿಗೆ ಮಹತ್ವದ್ದಾಗಿದೆ.* ಬಹುಶಃ ದಕ್ಷಿಣ ಭಾರತದ ಬೇರಾವ ಭಾಷೆಯಲ್ಲೂ ಇಂತಹ ಸಮಗ್ರ ಚಿತ್ರ ಪುಸ್ತಕವಿದ್ದಂತೆ ಕಾಣದು. ಕನ್ನಡಕ್ಕೆ ಇದನ್ನು ಒದಗಿಸಿ ನಮ್ಮ ಸಾಹಿತ್ಯ ಭಂಡಾರಕ್ಕೂ, ಜೈನ ಧಾರ್ಮಿಕ ಸಾಹಿತ್ಯಕ್ಕೂ ಅನನ್ಯ ಕಾಣಿಕೆ ನೀಡಿರುವ ಲೇಖಕರು ಪ್ರಶಂಸೆ ಗೌರವಗಳಿಗೆ ಪಾತ್ರರು.

-- **ಎಚ್. ಶ್ರೀಶೈಲ ಆರಾಧ್ಯ**

3. ಅಧ್ಯಯನಶೀಲ ಮನಸ್ಸು ಕುತೂಹಲಕ್ಕಾಗಿ ವಿಷಯವೊಂದರ ಜಾಡು ಹಿಡಿದು ಏನೇನು ಮಾಹಿತಿ ಸಂಗ್ರಹಿಸಬಹುದು, ಚರ್ಚಿಸಬಹುದು, ತೀರ್ಮಾನ ಕೈಗೊಳ್ಳಬಲ್ಲದೆಂಬುದಕ್ಕೆ ಹಂಪನಾ ಅವರ 'ಯಕ್ಷಯಕ್ಷಿಯರು' ಕೃತಿ ಸಾಕ್ಷಿಯಾಗಿದೆ* ಯಕ್ಷಯಕ್ಷಿಯರನ್ನು ಕುರಿತ ನಂಬಿಕೆ ಕಲ್ಪನೆಗಳು ಪುರಾತನ ಮಾನವ ಸಂಸ್ಕೃತಿಯ ಅನೇಕ ಘಟ್ಟಗಳಲ್ಲಿ ವಿಕಾಸಗೊಂಡಿತೆಂಬುದನ್ನು ಪುಸ್ತಕ ವಿವರಿಸುತ್ತದೆ.

-- **ಡಾ. ಶ್ರೀಕಂಠ ಕೂಡಿಗೆ**

# ಯಾಪನೀಯ ಸಂಘ

**ಸಂಶೋಧನೆ**

ಡೆಮ್ಮಿ 1/8 ಆಕಾರ, ಪುಟಗಳು : viii+156

ಪ್ರಥಮ ಮುದ್ರಣ : ಅಕ್ಟೋಬರ್ 1999

ಪ್ರಕಾಶಕರು : ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ

ಜೈನ ಧರ್ಮದ ಶಾಖೆಗಳಲ್ಲಿ ದಿಗಂಬರ-ಶ್ವೇತಾಂಬರವನ್ನು ಬಿಟ್ಟರೆ ಬಹು ಪ್ರಾಮುಖ್ಯ ಪಡೆದ ಮತ್ತೊಂದು ಶಾಖೆ ಯಾಪನೀಯ ಸಂಘ. ಎರಡನೆಯ ಶತಮಾನದಿಂದ ಹನ್ನೆರಡನೆಯ ಶತಮಾನದವರೆಗೆ ಸಾವಿರ ವರ್ಷ ಬಾಳಿದ ಯಾಪನೀಯ ಸಂಘದ ಇತಿವೃತ್ತವನ್ನು ಶಾಸನಗಳ ಆಧಾರದಿಂದ ಈ ಗ್ರಂಥ ಚರ್ಚಿಸಿದೆ.

**ಅಭಿಪ್ರಾಯ:**

1. ಉಪಾಧ್ಯೆ ಲೇಖನ ಈ ದಿಕ್ಕಿನ ಅಧಿಕೃತ ಲೇಖನವಾಗಿತ್ತು. ಇನ್ನು ಮುಂದೆ ನಿಮ್ಮ ಪುಸ್ತಕವೇ ಅಧಿಕೃತ ಮೂಲ ಆಕರ.

--ಡಾ. ಎನ್. ಎಸ್. ತಾರಾನಾಥ
ಮೈಸೂರು

2. ಕರ್ನಾಟಕ ಹಲವು ಧರ್ಮಗಳ ಮಾತೃಭೂಮಿಯಾಗಿರುವಂತೆ ಪ್ರಯೋಗ ಭೂಮಿಯೂ ಆಗಿದೆ. ನಮ್ಮ ಸಂಸ್ಕೃತಿಯ ಬಹುದೊಡ್ಡ ಭಾಗವಾಗಿರುವ ಜೈನ ಧರ್ಮದ ಇಂಥ ಒಂದು ಪ್ರಯೋಗ 'ಯಾಪನೀಯ ಸಂಘ'. ಈ ಉಪೇಕ್ಷಿತ ಶಾಖೆಯನ್ನು ಕುರಿತ ಆಕರ ಸಾಮಗ್ರಿಯನ್ನು ಸರ್ವಮೂಲಗಳಿಂದ ಆಯ್ದು, ಈ ಕೃತಿಯನ್ನು ತುಂಬ ತಾರ್ಕಿಕವಾಗಿ ರೂಪಿಸಿರುವ ನಮ್ಮ ತಲೆಮಾರಿನ ಹಿರಿಯ ವಿದ್ವಾಂಸರಾದ ಡಾ. ಹಂಪ. ನಾಗರಾಜಯ್ಯ ಅವರಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

--ಪ್ರೊ. ಎಂ. ಎಂ. ಕಲಬುರ್ಗಿ

## ರತ್ನಾಕರನ ಹಾಡುಗಳು

**ಗ್ರಂಥಸಂಪಾದನೆ : ಕೀರ್ತನೆಗಳು ಮತ್ತು ಹಾಡುಗಳು**

| | | |
|---|---|---|
| ಕ್ರೌನ್ 1/8 ಆಕಾರ, ಪುಟಗಳು | : | 200+i+xxii |
| ಪ್ರಥಮ ಮುದ್ರಣ | : | 1979 |
| ಪ್ರಕಾಶಕರು | : | ನಂ. 1979, 5ನೇ ಬ್ಲಾಕು,<br>ರಾಜಾಜಿನಗರ,<br>ಬೆಂಗಳೂರು -560010. |

ಮಹಾಕವಿ ರತ್ನಾಕರವರ್ಣಿಯ ಹೆಸರು ಜನಪ್ರಿಯವಾಗಿರುವುದು ಆತನ ಮೇರು ಕೃತಿ ಭರತೇಶವೈಭವದಿಂದ ಮತ್ತು ಮೂರು ಶತಕಗಳಿಂದ. ಇವುಗಳಲ್ಲದೆ ರತ್ನಾಕರವರ್ಣಿಯು ನೂರಾರು ಹಾಡುಗಳನ್ನೂ ಬರೆದಿದ್ದಾನೆ. ಅವುಗಳಲ್ಲಿ ಕೆಲವು ಮಾತ್ರ ಪ್ರಕಟವಾಗಿದ್ದುವು. ರತ್ನಾಕರನ ಸಮಗ್ರ ಹಾಡುಗಳನ್ನು ಇದೇ ಮೊದಲ ಬಾರಿಗೆ, ಏಕೈಕ ಸಂರಕ್ಷಿತ ಓಲೆಗರಿ ಹಸ್ತಪ್ರತಿಯ ಆಧಾರದಿಂದ ಒಟ್ಟು 238 ಹಾಡುಗಳನ್ನು ಹಂಪನಾ ಸಂಪಾದಿಸಿದ್ದಾರೆ. ಪ್ರತಿ ಹಾಡಿಗೂ ಸೂಕ್ತವಾದ ಒಂದೊಂದು ಶೀರ್ಷಿಕೆಯೊಂದಿಗೆ ಈ ಜನಪ್ರಿಯ ಆವೃತ್ತಿಯನ್ನು ಸಿದ್ಧಪಡಿಸಿದ್ದಾರೆ.

ಈ ಪುಸ್ತಕವನ್ನು ಸಮಾಜ ಸುಧಾರಕರಾಗಿದ್ದು ಅಕಾಲ ಮರಣ ಪಡೆದ ಸಾಹುಕಾರ ಎಂ. ಎಲ್. ವರ್ಧಮಾನಯ್ಯನವರ ಚಿರಸ್ಮರಣೆಗೆ ಅರ್ಪಣೆ ಮಾಡಿದ್ದಾರೆ.

**ಅಭಿಪ್ರಾಯಗಳು:**

1. ಇಲ್ಲಿನ ಎಲ್ಲ ಹಾಡುಗಳೂ ಪ್ರತ್ಯೇಕವಾದ ಶಿರೋನಾಮೆಗಳನ್ನು ಪಡೆದಿದ್ದು, ಆ ಶಿರೋನಾಮೆಗಳೇ ಪ್ರತಿ ಪದ್ಯದ ಅಂತರಾರ್ಥವನ್ನು ನಿವೇದಿಸುವಷ್ಟು ಅನ್ವರ್ಥವಾಗಿವೆ*. ಇವುಗಳನ್ನು ಜಿ. ಬ್ರಹ್ಮಪ್ಪನವರು ಹೆಸರಿಸಿದ ಹಾಗೆ 'ಆಧ್ಯಾತ್ಮ ಗೀತೆಗಳು' ಎಂದು ಕರೆಯದೆ ಹಂಪನಾ ಅವರು 'ರತ್ನಾಕರನ ಹಾಡುಗಳು' ಎಂದು ಕರೆದಿರುವುದೇ ಹೆಚ್ಚು ಅರ್ಥ ಪೂರ್ಣವೆನಿಸುತ್ತದೆ**. ವಿಷಣ್ಣ ಮನಃಸ್ಥಿತಿಯಲ್ಲಿ ವೀರಶೈವ ಧರ್ಮಕ್ಕೆ ಮತಾಂತರ ಹೊಂದಿ ಮನಸ್ಸು ತಿಳಿಯಾದ ಮೇಲೆ ಮತ್ತೆ ಜೈನಧರ್ಮಕ್ಕೆ ಹಿಂದಿರುಗಿದ್ದನ್ನು ಪುಷ್ಟೀಕರಿಸುವ ಕೀರ್ತನೆಗಳೆರಡು ಈ ಕೃತಿಯಲ್ಲಿರುವುದರಿಂದ ಜಿಜ್ಞಾಸೆಗಳಿಗೆ ಇದೊಂದು ಮಹತ್ವದ ಕೃತಿಯಾಗಬಲ್ಲುದು. *ಇನ್ನೂರಾ ನಲ್ವತ್ತರಷ್ಟು ಬೃಹತ್ ಪ್ರಮಾಣದ ಹಾಡುಗಳನ್ನು ಸಂಪಾದಿಸಿ ಪ್ರಕಟಿಸಿ ವಾಚಕರ ಕೈಗಿತ್ತ ಹಂಪ. ನಾಗರಾಜಯ್ಯನವರು ಅಭಿನಂದನೀಯರೆನಿಸಿದ್ದಾರೆ.

**--ಡಾ. ಬಾಳಣ್ಣ ಶೀಗೀಹಳ್ಳಿ**

2. ರತ್ನಾಕರನ ಹಾಡುಗಳನ್ನು ಪ್ರಥಮ ಬಾರಿಗೆ ಸಮಗ್ರವಾಗಿ ಪ್ರಕಟಿಸಿದ್ದು ಕನ್ನಡದ ಆರ್ವಾಚೀನ ಕಾವ್ಯ ಪ್ರಪಂಚಕ್ಕೆ ಹಂಪನಾ ಅವರಿಂದ ಸಂದ ಬಹುಮುಖ್ಯ ಕೊಡುಗೆ ಎನಿಸಿದೆ.

**--ಡಾ. ಎಸ್. ಎಸ್. ಕೋತಿನ**

3. ರತ್ನಾಕರವರ್ಣಿ ಒಳ್ಳೆಯ ಹಾಡುಗಳ ರಚನಕಾರ ಕೂಡಾ ಎಂಬುದನ್ನು ನಮ್ಮ ಅನೇಕ ವಿಮರ್ಶಕರು ಗಮನಿಸಿಯೇ ಇಲ್ಲ*. ಆದರೆ ಇವುಗಳತ್ತ ಜನರ ಗಮನವನ್ನು ಸೆಳೆಯುವ ಪ್ರಯತ್ನವನ್ನು ದೊಡ್ಡ ಪ್ರಮಾಣದಲ್ಲಿ ಮಾಡಿದವರು ಡಾ. ಹಂಪ. ನಾಗರಾಜಯ್ಯನವರು ಮಾತ್ರ*. ಇದು ಈವರೆಗೆ ಪ್ರಕಟವಾಗಿರುವ ರತ್ನಾಕರನ ಹಾಡುಗಳ ಸಂಗ್ರಹದ ಪೈಕಿ ಅತಿದೊಡ್ಡದು. ಪ್ರಸ್ತಾವನೆಯಲ್ಲಿ ರತ್ನಾಕರನ ಒಟ್ಟು ಕಾವ್ಯದ ಬಗ್ಗೆ ಕೆಲವು ಗಮನಾರ್ಹವಾದ ಮಾತುಗಳನ್ನು ಹೇಳಿದ್ದಾರೆ.

**--ಡಾ. ಎಸ್. ಪಿ. ಪದ್ಮಪ್ರಸಾದ್**

# ರನ್ನ ಸಂಪುಟ
## ಅಜಿತತೀರ್ಥಂಕರ ಪುರಾಣತಿಲಕಂ
## ಸಾಹಸಭೀಮ ವಿಜಯಂ

**ಸಂಪಾದಕರು**

| | | |
|---|---|---|
| ಡೆಮ್ಮಿ 1/8 ಆಕಾರ, ಪುಟಗಳು | : | |
| ಪ್ರಥಮ ಮುದ್ರಣ | : | 2006 |
| ಪ್ರಕಾಶಕರು | : | ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ<br>ಹಂಪಿ 583 276 |

**ಅಭಿಪ್ರಾಯ:**

ರನ್ನನ ಈ ಎರಡೂ ಕಾವ್ಯಗಳನ್ನು ತಮ್ಮ ಪಾಂಡಿತ್ಯ ಪರಿಶ್ರಮ ಮತ್ತು ಪ್ರೀತಿಯಿಂದ ಸಮರ್ಪಕವಾಗಿ ಸಂಪಾದಿಸಿ ಕೊಟ್ಟವರು ಕನ್ನಡದ ಹಿರಿಯ ವಿದ್ವಾಂಸರಾದ ಪ್ರೊ. ಹಂಪ, ನಾಗರಾಜಯ್ಯನವರು. ಪ್ರಾಚೀನ ಕನ್ನಡ ಸಾಹಿತ್ಯ, ಜೈನ ಸಂಸ್ಕೃತಿ ಮತ್ತು ತೌಲನಿಕ ಅಧ್ಯಯನ ಕ್ಷೇತ್ರಗಳಲ್ಲಿ ವಿಶೇಷ ಪಾಂಡಿತ್ಯವುಳ್ಳ ಪ್ರೊ. ಹಂಪನಾ ಅವರು ಬಾಹುಬಲಿಃ ವಿಶ್ವರೂಪ, ಯಕ್ಷಯಕ್ಷಿ, ಚಂದ್ರಕೊಡೆ ಕೃತಿಗಳನ್ನು ಪ್ರಕಟಿಸುವುದರ ಮೂಲಕ ಕನ್ನಡ ಸಾಹಿತ್ಯಕ್ಕೆ ವಿಶೇಷ ಸೇವೆಯನ್ನು ಸಲ್ಲಿಸಿದ್ದಾರೆ. ಜೈನ ಸಾಹಿತ್ಯದ ಅಧ್ಯಯನಕ್ಕೆ ಸಂಬಂಧಿಸಿದಂತೆ ಅನೇಕ ಶೋಧಗಳನ್ನು ನಡೆಸಿ ಹೊಸ ಸತ್ಯಗಳನ್ನು ಕಂಡು ಕೊಂಡಿದ್ದಾರೆ.....

ಕುಲಪತಿ — ಪ್ರೊ. ಬಿ. ಎ. ವಿವೇಕ ರೈ
ಕನ್ನಡ ವಿಶ್ವವಿದ್ಯಾಲಯ — ಮುನ್ನುಡಿಯಿಂದ

# ರಾಮನ್ ಸಿ.ವಿ.

**ಪ್ರಚಾರೋಪನ್ಯಾಸ**

| | | |
|---|---|---|
| ಕ್ರೌನ್ 1/16 ಆಕಾರ, ಪುಟಗಳು | : | 48 |
| ಪ್ರಥಮ ಮುದ್ರಣ | : | 1968 |
| ಪ್ರಕಾಶಕರು | : | ಮೈಸೂರು ವಿಶ್ವವಿದ್ಯಾಲಯ, ಮೈಸೂರು - 570 006 |

ಇದುವರೆಗೆ ಭಾರತದಲ್ಲಿ ನೊಬೆಲ್ ಪಾರಿತೋಷಕ ಪಾತ್ರರು ಒಂದು ಕೈ ಬೆರಳೆಣಿಕೆಗೆ ಸಿಗುವಷ್ಟೇ ಇರುವುದು. ಅವರಲ್ಲಿ ಸಿ. ವಿ. ರಾಮನ್ ಒಬ್ಬರು. ಅವರು ಬಹುಕಾಲ ಮಾಡಿದ ಸಾಧನೆ ವಿಜ್ಞಾನ ಕ್ಷೇತ್ರದಲ್ಲಿ. ಹೊಸ ತಿಳಿವಳಿಕೆಗೆ ನೆರವಾಗುವ ನೂತನ ಆವಿಷ್ಕಾರದಿಂದ ಕೀರ್ತಿವಂತರಾದ ಸಿ. ವಿ. ರಾಮನ್ ಅವರು ವೈಜ್ಞಾನಿಕ ಸಾಧನೆಗಳನ್ನು ಮಾಡಿದ್ದು ಬೆಂಗಳೂರಲ್ಲಿ. ಇಂದಿಗೂ ಅವರ ಹೆಸರು ಹೊತ್ತ ವಿಜ್ಞಾನ ಸಂಸ್ಥೆ ಕರ್ನಾಟಕದ ರಾಜಧಾನಿಯಲ್ಲಿದ್ದು ಲೋಕ ಪ್ರಸಿದ್ಧಿ ಪಡೆದಿದೆ.

**ಅಭಿಪ್ರಾಯ :**

ಹಂಪನಾ ಅವರು ರಾಮನ್‌ರ ಜೀವನ ಸಾಧನೆಗಳನ್ನು ವಿವರಿಸುವ ಸಂದರ್ಭದಲ್ಲಿ ಯಾವುದೇ ರೀತಿಯ ಉತ್ಪ್ರೇಕ್ಷೆ, ಭಾವಾವೇಶಕ್ಕೆ ಒಳಗಾಗದೆ ಸಾಮಾನ್ಯ ಮನುಷ್ಯನೊಬ್ಬ ಹೇಗೆ ಅಸಾಮಾನ್ಯ ಸ್ಥಿತಿಯನ್ನು ತಲುಪಿದನೆಂಬ ವಿವರಗಳನ್ನು ಸರಳವಾಗಿ, ಆಕರ್ಷಕವಾಗಿ ನಿರೂಪಿಸಿದ್ದಾರೆ. ಕನ್ನಡದಲ್ಲಿ ವಿಜ್ಞಾನಿಗಳನ್ನು ಕುರಿತ ಜೀವನ ಚರಿತ್ರೆಗಳು ಕಡಿಮೆ ಇರುವ ಸಂದರ್ಭದಲ್ಲಿ ಇಂತಹದೊಂದು ಪುಟ್ಟ ಕೃತಿಯನ್ನು ರಚಿಸಿ ಕನ್ನಡಿಗರ ಕೈಗೆ ಕೊಟ್ಟಿರುವ ಹಂಪನಾ ಅವರ ಕಾರ್ಯ ಸ್ತುತ್ಯರ್ಹವಾದದ್ದು.

--ಎಚ್. ದಂಡಪ್ಪ

# ವಡ್ಡಾರಾಧನೆ ಮತ್ತು ಜಾನಪದ

## ಜಾನಪದ

| | | |
|---|---|---|
| ಕ್ರೌನ್ 1/8 ಆಕಾರ, ಪುಟಗಳು | : | xiv+55 |
| ಪ್ರಥಮ ಮುದ್ರಣ | : | 1997 |
| ಪ್ರಕಾಶಕರು | : | ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು. |

ವಡ್ಡಾರಾಧನೆ ಕನ್ನಡ ಸಾಹಿತ್ಯದಲ್ಲಿ ಉಜ್ವಲಕಾಂತಿಯ ದೀಪಸ್ತಂಭ. ಕೃತಿಕಾರನ ಪ್ರಾಸಾದಿತ ಪ್ರವಾಹದಲ್ಲಿ ಕಥೆಗಳು ಮಿಂದೆದ್ದು ಪ್ರಾತಃಕಾಲದ ಪ್ರಪುಲ್ಲತೆಯನ್ನು ತೋರುತ್ತವೆ. ಕನ್ನಡವನ್ನು ಅರ್ಥಪೂರ್ಣವಾದ ಸಂಕ್ಷಿಪ್ತತೆಯ ಕುಂದಣದಲ್ಲಿ ಕೀಲಿಸುತ್ತ ಸಾಗುವ ಗದ್ಯರಂಗೋಲಿಯು ಬಿಡಿಸುವ ಚಿತ್ತಾರಗಳು ಹೃದ್ಯವಾಗಲು ಅದರ ಒಡಲಾಳದಲ್ಲಿ ಕುಳಿತ ಜಾನಪದ ಸತ್ವಕಾರಣ.

ಜನಪದರ ಬದುಕಿನಲ್ಲಿ ಹಾಸುಹೊಕ್ಕಾಗಿರುವ ಹಬ್ಬ ಹರಿದಿನಗಳು ಜಾತ್ರೆಗಳು ದೇವರ ಉತ್ಸವಗಳು, ಬಾದುಬ್ಬೆಯ ಪರ್ವ, ಪಗರಣದ ಆಟಗಳು ನಾಗರಪೂಜೆ ಬಸುರಿಬಯಕೆಗಳು ಗಾದೆಗಳು- ಇಂತಹ ಜಾನಪದೀಯ ಸಾಮಗ್ರಿ ಇಲ್ಲಿ ಎಡೆ ಪಡೆದಿದೆ. ಜಾನಪದ ದೃಷ್ಟಿಯಿಂದ ಇಲ್ಲಿನ ಕಥೆಗಳು ಕೈವೊಕ್ಕ ನಿಧಿ. ಜೈನಕಥಾ ಪರಂಪರೆಗೂ ತಾಯಿ ಬೇರು ಜನಪದ ಸಾಹಿತ್ಯವೇ. ಜೈನಪದ ಸಾಹಿತ್ಯವೆಲ್ಲ ಶಿಷ್ಟಪದವೇನಲ್ಲ. ಜೈನಪದ ಕಥಾ ಸಾಹಿತ್ಯದುದ್ದಕ್ಕೂ ಜನಪದ ಸಾಹಿತ್ಯದ ಪ್ರೇರಣೆ ಮತ್ತು ವಸ್ತು ಹೆಣೆದಿರುವುದನ್ನು ಈ ಪುಟ್ಟ ಪುಸ್ತಕ ಕನ್ನಡಿಸಿದೆ.

ಸಂ.

## ವಡ್ಡಾರಾಧನೆ

**ಗ್ರಂಥ ಸಂಪಾದನೆ: ಹಳೆಗನ್ನಡ ಗದ್ಯಕೃತಿ**

| | | |
|---|---|---|
| ಡೆಮ್ಮೆ 1/8 ಆಕಾರ ಪುಟಗಳು | : | 166+vi-222 |
| ಪ್ರಥಮ ಮುದ್ರಣ | : | 1993 (ಮೂರು ಸಾವಿರ ಪ್ರತಿಗಳು) |
| ಪ್ರಕಾಶಕರು | : | ಪ್ರಸಾರಾಂಗ,<br>ಬೆಂಗಳೂರು ವಿಶ್ವವಿದ್ಯಾಲಯ<br>ಬೆಂಗಳೂರು 560 056 |

ಹಳೆಗನ್ನಡದ ಗದ್ಯ ಗ್ರಂಥಗಳಲ್ಲಿ ವಡ್ಡಾರಾಧನೆಗೆ ಸಾಟಿಯಾಗಿ ನಿಲ್ಲುವಂಥ ಇನ್ನೊಂದು ಕೃತಿ ಇಲ್ಲ. ಏಳು ಹಸ್ತಪ್ರತಿಗಳ ಸಹಾಯದಿಂದ 19 ಕಥೆಗಳ ಈ ಶ್ರೇಷ್ಠ ಗದ್ಯ ಗ್ರಂಥವನ್ನು ಡಿ. ಎಲ್. ಎನ್. ಅವರು ಸಂಪಾದಿಸಿದ್ದರು, ಅದರ 4ನೆಯ ಮುದ್ರಣಕ್ಕೆ ದೀಪಿಕೆ ರೂಪದ ವಿವರಣೆ ಸಹ ಒದಗಿಸಿದ್ದರು. ಅವರ ಪ್ರಕಾರ ಈ ಕೃತಿಯ ಹೆಸರು ವಡ್ಡಾರಾಧನೆ, ಕಾಲ 920, ಕವಿ ಶಿವಕೋಟಿ, ಸ್ಥಳ ಕೋಗಳಿ. ಅವರಿಗೆ ದೊರೆಯದ ಅಪೂರ್ವ - ಪ್ರಾಚೀನ ತಾಳೆಗರಿ ಹಸ್ತ ಪ್ರತಿ ಸಹಾಯದಿಂದ ಹಂಪನಾ ಈ ಹೊಸ ಮುದ್ರಣವನ್ನು ಸಿದ್ಧಪಡಿಸಿದ್ದಾರೆ ಮತ್ತು ಪ್ರೌಢವಾದ ಪೀಠಿಕೆ ಬರೆದಿದ್ದಾರೆ.

ಹಂಪನಾ ಸಂಶೋಧನೆಯ ಪ್ರಕಾರ ಈ ಕೃತಿಯ ಹೆಸರು ಆರಾಧನಾ ಕರ್ಣಾಟ ಟೀಕಾ, ಇದರ ಕಾಲ ಸುಮಾರು 800, ಕವಿ ಭ್ರಾಜಿಷ್ಣು, ಸ್ಥಳ (ಪ) ಹಳ್ಳಿಖೇಡ (ಬೀದರ್ ಜಿಲ್ಲೆ). ಹಂಪನಾ ಅವರು ಡಾ. ರಂ. ಶ್ರಿ. ಮುಗಳಿಯವರ ಮಾರ್ಗದರ್ಶನದಲ್ಲಿ ವಡ್ಡಾರಾಧನೆ: ಸಮಗ್ರ ಅಧ್ಯಯನ ಎಂಬ ವಿಷಯದ ಬಗ್ಗೆ ಪಿಎಚ್. ಡಿ. ಪದವಿಗೆ ಸಂಶೋಧನೆ ನಡೆಸಿದುದರಿಂದ ಪ್ರಸ್ತುತ ಕೃತಿಯಲ್ಲಿ ಅನೇಕ ಹೊಸ ವಿಷಯಗಳನ್ನು ನೀಡಿದ್ದಾರೆ. ಅವರ ಪಿಎಚ್. ಡಿ ಸಂಶೋಧನೆಯ ಫಲಿತದಿಂದಲೇ ಈ ಕೃತಿ ಮತ್ತಷ್ಟು ಮೌಲಿಕತೆಯನ್ನು ಪಡೆದುಕೊಂಡಿದೆಯೆಂದು ಹೇಳಬಹುದು.

**ಅಭಿಪ್ರಾಯಗಳು:**

1. I have read through your learned introduction and I am persuaded by your arguments that is a work of Bhrajisnu.

**-Dr. Padmanabh S. Jaini,** 21-09-1993
University of california, Berkeley, U.S.A.

2. ವಡ್ಡಾರಾಧನೆಯ ಹೊಸ ಆವೃತ್ತಿಯನ್ನು ಪ್ರಕಟಿಸಿ ನೀವು ಮಾಡಿರುವ ಉಪಕಾರಕ್ಕಾಗಿ ಕೃತಜ್ಞತೆಗಳು. ನಿಮ್ಮ ಪೀಠಿಕೆಯಂತೂ ತುಂಬಾ ವಿದ್ವತ್ಪೂರ್ಣವಾಗಿದೆ. ಈ ಮೌಲಿಕವಾದ ಪ್ರಾಸ್ತಾವನೆ ಉದ್ದಕ್ಕೂ ನನ್ನ ಗುರುಗಳಾದ ಪೂಜ್ಯ ಡಾ. ಎ. ಎನ್. ಉಪಾಧ್ಯೆಯವರನ್ನು ಸ್ಮರಿಸುವಂತಿದೆ.

**--ಡಾ. ಬಿ. ಕೆ. ಖಡಬಡಿ, ಸಂಕೇಶ್ವರ**

3. ಹೊಸ ಶೋಧ, ಹೊಸ ವಿಚಾರಗಳಿಂದ ತುಂಬಿ ತುಳುಕುವ ಮುನ್ನುಡಿ, ಹೊಸ ಪಾಠಗಳಿಂದ ಮೆಚ್ಚುವ ಪಠ್ಯಭಾಗ ಇತ್ಯಾದಿಗಳಿಂದಾಗಿ ಕನ್ನಡ ಗ್ರಂಥ ಸಂಪಾದನಾ ಕ್ಷೇತ್ರದ ಉತ್ತಮ ಕಾಣಿಕೆ ಎನಿಸಿದೆ. ಈ ಗಮನಾರ್ಹ ಕೊಡುಗೆಗಾಗಿ ಅಭಿನಂದಿಸುತ್ತೇನೆ.

**-- ಡಾ. ಎಂ. ಎಂ. ಕಲಬುರ್ಗಿ**

# ವಡ್ಡಾರಾಧನೆ : ಸಮಗ್ರ ಅಧ್ಯಯನ

**ಸಂಶೋಧನೆ**

| | | |
|---|---|---|
| ಡೆಮ್ಮೆ 1/8 ಆಕಾರ, ಪುಟಗಳು | : | 400 |
| ಪ್ರಥಮ ಮುದ್ರಣ | : | 1999 |
| ಪ್ರಕಾಶಕರು | : | ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು. |

**ಡಾ. ಎಂ.ಎ. ಕಲಬುರ್ಗಿಯವರ ಲಿಖಿತ ಭಾಷಣ**

ಕರ್ನಾಟಕ ವಿಶ್ವವಿದ್ಯಾಲಯ ನನ್ನ ಮಾತೃ ಸಂಸ್ಥೆ; ವಡ್ಡಾರಾಧನೆ ನನ್ನ ಪ್ರೀತಿಯ ಕೃತಿ. ಆ ಮಾತೃಸಂಸ್ಥೆಯ ಸುವರ್ಣಮಹೋತ್ಸವ ಸಮಾರಂಭದಲ್ಲಿ ಭಾಗವಹಿಸುವುದು ಅನಿವಾರ್ಯವಾಗಿರುವುದರಿಂದ, ಈ ಪ್ರೀತಿಯ ಕೃತಿ ಬಿಡುಗಡೆ ಸಮಾರಂಭದಲ್ಲಿ ಭಾಗಿಯಾಗಲು ಸಾಧ್ಯವಾಗದುದಕ್ಕೆ ವಿಷಾದಿಸುತ್ತೇನೆ. ಈ ಕೃತಿ ಕರ್ತೃಗಳೂ ಮಾನ್ಯ ಮಿತ್ರರೂ ಆಗಿರುವ ಡಾ.ಹಂಪನಾ ಅವರ ಮತ್ತು ತಮ್ಮೆಲ್ಲರ ಕ್ಷಮೆ ಕೇಳುತ್ತೇನೆ.

ಡಾ. ಹಂಪನಾ ನಮ್ಮ ತಲೆಮಾರಿನ ಹಿರಿಯ ಸಂಶೋಧಕರು. ಡಾ. ವೆಂಕಟಚಲಶಾಸ್ತ್ರಿ, ಡಾ. ಚಿದಾನಂದಮೂರ್ತಿ, ಡಾ. ಹಂಪನಾ ಮತ್ತು ನಾನು- ಈ ನಾಲ್ವರು "ಸಂಶೋಧನ ಚತುರ್ಮುಖ"ರೆಂದು ಜನ ಇಂದು ಪರಿಭಾವಿಸುತ್ತಲಿದ್ದಾರೆ. ಆದರೆ ನಿವೃತ್ತಿಯ ಬಳಿಕ ಡಾ. ಹಂಪನಾ ನಮ್ಮೆಲ್ಲರಿಗಿಂತ ಹೆಚ್ಚು ಗಾಢವಾಗಿ ಸಂಶೋಧನೆಗೆ ತೊಡಗಿಕೊಂಡು, ಕನ್ನಡ-ಇಂಗ್ಲಿಶ್ ಎರಡೂ ಭಾಷೆಗಳಲ್ಲಿ ಉತ್ತಮೋತ್ತಮ ಕೃತಿಗಳನ್ನು ಹೊರತಂದು "ಕನ್ನಡದ ಕಣಜ"ವನ್ನು ತುಂಬುತ್ತಲಿದ್ದಾರೆ. ಈ ಮಾಲಿಕೆಯಲ್ಲಿ ಅಪೂರ್ವ ಕೃತಿಯೆನಿಸಿದೆ, "ವಡ್ಡಾರಾಧನೆ : ಸಮಗ್ರ ಅಧ್ಯಯನ".

ವಡ್ಡಾರಾಧನೆ ಎಂದಾಕ್ಷಣ ಡಿ.ಎಲ್.ಎನ್. ನೆನಪಾಗುತ್ತಾರೆ. ಹಂಪನಾ ಅವರಿಗೆ ಡಿ. ಎಲ್. ಎನ್. ಅವರ ಬಗ್ಗೆ ಅಪಾರ ಗುರುಭಕ್ತಿ. ಆದರೆ, ವಡ್ಡಾರಾಧನೆಯ ಸಂಸ್ಕರಣ ಮತ್ತು ಸಂಶೋಧನೆಗಳಿಗೆ ಸಂಬಂಧಿಸಿದಂತೆ ಗುರುವನ್ನೂ ಮೀರಿಸುವ ರೀತಿಯಲ್ಲಿ "ವಡ್ಡಾರಾಧನೆ: ಸಮಗ್ರ ಅಧ್ಯಯನ" ಕೃತಿಯನ್ನು ರೂಪಿಸಿದ್ದಾರೆ. ಅಷ್ಟೇ ಅಲ್ಲ. ಈ ತಲೆಮಾರಿನ ಸಂಶೋಧಕರಾದ ನಮಗಾರಿಗೂ ಸಾಧ್ಯವಾಗದ ಆಳ-ವಿಸ್ತಾರದಲ್ಲಿ ಈ ಕೆಲಸವನ್ನು ಪೂರೈಸಿದ್ದಾರೆ.

ಕನ್ನಡದಲ್ಲಿ ವಡ್ಡಾರಾಧನೆ "ಸಾಹಿತ್ಯಕೃತಿ"ಯಾಗಿ ಅನೇಕ ಜನ ಸಹೃದಯರನ್ನು, "ಸಂಶೋಧನ ಸಮಸ್ಯೆ"ಯಾಗಿ ಅನೇಕ ಜನ ವಿದ್ವಾಂಸರನ್ನು ತನ್ನತ್ತ ಸೆಳೆದಿದೆ. ಇವರಲ್ಲಿ ಡಾ. ಡಿ.ಎಲ್.ಎನ್., ಡಾ. ಎನ್. ಉಪಾಧ್ಯೆ, ಡಾ. ಕಡಬಡಿ ಮುಖ್ಯರು. ಇವರೆಲ್ಲರಿಗಿಂತ ಮುಖ್ಯರು ಡಾ. ಹಂಪನಾ. ಇದಕ್ಕೆ ಪ್ರಸ್ತುತ ಕೃತಿಯೇ ಸಾಕ್ಷಿನುಡಿಯುತ್ತದೆ.

೧೯೬೧ರ ವರೆಗಿನ ಅಧ್ಯಯನ, ಆಮೇಲಿನ ಅಧ್ಯಯನ - ಹೀಗೆ ಎರಡು ನೆಲೆಗಳ ಅಭ್ಯಾಸದಿಂದಾಗಿ ಈ ಕೃತಿಗೆ upto date research ಘನತೆ ಪ್ರಾಪ್ತವಾಗಿದೆ. ಈವರೆಗಿನ

ಅಭ್ಯಾಸ ಒಂದಿಷ್ಟೂ ಹೊರಗುಳಿಯದಂತೆ ಬಾಚಿ ಹಿಡಿದು, ಅಲ್ಲಿಂದ ಬಹಳ ಮುಂದೆ ನಡೆದಿದ್ದಾರೆ, ಹಂಪನಾ. ಅಂದರೆ ಹಸ್ತ ಪ್ರತಿಗಳ ಅಧ್ಯಯನ, ಮುದ್ರಿತ ಪ್ರತಿಗಳ ಅಧ್ಯಯನ, ಅಧ್ಯಯನಗಳ ಅಧ್ಯಯನವನ್ನು ಹಿನ್ನೆಲೆಯಾಗಿಟ್ಟುಕೊಂಡು, 'ಹಂಪನಾ ಅಧ್ಯಯನ' ಇಲ್ಲಿ ಮುನ್ನಡೆದಿದೆ.

ಪುರಾಣ-ಇತಿಹಾಸ, ಮಾನವಿಕ - ಆಗಮಿಕ - ಲೌಕಿಕ ಈ ಆಯಾಮಗಳನ್ನು ಒಗ್ಗೂಡಿಸಿಕೊಂಡ ವಡ್ಡಾರಾಧನೆ ಕನ್ನಡದ "ಬಹುಶಿಸ್ತೀಯ" ಸಾಹಿತ್ಯಕೃತಿ. ಹೀಗಾಗಿ ಇದರ ಅಧ್ಯಯನ 'ಬಹುಶಿಸ್ತೀಯ' ವಿದ್ವಾಂಸರನ್ನು ಅಪೇಕ್ಷಿಸುವುದು ಸಹಜ. ಡಾ. ಹಂಪನಾ ಇದಕ್ಕೆ ಹೇಳಿಮಾಡಿಸಿದ ವಿದ್ವಾಂಸರೆನಿಸಿದ್ದಾರೆ. ಕನ್ನಡ ಸಂಸ್ಕೃತ ಪ್ರಾಕೃತ ಇಂಗ್ಲಿಷ್ ಭಾಷೆಗಳ ಜ್ಞಾನ, ಜೈನಸಿದ್ಧಾಂತದ ತಲಸ್ಪರ್ಶಿ ತಿಳಿವಳಿಕೆ, ಸಂಶೋಧನೆಯ ಸಮ್ಯಕ್ ದೃಷ್ಟಿ - ಈ ರತ್ನತ್ರಯದಿಂದಾಗಿ ವಡ್ಡಾರಾಧನೆಯ ಅಧ್ಯಯನಕ್ಕೆ ಇಲ್ಲಿ ಪರಿಪೂರ್ಣತೆ ಪ್ರಾಪ್ತವಾಗಿದೆ.

ತೌಲನಿಕ ಅಭ್ಯಾಸ - ಚಾರಿತ್ರಿಕ ಅಧ್ಯಯನಗಳಲ್ಲಿ ಬಹುಶ್ರುತತೆ, ಸಾಂಸ್ಕೃತಿಕ ಅಧ್ಯಯನದಲ್ಲಿ ಸಾಮಾಜಿಕ ಗ್ರಹಿಕೆ, ಸಾಹಿತ್ಯಕ ವಿಭಾಗದಲ್ಲಿ ವ್ಯಾಪಕ ಓದು ಇತ್ಯಾದಿ ಎದ್ದು ಕಂಡು, ಏಕಕಾಲಕ್ಕೆ ಅನೇಕ ಗ್ರಂಥ ಓದಿದ ಅರಿವಾಗುತ್ತದೆ. ಒಂಬತ್ತೂ ಅಧ್ಯಾಯಗಳಲ್ಲಿ ಆಕರಗಳ ವಿಪುಲಸಾಮಾಗ್ರಿ, ತರ್ಕಬದ್ಧ ವಿಶ್ಲೇಷಣೆ, ಕ್ರಮಬದ್ಧ ವಿನ್ಯಾಸ ಎದ್ದು ತೋರುತ್ತದೆ. ವಡ್ಡಾರಾಧನೆಯ ಬಗ್ಗೆ ಇಂದಿನ ಸಂದರ್ಭದಲ್ಲಿ ಯಾರೂ ಇದಕ್ಕಿಂತ ಉತ್ತಮವಾಗಿ ಬರೆಯಲಾರರು ಎಂಬಂತೆ ಈ ಕೃತಿಮಾನಸ್ತಂಭವನ್ನು ಕನ್ನಡದಲ್ಲಿ ಎತ್ತಿನಿಲ್ಲಿಸಿದ್ದಾರೆ. **ಪಿಎಚ್.ಡಿ. ಮಹಾಪ್ರಬಂಧವಾಗಿರದ ಪಕ್ಷದಲ್ಲಿ ಯಾವುದೇ ವಿಶ್ವವಿದ್ಯಾಲಯ ಇದಕ್ಕೆ ಡಿ.ಲಿಟ್. ಪದವಿ ನೀಡಬಹುದಾಗಿತ್ತು. ಅಂಥ ಶ್ರೇಷ್ಠತೆ ಈ ಗ್ರಂಥಕ್ಕೆ ಇದೆ.**

ಇತ್ತೀಚೆ"ವಿಮರ್ಶೆಯ ವಿನಯ" ಪದ ಕೇಳಿಬರುತ್ತಿದೆ. ಅದನ್ನು ನೆನಪಿಸುವಂತೆ 'ಸಂಶೋಧನೆಯ ಸೌಜನ್ಯ' ಇಲ್ಲಿ ಉದ್ದಕ್ಕೂ ಕಂಡುಬರುತ್ತಿದೆ. ಮೂಲತಃ ಗುಣಗ್ರಾಹಿಯಾಗಿರುವ ಹಂಪನಾ ಸೂಕ್ತವಾಗಿರುವ ಕಿರಿಯರ ಅಭಿಪ್ರಾಯವನ್ನು ಉತ್ಸಾಹದಿಂದ ಎತ್ತಿಹಿಡಿಯುತ್ತಾರೆ. ಸೂಕ್ತವಾಗಿರದ ಹಿರಿಯರ ಅಭಿಪ್ರಾಯವನ್ನು ಅಷ್ಟೇ ಸೌಜನ್ಯದಿಂದ ನಿರಾಕರಿಸುತ್ತಾರೆ. ಇದು ಈ ಕೃತಿಯ ಒಂದು ಸ್ಥಾಯಿ ಗುಣವಾಗಿದೆ.

ಹಂಪನಾ ಗದ್ಯ ವಡ್ಡಾರಾಧನೆಯ ಗದ್ಯದಂತೆ ಆಕರ್ಷಕವಾಗಿದೆ. ಇಲ್ಲಿಯ ಶೈಲಿ ಆಡಂಬರವಾಗಿರದೆ ಆಪ್ತವಾಗಿರುವುದರಿಂದ ಒಂದು ಸೃಜನಶೀಲ ಕೃತಿಯಂತೆ ಓದಿಸಿಕೊಂಡು ಹೋಗುತ್ತದೆ. ನಾನಂತೂ ನಂದನವನದಲ್ಲಿ ಐರಾವತ ವಿಹರಿಸಿದ ವಾಚನಾನುಭವ ಪಡೆದಿದ್ದೇವೆ ಮತ್ತು ವಡ್ಡಾರಾಧನೆ ಕುರಿತ ನನ್ನ ತಿಳಿವಳಿಕೆಯನ್ನು ವಿಸ್ತರಿಸಿಕೊಂಡಿದ್ದೇನೆ.

ಇದೇ ರೀತಿ "ಕವಿರಾಜಮಾರ್ಗ" "ಪಂಪಭಾರತ" ಇವೇ ಮೊದಲಾದ ಕನ್ನಡದ ಗಣ್ಯಕೃತಿಗಳಿಗೆ "ಸಮಗ್ರ ಅಧ್ಯಯನ" ಗ್ರಂಥಗಳು ಹುಟ್ಟಿಕೊಳ್ಳುವುದು ಅವಶ್ಯವಿದೆ. ಆ ಮಾಲೆಗೆ ಈ ಕೃತಿ ಮಾದರಿಯಾಗಲೆಂದು ಹಾರೈಸುತ್ತೇನೆ.

ಸಂ.

# ವಡ್ಡಾರಾಧನೆ

**ಪ್ರಚಾರೋಪನ್ಯಾಸ**

| | | |
|---|---|---|
| ಡೆಮ್ಮೈ 1/16 ಆಕಾರ, ಪುಟಗಳು | : | 60+v |
| ಪ್ರಥಮ ಮುದ್ರಣ | : | 1968 (ಐದು ಸಾವಿರ ಪ್ರತಿಗಳು) |
| ದ್ವಿತೀಯ ಮುದ್ರಣ | : | 1973 (ಐದು ಸಾವಿರ ಪ್ರತಿಗಳು) |
| ಪ್ರಕಾಶಕರು | : | ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ |

ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸ ಮಾಲೆಯಲ್ಲಿ ಪ್ರಕಟವಾಗಿರುವ ಈ ಪುಸ್ತಕದಲ್ಲಿ ವಡ್ಡಾರಾಧನೆ ಗ್ರಂಥದ ಹಾಗೂ ಕಥೆಗಳ ಹಿನ್ನೆಲೆ, ಧಾರ್ಮಿಕ ಸ್ವರೂಪ, ಶೈಲಿ, ಸಾಹಿತ್ಯ ಗುಣ, ಸಾಂಸ್ಕೃತಿಕ ಮಹತ್ವ ಮತ್ತು ಐತಿಹಾಸಿಕ ಅಂಶಗಳನ್ನು ಕುರಿತ ಪರಿಚಯಾತ್ಮಕ ನಿರೂಪಣೆಯಿದೆ. ಈ ಕೃತಿ ಇದುವರೆಗೆ ಹತ್ತುಸಾವಿರ ಪ್ರತಿಗಳು ಮಾರಾಟವಾಗಿದ್ದರೂ ಮತ್ತಷ್ಟು ಬೇಡಿಕೆಯನ್ನು ಹೊಂದಿದೆ. ಈ ಕೃತಿಯ ಮಹತ್ವವನ್ನು ಸಾರುವುದಕ್ಕೆ ಈ ಒಂದು ಅಂಶವೇ ಸಾಕೆಂದು ಹೇಳಬಹುದು.

**ಅಭಿಪ್ರಾಯ :**

(ಇಲ್ಲಿನ) ಹೇಳಿಕೆಗಳ ಹಿಂದೆ ಹಂಪನಾ ಅವರು ಕಥಾ ಸಾಹಿತ್ಯದ ಪರಂಪರೆಗಳ ಹಿನ್ನೆಲೆ ಕುರಿತು ಆಳವಾದ ವ್ಯಾಸಂಗ ಮಾಡಿರುವ ಶ್ರಮದ ಸೂಚನೆಯಿದೆ*. ಈ ಪುಟ್ಟ ಪುಸ್ತಕದ ಕೊನೆಯ ಹತ್ತು ಪುಟಗಳಲ್ಲಿ ಹಂಪನಾ ಅವರು ವಡ್ಡಾರಾಧನೆಯ ಸಮಗ್ರ ಗುಣಗಣಗಳ ಕ್ರೋಢೀಕರಣದಿಂದ ಕೂಡಿದ ಸೊಗಸಾದ ಸಮಾರೋಪವನ್ನು ನಿರೂಪಿಸಿದ್ದಾರೆ*. ಶ್ರೀ ಸಾಮಾನ್ಯನೇ ಏಕೆ ಬಲ್ಲಿದನೂ ಇದನ್ನೋದಿದಲ್ಲಿ ವಡ್ಡಾರಾಧನೆಯನ್ನು ಕುರಿತು ಸಮಗ್ರ ವಿಷಯ ತಿಳಿಯಬಹುದು ಎನ್ನುವುದಕ್ಕೆ ಎರಡನೆಯ ಮಾತಿಲ್ಲ. ಇದರ ರಚನೆಗಾಗಿ ನಾವು ಹಂಪನಾ ಅವರನ್ನು ಅಭಿನಂದಿಸಲೇ ಬೇಕು. ಒಂದು ಸಣ್ಣ ಪುಸ್ತಕದಲ್ಲಿ ಸಾಧಿಸಬಹುದಾದ ಎಲ್ಲವನ್ನೂ ಅವರು ಇಲ್ಲಿ ಸಾಧಿಸಿದ್ದಾರೆ ಎಂದರೆ ತಪ್ಪಲ್ಲ.

**--ಪ್ರೊ. ಟಿ. ಎಸ್. ನಾಗರಾಜ ಶೆಟ್ಟಿ**

# ವಿಷ್ಣುವರ್ಧನ- ವಿಜಯಾದಿತ್ಯ- ಕೀರ್ತಿವರ್ಮ

**ಇತಿಹಾಸ**

| | | |
|---|---|---|
| ಡೆಮ್ಮಿ 1/8 ಆಕಾರ, ಪುಟಗಳು | : | 72+viii |
| ಪ್ರಥಮ ಮುದ್ರಣ | : | 1986 |
| ಪ್ರಕಾಶಕರು | : | ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ |

ಕಲ್ಯಾಣ ಚಾಳುಕ್ಯರ ತ್ರೈಲೋಕ್ಯಮಲ್ಲ ಒಂದನೆಯ ಸೋಮೇಶ್ವರನಿಗೆ (1042-68), ಭುವನೈಕಮಲ್ಲ ಸೋಮೇಶ್ವರ II (1068-76), ವಿಕ್ರಮಾದಿತ್ಯ vi(1076-1126) ಮತ್ತು ವೀರನೊಳಂಬ- ಪಲ್ಲವ- ಪೆರ್ಮಾನಡಿ ಜಯಸಿಂಹ [ಜಯಸಿಂಗ- ಸಿಂಗಣ (1055-1118) ಈತ ಚಕ್ರವರ್ತಿಯಾಗಿರಲಿಲ್ಲ, ಯುವರಾಜನಾಗಿದ್ದನು]- ಎಂಬ ಮೂವರು ಮಕ್ಕಳೆಂಬುದನ್ನು ವ್ಯಾಪಕವಾಗಿ ಚರಿತ್ರೆಯಲ್ಲಿ ಹೆಸರಿಸಲಾಗಿದೆ. ಪ್ರಸ್ತುತ ಹಂಪನಾ ಅವರ ಪುಸ್ತಕದಲ್ಲಿ, ಶಾಸನಗಳ ಆಧಾರದಿಂದ, ತ್ರೈಲೋಕ್ಯಮಲ್ಲನಿಗೆ ಇದ್ದ ಇನ್ನೊಬ್ಬ ಹಾಗೂ ನಾಲ್ಕನೆಯ ಮಗನಾದ ವಿಷ್ಣುವರ್ಧನ- ವಿಜಯಾದಿತ್ಯ- ಕೀರ್ತಿವರ್ಮನ ಸಾಧನೆ, ಜೈತ್ರಯಾತ್ರೆ, ಗುರುಗಳು, ಗೋವೈದ್ಯಗ್ರಂಥ ಸಮಕಾಲೀನ ರಾಜಕೀಯ-ಧಾರ್ಮಿಕ ಪರಿಸರ- ಇವನ್ನು ಈ ಸಂಗ್ರಂಥದಲ್ಲಿ ಸಾದರಪಡಿಸಲಾಗಿದೆ.

**ಅಭಿಪ್ರಾಯಗಳು:**

1. ತಮ್ಮ ಪುಸ್ತಕ ವಿಷ್ಣುವರ್ಧನ- ವಿಜಯಾದಿತ್ಯ-ಕೀರ್ತಿವರ್ಮ ಪುಸ್ತಕ ಬಹಳ ಚೆನ್ನಾಗಿದೆ. ಮೌಲಿಕ ಸಂಶೋಧನೆಯನ್ನು ನೀವು ಮಾಡಿದ್ದೀರಿ. ನಿಮಗೆ ನನ್ನ ಹೃತ್ಪೂರ್ವಕ ಅಭಿನಂದನೆಗಳು.

**--ಜಿ. ಎಸ್. ದೀಕ್ಷಿತ್**

2. 'ಕೀರ್ತಿವರ್ಮ' ಪುಸ್ತಕವನ್ನು ಬೆಂಗಳೂರು ರೈಲು ನಿಲ್ದಾಣದಲ್ಲಿಯೆ ಓದಿ ಮುಗಿಸಿದೆ. ನೂರು ವರ್ಷಗಳವರೆಗೂ ಬೆಳೆದು ಬಂದಿದ್ದ,ವಿದ್ವಾಂಸರು ಬೆಳೆಸಿಕೊಂಡು ಬಂದಿದ್ದ ಗೊಂದಲವನ್ನು ಸರ್ವ ಸಮರ್ಪಕವಾಗಿ ಬಿಡಿಸಿದ ತಮಗೆ ಅಭಿನಂದನೆಗಳು. ಇದು ಚರಿತ್ರೆ ಮತ್ತು ಸಾಹಿತ್ಯ ಚರಿತ್ರೆಗಳಿಗೆ ಪುಟ್ಟ ಮೌಲಿಕ ಕೊಡುಗೆಯೆಂದು ಹೆಮ್ಮೆಯಿಂದ ಹೇಳ ಬಯಸುತ್ತೇನೆ.

**--ಡಾ. ಎಂ. ಎಂ. ಕಲಬುರ್ಗಿ**

3. ವಿಷ್ಣುವರ್ಧನ - ವಿಜಯಾದಿತ್ಯ- ಕೀರ್ತಿವರ್ಮ ಸಂಪುಸ್ತಕ ಚೆನ್ನಾಗಿ ಬಂದಿದೆ. ನಿಮ್ಮ ಈ ಅಭಿಪ್ರಾಯವು ಸ್ವೀಕಾರ ಯೋಗ್ಯವಾಗಿದೆ. ಒಂದು ಒಳ್ಳೆಯ ಕೃತಿಯನ್ನು ರಚಿಸಿದುದಕ್ಕೆ ಕೃತಜ್ಞತೆಗಳು.

**--ಸೀತಾರಾಮ ಜಾಗೀರ್‌ದಾರ್**

ಲತೆ

ಒಂದು ಮಹತ್ವದ ಸಂಶೋಧನಾ ಕೃತಿ. ಶಾಸನ ಕ್ಷೇತ್ರದಲ್ಲಿ ಪ್ರಸ್ತುತ ಕೃತಿಯ ವ್ಯಕ್ತಿ ಮಿಂಚಿ ಮರೆಯಾದ ಚಾಲುಕ್ಯ ಕಾಲದ ಮಿಣಿಕುದೀಪ. ಆತನ ಅಸ್ತಿತ್ವವೇ ಶಾಸನ ಲೋಕದಲ್ಲಿ ಸಂದಿಗ್ಧವಾಗುತ್ತ ಹೊರಟಾಗ ಅವನನ್ನು ತಮ್ಮ ಸಂಶೋಧನೆಯ ರಜ್ಜುವಿನಿಂದ ಬಂಧಿಸಿ ಬಂಗಾರದ ಸಂಕೋಲೆಯಲ್ಲಿ ಬಂಧಿಸಿದವರು ಹಂಪನಾ.

**--ಡಾ. ಚೆನ್ನಕ್ಕ ಪಾವಟೆ**

'ಶಾಸನ ಸಂಜೀವಿನಿ' (2003) ಪು. 47

## ವೀರ ಜಿನೇಂದ್ರ ಚರಿತೆ

**ಅನುವಾದ**

ಡೆಮ್ಮೈ 1/8 ಆಕಾರ, ಪುಟಗಳು : 140+x

ಪ್ರಥಮ ಮುದ್ರಣ : 1975 (ಅಕ್ಟೋಬರ್). ಮೂರು ಸಾವಿರ ಪ್ರತಿಗಳು

ಪ್ರಕಾಶಕರು : ರಾಜ್ಯಶ್ರೀ ಪ್ರಕಾಶನ, ರಾಜಾಜಿನಗರ, ಬೆಂಗಳೂರು

ಮೂಲ ಹಿಂದಿಯಲ್ಲಿ ಡಾ. ಹೀರಾಲಾಲ್ ಜೈನ್ ಮತ್ತು ಡಾ. ಆ. ನೇ. ಉಪಾಧ್ಯೆ ಅವರು ಪ್ರಾಕೃತ- ಸಂಸ್ಕೃತ ಕಾವ್ಯಗಳ ಆಧಾರದಿಂದ ಸಿದ್ಧಪಡಿಸಿದ *ವೀರಜಿಣಿಂದ ಚರಿತೆ'' ಗ್ರಂಥದ ಕನ್ನಡ ಅನುವಾದವಿದು, ಮಹಾವೀರರ 2500 ನಿರ್ವಾಣೋತ್ಸವ ಸಂದರ್ಭಕ್ಕೆ ಈ ಗ್ರಂಥದ ಮೂಲ- ಅನುವಾದ ಪ್ರಕಟವಾಗಿವೆ. ಮಹಾವೀರರ ತೀರ್ಥಂಕರತ್ವದ ಹಿನ್ನೆಲೆಯನ್ನು ಐತಿಹಾಸಿಕವಾಗಿ ಸಮೀಕ್ಷೆಸಿದೆ. ಅನಂತರ ಪ್ರಾಕೃತ- ಸಂಸ್ಕೃತ ಕವಿಗಳ ಕಾವ್ಯಗಳಿಂದ ಆಯ್ದ ಭಾಗಗಳನ್ನು ಅಳವಡಿಸಿ 12 ಸಂಧಿಗಳಲ್ಲಿ ಜನನ- ತಪಸ್ಸು, ನಿರ್ವಾಣ, ಜಂಬೂಸ್ವಾಮಿ ಪ್ರವ್ರಜ್ಯ, ಚಂದನಾ ತಪಗ್ರಹಣ, ಚಿಲಾತ ಪುತ್ರ ಪರೀಷಹಸನ, ಶ್ರೇಣಿಕನ ರಾಜ್ಯ-ಧರ್ಮ ಲಾಭ, ತೀರ್ಥಂಕರತ್ವ ಗೋತ್ರ ಬಂಧನ ಶ್ರೇಣಿಕ ಪುತ್ರ ವಾರಿಷೇಣನ ಯೋಗ, ರಾಜಕುಮಾರ ದೀಕ್ಷೆ, ಧರ್ಮೋಪದೇಶ - ಇವು ನಿರೂಪಿತವಾಗಿವೆ.

ಈ ಕೃತಿ ಪೂರ್ಣವಾಗಿ ಅಚ್ಚಾಗಿ ಹೊರಬರುವುದರಲ್ಲಿ ಕಣ್ಮರೆಯಾದ ಆ. ನೇ. ಉಪಾಧ್ಯೆ ಹಾಗೂ ಡಾ. ಹೀರಾಲಾಲ್ ಜೈನರ ಸ್ಮರಣೆಗೆ ಈ ಪುಸ್ತಕವನ್ನು ಅರ್ಪಣೆ ಮಾಡಲಾಗಿದೆ.

**ಅಭಿಪ್ರಾಯಗಳು:**

1. ಮಾನಸಿಕ ತೊಂದರೆಗಳನ್ನೂ, ಹಸಿವು ನೀರಡಿಕೆ ಶೀತೋಷ್ಣಗಳ ಬಾಧೆಗಳನ್ನೂ ಸಹಿಸಿ ತಾಳ್ಮೆ ಸ್ಥೈರ್ಯ ಪಡೆದು ಬಾಳು ಬೆಳಗಿದ ಮಹಾವೀರರ ಜೀವನ ಸ್ವರೂಪ ಹಾಗೂ ಅವರ ಸಮಕಾಲೀನ ರಾಜಕೀಯ ಸ್ಥಿತಿಗಳನ್ನು 'ವೀರಜಿನೇಂದ್ರ- ಚರಿತೆ' ಕೃತಿಯಲ್ಲಿ ತಿಳಿಸಿರುವುದಲ್ಲದೆ ಮಹಾವೀರರು ಚಾರಿತ್ರಿಕ ವ್ಯಕ್ತಿ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ವೀರಜಿನೇಂದ್ರ- ಚರಿತೆ ಒಂದು ಉತ್ತಮ ಜೀವನ ಚರಿತ್ರೆಯಾಗಿದ್ದು ಗದ್ಯದ ಶೈಲಿ ಸುಗಮವಾಗಿದೆ.

**--ಸಿ. ಹನುಮಂತರಾಯಪ್ಪ**

2. ಇಡೀ ಗ್ರಂಥಕ್ಕೆ ಶಿಖರಪ್ರಾಯವಾಗಿ ವಿದ್ವತ್‌ಪೂರ್ಣ, ಸಂಶೋಧನಾತ್ಮಕ40 ಪುಟಗಳ ಪ್ರಸ್ತಾವನೆ ಗ್ರಂಥದ ತೂಕವನ್ನು ಹೆಚ್ಚಿಸಿದೆ. ಇದುವರೆಗೆ ಪುರಾಣಗಳ ಕಲ್ಪನಾ ವಿಲಾಸದಲ್ಲಿ ಅತಿಮಾನವ ನೆಲೆಯಲ್ಲಿ ಚಿತ್ರಿತನಾದ ಮಹಾವೀರ ಐತಿಹಾಸಿಕ ಪುರುಷನಾಗಿ ಇಲ್ಲಿ ಗೋಚರಿಸುವುದು ಮಹತ್ವದ ಅಂಶ. ಇದು ಕನ್ನಡ ಸಾಹಿತ್ಯಕ್ಕೆ ಅಮೂಲ್ಯವಾದ ಕೊಡುಗೆ.

**--ಪ್ರೊ. ಟಿ. ಎಸ್. ಪ್ರಭಾಕರ್**



# ಶಾಂತಿಪುರಾಣಂ

**ಗ್ರಂಥ ಸಂಪಾದನೆ - ಚಂಪೂ ಕಾವ್ಯ**

ಕ್ರೌನ್ 1/4 ಆಕಾರ, ಪುಟಗಳು : 199+554(-753)

ಪ್ರಥಮ ಮುದ್ರಣ : 1982.

ಪ್ರಕಾಶಕರು : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-18

ಕನ್ನಡದ ರತ್ನತ್ರಯ ಕವಿಗಳಲ್ಲಿ, ಜಿನಸಮಯದೀಪಕರಲ್ಲಿ ಪೊನ್ನನೂ ಒಬ್ಬನು. ಪಂಪ, ರನ್ನ - ಇನ್ನಿಬ್ಬರು. ಪೊನ್ನನ ಪ್ರಗಲ್ಭ ಚಂಪೂಕಾವ್ಯವಾದ ಶಾಂತಿ ಪುರಾಣವನ್ನು ಮೂಲ ಮತ್ತು ಹೊಸಗನ್ನಡ ಗದ್ಯಾನುವಾದ ಸಹಿತ ಇಲ್ಲಿ ಕೊಟ್ಟಿದ್ದಾರೆ.

**ಅಭಿಪ್ರಾಯಗಳು :**

1. ಹಳೆಗನ್ನಡ ಕವಿಗಳಲ್ಲಿ ಪೊನ್ನಕವಿಯೂ ಪಂಪ ರನ್ನರಂತೆ ಪ್ರೌಢನಾಗಿದ್ದಾನೆ. ಜನಪ್ರಿಯನಾಗಿದ್ದಾನೆ. ಆದರೆ ಅದೇಕೋ ಪೊನ್ನನ ಕಾವ್ಯವನ್ನು ಈ ಶತಮಾನದಲ್ಲಿ ಅಷ್ಟು ಆಳವಾಗಿ ಅಭ್ಯಾಸ ಮಾಡುತ್ತಿಲ್ಲ, ಇವನ ಕಾವ್ಯದ ವಿಮರ್ಶೆಯೂ ಎಷ್ಟು ಹೊರಬೀಳಬೇಕಿತ್ತೋ ಅಷ್ಟು ಪ್ರಚುರವಾಗಿಲ್ಲ. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ, ಸ್ವಯಂ ಪ್ರಸಿದ್ಧ ಲೇಖಕರೂ, ಹಳೆಗನ್ನಡ ಸಂಶೋಧನೆಯ ಪರಿಣತರೆಂದು ಹೆಸರು ಗಳಿಸಿದವರೂ ಆದ ಹಂಪ. ನಾಗರಾಜಯ್ಯನವರು ಒಂದು ದೊಡ್ಡ ಸಾಹಸವನ್ನು ಇಲ್ಲಿ ಮಾಡಿದ್ದಾರೆ. ಪೊನ್ನಕವಿಯ ಶಾಂತಿ ಪುರಾಣ ಕಾವ್ಯವನ್ನು ಹಲವು ಪಾತಳಿಗಳಲ್ಲಿ ಹಿಡಿದು ಅಲುಗಾಡಿಸಿದ್ದಾರೆ. ಹಲವು ಪದರುಗಳನ್ನು ವಿಶ್ಲೇಷಿಸಿ ಅಲ್ಲಿ ಅಡಗಿದ್ದ ಸ್ವಾರಸ್ಯಗಳನ್ನು ಎಳೆದು ಅನ್ಯ ಮೂಲಗಳಿಂದ ನೂತನ ಪರಿಕರಗಳನ್ನು ಅವಲಂಬಿಸಿ ಈ ಕಾವ್ಯದ ಶಾಂತಿ ಪುರಾಣವನ್ನು ಒರೆಹಚ್ಚಿದ್ದಾರೆ. ಇಂಥ ವಿದ್ವತ್ಪೂರ್ಣ ಪ್ರಯತ್ನದಿಂದ ಪ್ರಾಚೀನ ಕನ್ನಡ ಕಾವ್ಯಗಳನ್ನು ಬೆಲೆ ಕಟ್ಟಲು ಬೇಕಾದ ಸಿದ್ಧತೆಯುಳ್ಳ ಹಂಪನಾ ಅವರಂಥ ಸಂಶೋಧಕರು ನಮ್ಮ ತರುಣರಲ್ಲಿ ತಯಾರಾಗಬೇಕು. ಹಳೆಗನ್ನಡ ಕಾವ್ಯಗಳ ಮೌಲ್ಯಮಾಪನಕ್ಕೆ ಮಾರ್ಗದರ್ಶನ ಬಯಸುವ ಯುವ ಪೀಳಿಗೆಗೆ ಒಂದು ಮಾದರಿ ಹಾಕಿಕೊಟ್ಟಿರುವ ಈ ಕೃತಿಯನ್ನು ನಾವೆಲ್ಲ ಪ್ರೀತ್ಯಾದರಗಳಿಂದ ಬರಮಾಡಿಕೊಳ್ಳಬೇಕು.

**ಡಾ. ವಿ. ಕೃ. ಗೋಕಾಕ,**

(ಪ್ರಧಾನ ಸಂಪಾದಕ 'ಮುನ್ನುಡಿ'ಯಿಂದ)

2. ಹಂಪ. ನಾಗರಾಜಯ್ಯನವರು ಕಾವ್ಯಾಭ್ಯಾಸದಲ್ಲಿ ಸೂಕ್ಷ್ಮವಾದ ಪರಿಜ್ಞಾನವುಳ್ಳವರು, ಆಳವಾದ ಪಾಂಡಿತ್ಯವನ್ನು ಸಂಪಾದಿಸಿಕೊಂಡವರು. ಈ ಗ್ರಂಥಕ್ಕೆ ಬರೆದ ಸುದೀರ್ಘವಾದ ಮುನ್ನುಡಿಯಲ್ಲಿ ತಮ್ಮ ಅನೇಕ ವರ್ಷಗಳ ಅಭ್ಯಾಸದ ಫಲವನ್ನು ಅವರು ನೀಡಿದ್ದಾರೆ. ಯೋಗ್ಯವೆನಿಸಿದ ಪಾಠವನ್ನು ಒದಗಿಸುವುದರ ಜೊತೆಗೆ ಲಭ್ಯವಾದ ಪಾಠಾಂತರಗಳನ್ನೂ

ಗುರುತಿಸಿರುವುದು ಗಮನಾರ್ಹವಾಗಿದೆ. ಕಾವ್ಯ ಪಾಠದಲ್ಲಿ ಕೆಲವು ಕ್ಲೇಶಗಳು ಕಂಡಾಗ ಅವುಗಳನ್ನು ದಾಟಿ ಹೋಗುವ ಅಥವಾ ಏನಾದರೂ ಊಹೆಯ ಅರ್ಥವನ್ನು ಹೇಳಿಕೊಂಡು ಹೋಗುವ ಪ್ರವೃತ್ತಿ ಕೆಲವರಲ್ಲಿ ಇರುವುದುಂಟು. ಶ್ರೀ. ಹಂಪ. ನಾಗರಾಜಯ್ಯನವರು ಹಾಗೆ ನಡೆದುಕೊಳ್ಳದೆ ಪ್ರಾಮಾಣಿಕವಾಗಿ ಇಂತಹ ಎಡೆಗಳಲ್ಲಿ ಪ್ರಶ್ನೆ ಚಿಹ್ನೆ ಹಾಕಿ, ಅರ್ಥ ತಿಳಿದಿಲ್ಲವೆಂದು ಸ್ಪಷ್ಟಪಡಿಸಿರುವುದು ಮೆಚ್ಚತಕ್ಕುದಾಗಿದೆ.

**--ಆರ್. ವಿ. ಕುಲಕರಣಿ**

(ರಾಕು), ಅಧ್ಯಕ್ಷರು, ಅನುವಾದಕ ಮಂಡಲಿ.

3. ಪುನರ್ ಮುದ್ರಣವಾಗದೆ ಇದ್ದ ಈ ಕಾವ್ಯವನ್ನು ಸಂಪಾದಿಸಿ, ಸರಳಗನ್ನಡ ಅನುವಾದ ನೀಡಿ, ಸುದೀರ್ಘ ಪೀಠಿಕೆಯನ್ನು ಬರೆದು ಉಪಕರಿಸಿದ್ದಾರೆ. ಸರಳ ಸುಂದರ ಗದ್ಯಾನುವಾದ ಶ್ರೀಸಾಮಾನ್ಯನಿಗೆ ಉಪಯುಕ್ತವಾದರೆ, ಸುದೀರ್ಘ ಪೀಠಿಕೆ ಹಳೆಗನ್ನಡ ಕಾವ್ಯಭ್ಯಾಸಿಗಳಿಗೆ ಮತ್ತು ಸಂಶೋಧಕರಿಗೆ ಅತ್ಯುಪಯುಕ್ತವಾಗಿದೆ. ಈ ಪೀಠಿಕೆಯೇ ಒಂದು ಪಿಎಚ್. ಡಿ. ನಿಬಂಧದಂತಿದೆ.* ಇಷ್ಟೊಂದು ಮಗ್ಗಲುಗಳಲ್ಲಿ ಪೊನ್ನಕವಿಯ ಬಗ್ಗೆ ವಿವೇಚಿಸಿರುವವರಲ್ಲಿ ಹಂಪನಾ ಮೊದಲಿಗರಾಗಿದ್ದಾರೆ*. ಈ ಪೀಠಿಕೆ ಕನ್ನಡ ಸಾಹಿತ್ಯ ಚರಿತ್ರೆಗೆ ಹಂಪನಾ ನೀಡಿದ ಮೌಲಿಕ ಕೊಡುಗೆಗಳಲ್ಲೊಂದು. ಪೊನ್ನಕವಿಯ ಕಾವ್ಯವನ್ನು ಅರ್ಥ ಮಾಡಿಕೊಳ್ಳಲು ಈ ಪೀಠಿಕೆ ಸಹಾಯಕವಾಗಿರುವಂತೆ ಮುಂದಿನ ಸಂಶೋಧಕರಿಗೆ ಹೊಸ ಆಲೋಚನೆಗೆ ಪ್ರಚೋದಕವೂ ಆಗಿದೆ. ಅನೇಕ ವರ್ಷಗಳ ಸತತ ಅಭ್ಯಾಸದ ಫಲವಾಗಿ ಮೂಡಿಬಂದ ಈ ಪೀಠಿಕೆ ಹಂಪನಾ ಅವರ ಆಳವಾದ ಪಾಂಡಿತ್ಯಕ್ಕೆ ದ್ಯೋತಕವಾಗಿದೆ.

**--ಡಾ. ಎಂ. ಎ. ಜಯಚಂದ್ರ**

4. ಶಾಂತಿಪುರಾಣದ ಪ್ರಸ್ತಾವನೆಯಲ್ಲಂತೂ ಅದರ ಎಲ್ಲ ಪಾರ್ಶ್ವಪದರುಗಳನ್ನು ಕುರಿತು ಮತ್ತು ಹೆಚ್ಚಿನ ಶ್ರದ್ಧೆ ಕಂಡು ಬರುತ್ತದೆ. ಆ ಯುಗದ ಧಾರ್ಮಿಕ ರಾಜಕೀಯ ಪರಿಸರ ಹಾಗೂ ಕಾವ್ಯಪರಂಪರೆಯ ಹಿನ್ನೆಲೆಯಲ್ಲಿ ಕೃತಿಗಳ ವಸ್ತು, ಕವಿಗಳ ಜೀವನ, ಮನೋಧರ್ಮ ಆಶಯಗಳನ್ನು ಪರಿಭಾವಿಸಿ ನಿರೂಪಿಸಿರುವುದು ಸಾರ್ಥಕವಾಗಿದೆ*. ಪೊನ್ನ ಮತ್ತು ಶಾಸ್ತ್ರಕೃತಿಗಳು, ಪೊನ್ನನ ಉಪಮೆ ಕುರಿತು 130 ಉದಾಹರಣೆಗಳು, ಪೊನ್ನ ಕಮಲಭವ, ಪೊನ್ನ ಮತ್ತು ಛಂದಸ್ಸು, ಪೊನ್ನ-ನಾಗವರ್ಮ, ಶಾಂತಿಪುರಾಣದಲ್ಲಿ ವ್ಯಕ್ತವಾದ ರಾಜನೀತಿ ಮೊದಲಾದವುಗಳ ವಿವರಣೆ-ನಿರೂಪಣೆಗಳಲ್ಲಿ ಸಂಪಾದಕರ ಅಗಾಧ ಪರಿಶ್ರಮ ವ್ಯಕ್ತವಾಗುತ್ತದೆ.

**--ಡಾ. ಎಸ್. ಎಸ್. ಕೋತಿನ**

## ಶಾಸನಗಳಲ್ಲಿ ಎರಡು ವಂಶಗಳು

**ಸಂಶೋಧನೆ : ಇತಿಹಾಸ**

| | | |
|---|---|---|
| ಡೆಮ್ಮೆ 1/8 ಆಕಾರ, ಪುಟಗಳು | : | 76 |
| ಪ್ರಥಮ ಮುದ್ರಣ | : | 1995 |
| ಪ್ರಕಾಶಕರು | : | ಕನ್ನಡ ಅಧ್ಯಯನ ವಿಭಾಗ,<br>ಮುಂಬಯಿ ವಿಶ್ವವಿದ್ಯಾನಿಲಯ,<br>ಮುಂಬಯಿ - 400 098 |

ಮುಂಬಯಿ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ವಿಭಾಗದಲ್ಲಿದಶಮಾನೋತ್ಸವ ದತ್ತಿ ಉಪನ್ಯಾಸವಾಗಿ- "ಶಾಸನಗಳಲ್ಲಿ ಎರಡು ವಂಶಗಳು" ಕುರಿತು ಲಿಖಿತ ಉಪನ್ಯಾಸ ಮಾಡಿದರು (ಜನವರಿ 27 ಮತ್ತು 28, 1995). ದಾನಚಿಂತಾಮಣಿ ಅತ್ತಿಮಬ್ಬೆಯ ಹಿರಿಯರು ಮತ್ತು ಅನಂತರದವರು, ಹುಳ್ಳಮಯ್ಯ, ರೇಚರಸ (ರೇಚಣ) ದಂಡನಾಯಕ, ಮಧುರಕವಿ ಮೊದಲಾದವರು ವಾಜಿವಂಶದವರು. ಆತಕೂರು ಶಾಸನದ ಸಗರಮಣಲೆಯರ, ಇಂದ್ರಕೇಸಿ, ಜಯಕೇಸಿ- ಮೊದಲಾದವರು ಮಣಲೆರ ವಂಶದವರು. ಕರ್ನಾಟಕದ ಸಾಂಸ್ಕೃತಿಕ ರಾಜಕೀಯ ಜೀವನದಲ್ಲಿ ವಾಜಿವಂಶ ಮತ್ತು ಮಣಲೆರ ವಂಶಗಳು ವಹಿಸಿದ ಚಾರಿತ್ರಿಕ ಮಹತ್ವದ ಪಾತ್ರವನ್ನು ನೂರಾರು ಶಾಸನಗಳ ಆಧಾರದಿಂದ ಸಾದರ ಪಡಿಸಿದೆ; ಈ ಎರಡು ವಂಶಗಳ ಚರಿತ್ರೆ ಪ್ರಮಾಣಾಧಾರಗಳಿಂದ ಹೀಗೆ ಹೊರಬರುತ್ತಿರುವುದು ಇದೇ ಮೊದಲು.

**ಅಭಿಪ್ರಾಯ**

1. ಇದೊಂದು ಸಂಶೋಧನಾ ಗ್ರಂಥ. ಚಾರಿತ್ರಿಕ ವಿಚಾರ ಇದರ ವಸ್ತು. ಡಾ. ಹಂಪನಾ ಅವರ ಪುಸ್ತಕಗಳಲ್ಲಿ ಸಾಮಾನ್ಯವಾಗಿ ಕಾಣುವ ವಿದ್ವತ್ತು, ನಿಷ್ಪಕ್ಷಪಾತ, ಸಮತೋಲ ವಿಮರ್ಶೆ ಈ ಕಿರುಗ್ರಂಥದಲ್ಲಿಯೂ ಎದ್ದು ಕಾಣುತ್ತದೆ. ಕನ್ನಡ ಶಾಸನಗಳನ್ನು ಆಧರಿಸಿ ವಾಜಿವಂಶ ಮತ್ತು ಸಗರ (ಮಣಲೆಯರು) ವಂಶಗಳ ಇತಿಹಾಸವನ್ನು ಆಧಾರ ಸಹಿತ ಕಟ್ಟಿಕೊಡುವ ಪುಸ್ತಕದ ಉದ್ದೇಶ ಸಫಲವಾಗಿದೆ. ವಿಚಾರ ಮಂಡನೆಯಲ್ಲಿ ಅಸ್ಪಷ್ಟತೆ ಇಲ್ಲ. ಈ ಬಗೆಯ ಅಧ್ಯಯನವನ್ನು ಉನ್ನತ ವ್ಯಾಸಂಗಕ್ಕೆ ಆರಿಸಿಕೊಳ್ಳಲು ಈ ಪುಸ್ತಕ ತೋರುದೀಪವಾಗಿದೆ.

**--ಡಾ. ಕೆ. ಗೋಕುಲನಾಥ**

ಪ್ರಜಾವಾಣಿ. 17.3.1996

2. ಬಹಳ ಶ್ರಮವಹಿಸಿ ಎರಡು ವಂಶಗಳ ಚರಿತ್ರೆಯನ್ನು ಇತರರಿಗೆ ಮಾದರಿಯಾಗುವ ರೀತಿಯಲ್ಲಿ ಬರೆದಿದ್ದೀರಿ.

**--ಪ್ರೊ. ಜೆ. ಎಸ್. ದೀಕ್ಷಿತ್**

3. ಶಾಸನಗಳಲ್ಲಿ ಎರಡು ವಂಶಗಳು ತುಂಬ ತುಂಬ ಕುತೂಹಲದ ಪುಸ್ತಕ. ಬಹಳ ಹೊಸ ವಿಷಯ ಹೇಳಿದ್ದೀರಿ. ವಾಜಿ ವಂಶದ ಬಗ್ಗೆ ನಿಮ್ಮ ತೀರ್ಮಾನಗಳೆಲ್ಲ ಸರಿ. ಮಣಲೆಯರು ಹೊಸ ನೋಟದ ಬರವಣಿಗೆ.

**--ಡಾ. ಎನ್. ಎಸ್. ತಾರಾನಾಥ**

4. ಶಾಸ್ತ್ರ ವಿಷಯವನ್ನು ಹೇಳಲು ಅತ್ಯಂತ ಸರಳ ಪಾರದರ್ಶಕ ಭಾಷೆಯನ್ನು ಬಳಸಿರುವುದರಿಂದ ಸುಲಭವಾಗಿ ಓದಿಸಿಕೊಂಡು ಹೋಗುತ್ತದೆ. ರಾಜನ ಅಡಿಯಲ್ಲಿ ಸೇವೆ ಸಲ್ಲಿಸುತ್ತಿದ್ದ ಅಂದಿನ ಸಾಮಾನ್ಯರ ಜೀವನದ ಬಗೆಗೆ ಮರು ಆಲೋಚನೆ ಮಾಡುವತ್ತ ಈ ಪುಸ್ತಕ ಮಾದರಿಯಾಗಿದೆ.

**-- ಕಲವೀರ,** 'ಪುಸ್ತಕಮಾಹಿತಿ', ಜುಲೈ 1995

5. ಕೃತಿಯು ಮುಖ್ಯವಾಗಿ ಶಾಸನಿಕ ಆಕರವನ್ನು ಅವಲಂಬಿಸಿರುವಂಥಾದ್ದು. ಗಂಭೀರಸ್ವರೂಪದ ಅಧ್ಯಯನಗಳಲ್ಲಿ ಬಳಕೆಗೊಳ್ಳುವ ಶಾಸನ ಪಾಠಗಳು ಇಲ್ಲಿ ಎರಡು ವಂಶಗಳ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಸಾಫಲ್ಯ ಪಡೆದಿವೆ.* ಪ್ರಸ್ತುತ ಕೃತಿ ಇಂಥಾ ಆಕರದಿಂದ ಸ್ಫುಟವಾಗಿರುವುದು ಸ್ಪಷ್ಟ** ಹಲವಾರು ಹೊಚ್ಚ ಹೊಸ ಸಂಗತಿಗಳನ್ನು ಈ ಕೃತಿಯ ಮೂಲಕ ಬೆಳಕಿಗೆ ತರಲಾಗಿರುವುದು ಇಲ್ಲಿಯ ವೈಶಿಷ್ಟ್ಯ.

**-- ಪ್ರೊ. ಲಕ್ಷ್ಮಣ ತೆಲಗಾವಿ,**

'ಪುಸ್ತಕ ಮಾಹಿತಿ' ಫೆ - ಮಾರ್ಚಿ 96

6. ಹಲವು ಕ್ಷೇತ್ರಗಳ ಪರಿಚಯ, ಶಾಸ್ತ್ರಗಳ ಅರಿವಿನಿಂದ ಅಂತರ ಶಾಸ್ತ್ರೀಯವಾಗಿ ಸಂಶೋಧನೆಯನ್ನು ಎಷ್ಟು ಫಲಪ್ರದವಾಗಿ, ಸಮಂಜಸವಾಗಿ, ಪ್ರಸ್ತುತವಾಗಿ ಮಾಡಬಲ್ಲರೆಂಬುದನ್ನು ಹಂಪ. ನಾಗರಾಜಯ್ಯನವರು ಈ ಪುಸ್ತಿಕೆಯಲ್ಲಿ ತೋರಿಸಿ ಕೊಟ್ಟಿದ್ದಾರೆ. ಈಚೆಗೆ ತುಸು ವಿರಳವಾಗುತ್ತಿರುವ ಗಂಭೀರ ಶಾಸನಾಧ್ಯಯನಾಸಕ್ತಿಯನ್ನು ಕೆರಳಿಸುವಲ್ಲಿ ಈ ಕೃತಿ ಯಶಸ್ವಿಯಾಗಿದೆಯೆಂದು ನನಗನಿಸುತ್ತದೆ.

**--ಡಾ. ಎಚ್. ಆರ್. ರಘುನಾಥ ಭಟ್**

'ಬರಹ- ಬಾಗಿನ'ದಿಂದ (1996)

# ಶಾಸನಗಳಲ್ಲಿ ಬಸದಿಗಳು

**ಸಂಶೋಧನೆ : ಇತಿಹಾಸ**

| | | |
|---|---|---|
| ಡೆಮ್ಮಿ 1/8 ಆಕಾರ, ಪುಟಗಳು | : | xii+viii+32 |
| ಪ್ರಥಮ ಮುದ್ರಣ | : | 1998 |
| ಪ್ರಕಾಶಕರು | : | ರತ್ನತ್ರಯ ಪ್ರಕಾಶನ<br>ಮೈಸೂರು. |

ಕರ್ನಾಟಕ ಜಿನ ಚೈತ್ಯಾಲಯಗಳ ಆಗರ. ಕಳೆದ 1600 ವರ್ಷಗಳಿಂದ ಈ ಕನ್ನಡ ನಾಡಿನ ಉದ್ದಗಲಗಳಲ್ಲಿ ಅರ್ಹದಾಯತನಗಳು ಸಾವಿರಾರು ಸಂಖ್ಯೆಯಲ್ಲಿ ಕಂಡು ಬಂದಿವೆ. ಸಾಮಾನ್ಯ ಪ್ರಜೆಯಿಂದ ಹಿಡಿದು ರಾಜಮಹಾರಾಜರವರೆಗೆ ಸಾವಿರಾರು ಜಿನಭಕ್ತರು ಮರದಲ್ಲಿ ಇಟ್ಟಿಗೆಯಲ್ಲಿ ಕಲ್ಲಿನಲ್ಲಿ ಬಸದಿಗಳನ್ನು ಕಟ್ಟಿಸಿ ಕೈ ಮುಗಿದಿದ್ದಾರೆ. ಬಸದಿಗಳು ಕೇವಲ ಭಕ್ತಿಯ ಗೋಡೆಗಳಲ್ಲ. ಅವು ಸಾವಿರಾರು ವರ್ಷಗಳ ಭವ್ಯ ಪರಂಪರೆಯ ಅಮೃತಧಾರೆಯ ಪ್ರತೀಕ, ಚೈತನ್ಯಮಯಿ ಸಂಸ್ಕೃತಿಯ ಕೇಂದ್ರ... ಧರ್ಮ, ಇತಿಹಾಸ, ವಾಸ್ತು-ಶಿಲ್ಪಕತೆ ಮುಪ್ಪುರಿಗೊಂಡ ನಿಲ್ದಾಣ. ಶಾಸನಗಳು ಒದಗಿಸಿರುವ ಚಾರಿತ್ರಿಕ ಆಧಾರದಿಂದ ಸಿದ್ಧವಾಗಿರುವ ಈ ಪುಸ್ತಕ ದೀರ್ಘಕಾಲಿಕ ಗಂಭೀರ ಅಧ್ಯಯನದ ಫಲ.

ಸಂ.

# ಶಿರಸಿ ಸಾಹಿತ್ಯ ಸಮ್ಮೇಳನ

**ಪ್ರಧಾನ ಸಂಪಾದಕರು**

| | | |
|---|---|---|
| ಡೆಮ್ಮಿ 1/8 ಆಕಾರ, ಪುಟಗಳು | : | 512+16+xii |
| ಪ್ರಥಮ ಮುದ್ರಣ | : | 1982 |
| ಪ್ರಕಾಶಕರು | : | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-18. |

1982ರ ಡಿಸೆಂಬರ್ 23 ರಿಂದ 26ರ ವರೆಗೆ ನಾಲ್ಕು ದಿನಗಳು ಉತ್ತರ ಕನ್ನಡ ಜಿಲ್ಲೆಯ ಮಹಾನಗರವಾದ ಶಿರಸಿಯಲ್ಲಿ ನಡೆದ ಅಖಿಲ ಭಾರತ 55 ನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಏರ್ಪಾಟಾಗಿದ್ದ ಎಲ್ಲ ಗೋಷ್ಠಿಗಳ ಪ್ರಬಂಧ ಹಾಗೂ ಕವಿತೆಗಳನ್ನೂ ಕೆಲವು ಪ್ರಾತಿನಿಧಿಕ ಚಿತ್ರಗಳನ್ನೂ ಒಳಗೊಂಡ ಸಂಕಲನ ಗ್ರಂಥ. ಈ ಸಮ್ಮೇಳನದ ಅಧ್ಯಕ್ಷರಾಗಿದ್ದವರು ಗೊರೂರು ರಾಮಸ್ವಾಮಿ ಅಯ್ಯಂಗಾರ್. ಈ ಸಮ್ಮೇಳನದಲ್ಲಿ ಎರಡು ಸಾಹಿತ್ಯಗೋಷ್ಠಿಗಳೂ (ನವೋದಯ ಮತ್ತು ದಲಿತ- ಬಂಡಾಯ- ಪ್ರಗತಿಶೀಲ), ನಾಟಕಗೋಷ್ಠಿ, ಜಾನಪದಗೋಷ್ಠಿ, ಕವಿಗೋಷ್ಠಿ, ಪ್ರತಿಕಾ ಸಾಹಿತ್ಯಗೋಷ್ಠಿ, ಭಾಷಾ ಬಾಂಧವ್ಯಗೋಷ್ಠಿ- ಇವು ಏರ್ಪಾಟಾಗಿದ್ದುವು.

**ಅಭಿಪ್ರಾಯ:**

ಇದು ಮತ್ತೊಂದು ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಕಾರ್ಯ ಕಲಾಪಗಳನ್ನು ಕನ್ನಡಿಸುವ ಕೃತಿ; ಈ ಗ್ರಂಥ ಕೂಡ ಆಕರ್ಷಕವಾಗಿದೆ. ಈ ಗ್ರಂಥವು ಹಿಂದಿನವುಗಳಿಗಿಂತ ಗಾತ್ರದಲ್ಲಿ ದೊಡ್ಡದಾಗಿದೆ.* ಹಲವು ಬಗೆಯ ವಿಷಯ ವಿವಿಧ್ಯ ಹಾಗೂ ವಿವಿಧ ವೈಚಾರಿಕ ಪಾತ್ರಗಳನ್ನುಳ್ಳ ಸಂಗತಿಗಳನ್ನು ವರ್ಷದಿಂದ ವರ್ಷಕ್ಕೆ , ಹೊಸತನವನ್ನು ತುಂಬಿಕೊಳ್ಳುವಂತೆ ಆಯ್ಕೆಮಾಡುವುದು, ಆಯ್ದ ವಿಷಯಗಳನ್ನು ಸಮರ್ಥವಾಗಿ ವಿವೇಚಿಸಬಲ್ಲಂತಹ ಸಾಹಿತಿಗಳನ್ನು ಗುರುತಿಸಿ, ಅವರನ್ನು ಒಪ್ಪಿಸಿ, ಪ್ರಬಂಧಗಳನ್ನು ಬರೆಸಿ, ಅವುಗಳನ್ನು ವ್ಯವಸ್ಥಿತವಾಗಿ ಮಂಡಿಸಲು ತಕ್ಕ ವ್ಯವಸ್ಥೆ ಮಾಡುವುದು ಹಾಗೂ ಇವುಗಳನ್ನೆಲ್ಲ ಕೇಳಿ ಮೆಚ್ಚಬಲ್ಲಂತಹ ಸಭಿಕರನ್ನು ಸಮ್ಮೇಳನದಿಂದ ಸಮ್ಮೇಳನಕ್ಕೆ ಹೆಚ್ಚಿಸಿಕೊಳ್ಳುತ್ತ ಹೋಗುವುದು- ಇದೆಲ್ಲ ನಾವು ಭಾವಿಸುವಷ್ಟು ಸಾಧಾರಣ ಸಂಗತಿಯಲ್ಲ. ಇಂಥ ಜಟಿಲಕಾರ್ಯದಲ್ಲಿ ತೊಡಗಿ ಯಶಸ್ಸನ್ನು ಪಡೆಯುವ ಗುಟ್ಟು ಹಂಪನಾ ಅವರಿಗೆ ಸಿದ್ಧಿಸಿದಂತೆ ಅನ್ಯರಿಗೆ ಸಿದ್ಧಿಸುವುದು ವಿರಳ. ಈ ದೃಷ್ಟಿಯಿಂದ ಹಂಪನಾ ಅದೃಷ್ಟವಂತರು, ಅವರನ್ನು ಪರಿಷತ್ತಿನ ಅಧ್ಯಕ್ಷರನ್ನಾಗಿ ಪಡೆದಿದ್ದ ನಾವೂ ಪುಣ್ಯವಂತರೆ.

**--ಡಾ. ನಂ. ತಪಸ್ವೀಕುಮಾರ್**

## ಶಾಸನಗಳಲ್ಲಿ ಜೈನ ತೀರ್ಥಗಳು

**ಸಂಶೋಧನೆ**

| | | |
|---|---|---|
| ಕ್ರೌನ್ 1/4 ಆಕಾರ, ಪುಟಗಳು | : | 76 |
| ಪ್ರಥಮ ಮುದ್ರಣ | : | 1998 |
| ಪ್ರಕಾಶಕರು | : | ಪಂಡಿತರತ್ನ ಎ. ಶಾಂತಿರಾಜ ಶಾಸ್ತ್ರಿ ಟ್ರಸ್ಟ್ ಬೆಂಗಳೂರು |

ಕರ್ನಾಟಕ ಎರಡೂವರೆ ಸಾವಿರ ವರ್ಷಗಳಿಂದ ಜಿನಧರ್ಮದ ತವರು ಮನೆ. ನಾಡಿನ ಉದ್ದಗಲಗಳಲ್ಲಿ ಜಿನ ಧರ್ಮದ ಹೆಜ್ಜೆ ಗುರುತುಗಳಿವೆ. ಉಪಲಬ್ಧ ಮೂರು ಸಾವಿರ ಶಾಸನಗಳು ಈ ನಿರ್ಗ್ರಂಥ ಧರ್ಮದ ಗಾಢ ಪ್ರಭಾವವನ್ನು ಗರ್ಭೀಕರಿಸಿವೆ. ಪ್ರಸ್ತುತ ಗ್ರಂಥದಲ್ಲಿ ಶಾಸನಗಳಲ್ಲಿ ಸಿಗುವ ಜೈನತೀರ್ಥಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ. ಇದನ್ನು ಅಕಾರಾದಿಯಾಗಿ ಸಂಯೋಜಿಸಿರುವುದರಿಂದ ಆಯಾ ತೀರ್ಥಕ್ಷೇತ್ರವನ್ನು ಸುಲಭವಾಗಿ ಗುರುತಿಸಬಹುದು. ಒಟ್ಟು 52 ತೀರ್ಥಗಳನ್ನು ಈ ಪುಟ್ಟ ಪುಸ್ತಕದಲ್ಲಿ ಪರಿಚಯಿಸಿದೆ. ಈ ವಿಷಯ ಕುರಿತ ಪುಸ್ತಕ ಕನ್ನಡದಲ್ಲಿ ಇದೊಂದೇ ಎಂಬುದು ಇದರ ವಿಶೇಷತೆಯನ್ನು ಬಿಂಬಿಸುತ್ತದೆ. 'ಶಾಸನಗಳಲ್ಲಿ ಬಸದಿಗಳು' ಎಂಬ ಇದೇ ಲೇಖಕರ ಇನ್ನೊಂದು ಪುಸ್ತಕ ಈ ವಿಷಯಕ್ಕೆ ಪೂರಕವಾಗಿದೆ.

ಅಜ್ಞಾತ ಜೈನ ತೀರ್ಥಗಳ ಬಗ್ಗೆಯೂ ನಿಮ್ಮ ಚಿಕ್ಕ ಪುಸ್ತಕ ಶಾಸನಗಳಲ್ಲಿ ಜೈನತೀರ್ಥಗಳು ಉತ್ತಮ ಮಾಹಿತಿಯನ್ನೊದಗಿಸುತ್ತದೆ ಒಂದು ರೀತಿಯಿಂದ ready reckonersದಂತೆ ಉಪಯುಕ್ತವಾಗಿದೆ. ಅಭಿನಂದನೆಗಳು.

**ಡಾ. ಶ್ರೀನಿವಾಸರಿತ್ತಿ**

ಹಂಪನಾ ಅವರ ಪುಸ್ತಕ ಸಂಶೋಧಕರಿಗೆ, ಜನಸಾಮಾನ್ಯರಿಗೆ ಅತ್ಯಂತ ಉಪಯುಕ್ತ.

**ಡಾ. ಜಿ. ಎಸ್. ದೀಕ್ಷಿತ್**

## ಸಮ್ಮೇಳನಾಧ್ಯಕ್ಷರುಗಳು

**ಬದುಕು - ಬರೆಹ ಪರಿಚಯ**

| | | |
|---|---|---|
| ಡೆಮ್ಮೆ 1/4 ಆಕಾರ, ಪುಟಗಳು | : | 328+xiv |
| ಪ್ರಥಮ ಮುದ್ರಣ | : | 1983 (ಐದು ಸಾವಿರ ಪ್ರತಿಗಳು) |
| ಪ್ರಕಾಶಕರು | : | ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು-2 |

ಕನ್ನಡ ನಾಡಿನಲ್ಲಿ ಸಾಹಿತ್ಯ ಸಂಸ್ಕೃತಿಗಳ ಕ್ಷೇತ್ರದಲ್ಲಿ ಪ್ರಾತಿನಿಧಿಕ ಮಹಾಸಂಸ್ಥೆಯಾದ, 82 ವರ್ಷಗಳ ಇತಿಹಾಸವಿರುವ ಕನ್ನಡ ಸಾಹಿತ್ಯ ಪರಿಷತ್ತಿನ ಪ್ರತಿವರ್ಷದ ದೊಡ್ಡ ಕಾರ್ಯಕ್ರಮವೆಂದರೆ 'ಕನ್ನಡ ಸಾಹಿತ್ಯ ಸಮ್ಮೇಳನ'. ಕರ್ನಾಟಕದ ಬೇರೆ ಬೇರೆ ಸ್ಥಳಗಳಲ್ಲಿ ನಡೆಯುವ ಈ ವಾರ್ಷಿಕ ಮಹಾಧಿವೇಶನದ ಅಧ್ಯಕ್ಷರಾಗುವುದೆಂದರೆ ಅದೊಂದು ಶ್ರೇಷ್ಠ ಗೌರವ ಸಂದಂತೆ. ನಾಡು ನುಡಿಗಳಿಗೆ ಹೆಚ್ಚುಕಾಲ ಮೌಲಿಕವಾದ ಸೇವೆಯನ್ನು ಸಲ್ಲಿಸಿದ ಹಿರಿಯರೊಬ್ಬರನ್ನು ಅಧ್ಯಕ್ಷರನ್ನಾಗಿ ಆರಿಸಲಾಗುತ್ತದೆ. ಆ ರೀತಿ ಆರಿಸಲಾದ 55 ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷರನ್ನು ಈ ಪುಸ್ತಕದಲ್ಲಿ ಪರಿಚಯಿಸಿದೆ, ಅವರವರ ಅಧ್ಯಕ್ಷ ಭಾಷಣದಿಂದ ಆಯ್ದ ಕೆಲವು ಪ್ಯಾರಾಗಳನ್ನು ಉದ್ಧರಿಸಲಾಗಿದೆ. ಅಲ್ಲದೆ ಗ್ರಂಥಾಂತ್ಯದಲ್ಲಿ ಆಯಾ ಸಮ್ಮೇಳನಾಧ್ಯಕ್ಷರ ಕೃತಿಗಳ ಪಟ್ಟಿಯನ್ನೂ ಸಹ ಕೊಡಲಾಗಿದೆ. ಇದೊಂದು ಆಕರ ಗ್ರಂಥ.

**ಅಭಿಪ್ರಾಯಗಳು:**

1. 'ಸಮ್ಮೇಳನಾಧ್ಯಕ್ಷರು' ಕೃತಿ ನಾಡಿನ ಕನ್ನಡ ಕುಲಕ್ಕೆ, ಕನ್ನಡ ನುಡಿ, ಕನ್ನಡ ಸಾಹಿತ್ಯವನ್ನು ಕುರಿತು ಇಂದಿನವರು, ಹಿಂದಿನವರು ಮಾಡಿದ ಚಿಂತನ ಮಂಥನವಲ್ಲದೆ, ಸಾಹಿತ್ಯ ಕೃಷಿಯ ನಿಚ್ಚಳ ಕಲ್ಪನೆ ಮೂಡಿಸುವ ಒಂದು ಸಫಲಗ್ರಂಥ. ಹಂಪ ನಾಗರಾಜಯ್ಯನವರು ಕ. ಸಾ. ಪ. ಗೆ ಹಲವಾರು ಒಳಿತನ್ನು ಮಾಡಿದರಾದರೂ ಒಬ್ಬ ಲೇಖಕರನಾಗಿ ಮಾಡಿದ ಈ ಕೆಲಸ ಸದಾ ಸ್ಮರಣೀಯ. ಹಲವಾರು ಸಮ್ಮೇಳನಗಳನ್ನು ನಡೆಯಿಸಿಕೊಂಡು ಬಂದ ವ್ಯಾಪಕ ಅನುಭವ ಅವರಿಗಿರುವುದರಿಂದ ಇಂಥ ಕೃತಿಯನ್ನು ಸಮರ್ಥವಾಗಿ ರಚಿಸಲು ಸಾಧ್ಯವಾಗಿದೆ*. ಈ ಸಮ್ಮೇಳನಾಧ್ಯಕ್ಷರು ಕೃತಿಯನ್ನು ರಚಿಸಿ, ಸಾಹಿತ್ಯಸಮ್ಮೇಳನಗಳ ಅನುಕ್ರಮವಾದ ಇತಿಹಾಸವನ್ನೇ ನಿರೂಪಿಸಿದ್ದಾರೆ. * ಸಾಮಾನ್ಯ ಓದುಗರಿಗೂ ತಿಳುವಳಿಕೆ ನೀಡುವ ಈ ಭಾಗ ಹಂಪನಾ ಅವರ ಗದ್ಯ ಶೈಲಿಯ ವೈಶಿಷ್ಟ್ಯಕ್ಕೊಂದು ಸಾಕ್ಷಿಯಾಗಿದೆ. ಅರಳು ಹುರಿದಂತೆ ಮಾತನಾಡಬಲ್ಲ ಹಂಪನಾ ಅವರು ಹೂ ಅರಳಿದಂತೆ ಗದ್ಯ ಬರೆಯಬಲ್ಲರು ಎಂಬುದಕ್ಕೆ ಈ

ಕೃತಿ ನಿದರ್ಶನವಾಗಿದೆ.

ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಕಂಡರಿಸಿದ ವ್ಯಕ್ತಿಚಿತ್ರ, ಶುದ್ಧವಾಸ್ತವ ಬದುಕಿನ ನೇರ ದರ್ಶನ ಓದುಗರಿಗೆ ನಿರಾಯಾಸವಾಗಿ ಸಿಕ್ಕುವಂತಾಗಿದೆ* ಸಿದ್ಧಪಡಿಸಿಟ್ಟ ಆಕರ ಗ್ರಂಥವಾಗಿದೆ.

**--ಡಾ. ಎಂ. ಜಿ. ಬಿರಾದಾರ**

2. ಸಮ್ಮೇಳನಾಧ್ಯಕ್ಷರುಗಳು ಸಾಹಿತ್ಯ ಪರಿಷತ್ತಿನ ಕಾರ್ಯ ಚಟುವಟಿಕೆಗಳ ಬಗ್ಗೆ ಹಾಗೂ ಪರಿಷತ್ತು ಮುಂದೆ ಕೈಗೊಳ್ಳಬಹುದಾದ ಯೋಜನೆಗಳ ಬಗೆಗೆ ಸೂಕ್ಷ್ಮವಾಗಿ ನೀಡಿರುವ ಪ್ರೊ. ಹಂಪನಾ ಚಿಕ್ಕದಾಗಿ, ಚೊಕ್ಕವಾಗಿ ತಿಳಿಸಿ. ಈ ಪುಸ್ತಕವನ್ನು ಓದುವಾಗ ಪ್ರತಿಯೊಬ್ಬ ವ್ಯಕ್ತಿಯ ಚಿತ್ರಣ ಹಾಗೂ ಅವರ ಬದುಕಿನ ವೈಖರಿ, ಅವರಾಡಿರುವ ಮಾತುಗಳು ಮತ್ತು ಅನಿಸಿಕೆಗಳನ್ನು ಹದವರಿತು ಚಾರಿತ್ರಿಕ ಅಂಶಗಳಿಂದ ದಾಖಲಾಗಿಸಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಈ ಕೃತಿ ಕನ್ನಡದ ಕೆಲವೇ ಉತ್ತಮ ಜೀವನ ಚರಿತ್ರೆಗಳ ಸಾಲಿನಲ್ಲಿ ನಿಲ್ಲುತ್ತದೆ.

**-- ಸಿ. ಹನುಮಂತರಾಯಪ್ಪ**

# ಶ್ರೀ ಶಂಭವಸಾಗರ ಮಹಾರಾಜರ ಜೀವನ ಚರಿತೆ

**ಪ್ರವಾಸ ಕಥನ**

| | | |
|---|---|---|
| ಕ್ರೌನ್1/8 ಆಕಾರ, ಪುಟಗಳು | : | 82+vii |
| ಪ್ರಥಮ ಮುದ್ರಣ | : | 1968 |
| ಪ್ರಕಾಶಕರು | : | ಶ್ರೀ ಪಚ್ಚಣ್ಣ ಅವರ ಧರ್ಮಪತ್ನಿ ರತ್ನಮ್ಮ ಗೌರೀಬಿದನೂರು |

ಇದು ನಿರ್ಗ್ರಂಥ ಮುನಿಪರಂಪರೆಗೆ ಸೇರಿದ ಶ್ರೀ 108 ಶಂಭವ ಸಾಗರ ಮುನಿಗಳ ಜೀವನ ಚರಿತ್ರೆ, ಮತ್ತು ಮುಖ್ಯವಾಗಿ ತೀರ್ಥಕ್ಷೇತ್ರಗಳಿಗೆ ಅವರು ಕೈಗೊಂಡ ತೀರ್ಥಯಾತ್ರೆಯ ದಿನಚರಿ- ಪ್ರವಾಸ ಕಥನ ಈ ಪುಸ್ತಕದಲ್ಲಿದೆ. ಅವರ ಪ್ರವಚನದ ಸಂಗ್ರಹವೂ ಸಿಗುತ್ತದೆ. ಜೈನ ಮುನಿಯ ವ್ಯಕ್ತಿತ್ವ ಕುರಿತು ಪೂರ್ವಾಚಾರ್ಯರು ಕೊಟ್ಟಿರುವ ಲಕ್ಷಣ ಮತ್ತು ಅದಕ್ಕೆ ಲಕ್ಷ್ಯವಾಗಿರುವ ಜಿನಮುನಿಯ ಜೀವನ- ಎರಡೂ ಒಟ್ಟಿಗೆ ಸಿಗುತ್ತವೆ.

**ಅಭಿಪ್ರಾಯ:**

ಆಕಾರದಲ್ಲಿ ಚಿಕ್ಕ ಕೃತಿಯಾದರೂ ಇದು ಅನೇಕ ಅಂಶಗಳಿಂದ ಮಹತ್ವವನ್ನು ಒಳಗೊಂಡಿರುವುದನ್ನು ಕಾಣಬಹುದು. * ಜಿನಮಂದಿರ ಜಿನಬಿಂಬಗಳ ವಿವರ, ಶ್ರಾವಕರ ಮನೆಗಳು, ವಿಹಾರದಲ್ಲಿದ್ದ ಹಿರಿಯ ಮುನಿಗಳ ದರ್ಶನ, ಧರ್ಮೋಪದೇಶ ಆಲಿಸುವ ಅವಕಾಶ, ಕೇಶಲೋಚನ ಸಮಾರಂಭ- ಈ ವಿವರವೆಲ್ಲ ಸಂಕ್ಷೇಪವಾಗಿ ಮೂಡಿ ನಿಂತಿದೆ* ಜೈನಯತಿಯ ವ್ಯಕ್ತಿತ್ವ ಭಾಗದಲ್ಲಿ ಹಂಪ. ನಾಗರಾಜಯ್ಯ ಅವರ ವಿಪುಲ ವ್ಯಾಸಂಗವನ್ನೂ, ಅದನ್ನು ನಿರೂಪಿಸುವಲ್ಲಿ ಅವರು ತೋರುವ ಔಚಿತ್ಯವನ್ನೂ ಮನಗಾಣಬಹುದು. ಜೈನಯತಿಯ ಸದ್ಗುಣಗಳ ಬಗ್ಗೆ ಮೂಲದ ಸಂಸ್ಕೃತ ಶ್ಲೋಕಗಳನ್ನು ಸರಳ ಶುದ್ಧ ಲಲಿತವಾದ ಕನ್ನಡದಲ್ಲಿ ನೀಡಿದುದು ತುಂಬ ಉಪಯುಕ್ತ ಅಂಶವಾಗಿದೆ, ಕೃತಿಯ ಬೆಲೆಯನ್ನು ಹೆಚ್ಚಿಸಿದೆ** ಈ ಜೀವನ ಚರಿತೆ ಊರ್ಧ್ವಗಾಮಿ ಚೇತನದ ಚರಿತ್ರವಾಗಿದೆ, ಸ್ತುತ್ಯ ಉಪಕ್ರಮವಾಗಿದೆ.

**-- ಡಾ. ಎಸ್. ಪಿ. ಪಾಟೀಲ**

## ಸಂಸ್ಕೃತಿ ಐಸಿರಿ

ನಾಡು ನುಡಿ ಸಮೀಕ್ಷೆ

| | | |
|---|---|---|
| ರಾಯಲ್ 1/4 ಆಕಾರ, ಪುಟಗಳು | : | 52+56 (ವರ್ಣಚಿತ್ರಗಳು) |
| ಪ್ರಥಮ ಮುದ್ರಣ | : | 2003 |
| ಪ್ರತಿಗಳು | : | 1000 |
| ಪ್ರಕಾಶಕರು | : | ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು. |

"ಕನ್ನಡ ನಾಡು ಭದ್ರವಾದ ಸಾಂಸ್ಕೃತಿಕ ವೈಭವದ ತಳಹದಿಯ ಮೇಲೆ ನಿಂತಿದೆ ಹಾಗೂ ಭವ್ಯ ಪರಂಪರೆಯನ್ನು ನಿರ್ಮಿಸಿದೆ. ಕರ್ನಾಟಕದ ನಿಸರ್ಗಸಂಪತ್ತು ಶಿಲ್ಪಕಲಾ ವೈಭವ, ಧರ್ಮನಿರಪೇಕ್ಷತೆ, ಸಂಗೀತ-ಸಾಹಿತ್ಯದ ಶ್ರೀಮಂತಿಕೆ ಕನ್ನಡ ನಾಡನ್ನು ಸಾಂಸ್ಕೃತಿಕ ಕೋಶವನ್ನಾಗಿಯೂ, ವಿದ್ವತ್ತಿನ ನಾಡಾಗಿಯೂ ಬೆಳೆಸಿದೆ; ಈ ನಾಡಿನ ಇತಿಹಾಸವನ್ನು ಔನ್ನತ್ಯಕ್ಕೇರಿಸಿದೆ.

ಕರ್ನಾಟಕದ ಸಾಂಸ್ಕೃತಿಕ ಹಂದರವನ್ನು ರೂಪಿಸಿದ, ಕರ್ನಾಟಕವನ್ನು ಕಟ್ಟಿದ ಲೋಕಮಾನ್ಯರು ಹಲವರು. ಕರ್ನಾಟಕದ ಇತಿಹಾಸ ಸುದೀರ್ಘವಾದದ್ದು. ಕರ್ನಾಟಕವನ್ನು ಆಳಿದ ಅನೇಕ ರಾಜವಂಶಗಳು ಅವರ ಆಳ್ವಿಕೆಯು ಕರ್ನಾಟಕದ ರಾಜಕೀಯ ಹಾಗೂ ಸಾಂಸ್ಕೃತಿಕ ಇತಿಹಾಸದ ಸುವರ್ಣ ಅಧ್ಯಾಯಗಳು.

ಈ ಚೆಲುವ ಕನ್ನಡ ನಾಡಿನ ಶ್ರೀಮಂತ ಸಾಂಸ್ಕೃತಿಕ ಪರಂಪರೆಯ ಸ್ಥೂಲ ಪರಿಚಯವನ್ನು ವಿಶ್ವದ ಜನತೆಗೆ ಪರಿಚಯಿಸುವ ಅಗತ್ಯವನ್ನು ಮನಗಂಡು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು 'ಸಂಸ್ಕೃತಿ ಐಸಿರಿ' ಎಂಬ ಕರ್ನಾಟಕದ ಹಿರಿಮೆ-ಗರಿಮೆಗಳನ್ನು ಪರಿಚಯಿಸುವ ಪುಸ್ತಕವನ್ನು ಸಚಿತ್ರವಾಗಿ ಹೊರತಂದಿದೆ.

ಈ ಕೃತಿಯನ್ನು ಶಬ್ದಚಿತ್ರಗಳಲ್ಲಿ ಸೆರೆಹಿಡಿದವರು ಡಾ. ಹಂಪ ನಾಗರಾಜಯ್ಯ. ಇವರು ತೋರಿದ ಆಸಕ್ತಿ, ವಹಿಸಿದ ಶ್ರಮ ಅನನ್ಯ. ಅವರಿಗೆ ನನ್ನ ವಂದನೆಗಳು".

**ವೈ.ಕೆ. ಮುದ್ದುಕೃಷ್ಣ**
ನಿರ್ದೇಶಕರು

**ಅಭಿಪ್ರಾಯ :**

ಕನ್ನಡ ಸಂಸ್ಕೃತಿಲೋಕದ ಸರ್ವವನ್ನೂ ಸಂಕ್ಷಿಪ್ತವಾಗಿ ಪರಿಚಯಿಸುವ ಹಂಪನಾ ಶ್ರಮವೇ 'ಕನ್ನಡ ಐಸಿರಿ' ಕೃತಿರೂಪ ತಳೆದಿದೆ. ಇತಿಹಾಸ, ಸಾಹಿತ್ಯ, ಚಿತ್ರಕಲೆ, ವಾಸ್ತುಶಿಲ್ಪ, ರಂಗಭೂಮಿ, ಸ್ವಾತಂತ್ರ್ಯ ಹೋರಾಟ, ಸ್ವಾತಂತ್ರ್ಯೋತ್ತರ ಬದುಕು, ಆಧುನಿಕ ಕರ್ನಾಟಕ ರಾಜ್ಯ, ಅಭಿವೃದ್ಧಿ, ಕನಸು ಹೀಗೆ ಎಲ್ಲವನ್ನೂ ಅಂಗೈನೆಲ್ಲಿಯಾಗಿ ಮಾಡಿದ್ದಾರೆ. ಕನ್ನಡವೆಂದರೆ ಕೇವಲ ಭಾಷೆಯಲ್ಲ; ಅದೊಂದು ಬದುಕು. ಅಂತಹ ಬದುಕಿಗೆ ಒಂದು ಉತ್ತಮ ಪ್ರವೇಶಿಕೆ ಇದಾಗಿದೆ. ಈ ಕೃತಿ ಕನ್ನಡೇತರ ಭಾಷೆಗಳಲ್ಲಿ ಪ್ರಕಟವಾಗಿದ್ದರೆ, ಕನ್ನಡದ, ಕರ್ನಾಟಕದ ಬಗ್ಗೆ ತಿಳಿಯಬಯಸುವವರಿಗೆ ಒಂದು ದಿಕ್ಸೂಚಿಯಾಗುತ್ತಿತ್ತು. ಈ ನಿಟ್ಟಿನಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಯೋಚಿಸಬೇಕಾಗಿದೆ.

**ಬಿ.ಆರ್. ಸತ್ಯನಾರಾಯಣ**

## ಸದಾಶಿವರ ಹನ್ನೆರಡು ಕಥೆಗಳು

**ಸಂಪಾದಕರು**

| | | |
|---|---|---|
| ಕ್ರೌನ್ 1/8 ಆಕಾರ, ಪುಟಗಳು | : | 192+6 |
| ಪ್ರಥಮ ಮುದ್ರಣ | : | 1985 |
| ಪ್ರಕಾಶಕರು | : | ಕನ್ನಡ - ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು-2 |

ಹೊಸಗನ್ನಡ ಕಥಾ ಸಾಹಿತ್ಯ ಪ್ರಕಾರದಲ್ಲಿ ಸ್ವಾತಂತ್ರ್ಯೋತ್ತರ ಮೊದಲನೆಯ ದಶಕದ ಪ್ರಮುಖ ಕಥೆಗಾರರಲ್ಲಿ ಒಬ್ಬರಾದ ಸದಾಶಿವರ 12 ಪ್ರಾತಿನಿಧಿಕ ಕಥೆಗಳನ್ನು ಆಯ್ದು, ಪ್ರಥಮ ವಿಶ್ವಕನ್ನಡ ಸಮ್ಮೇಳನದ ಸಂದರ್ಭಕ್ಕೆ ಸಿದ್ಧಪಡಿಸಿದ ಸಂಕಲನಗ್ರಂಥ. ಇದರಲ್ಲಿ ಸೇರಿರುವ ಕಥೆಗಳು: ನೆಲ ಕೊಟ್ಟ ಕೆಂಪು, ರಾಮನ ಸವಾರಿ ಮಣ್ಣಿಲ್ಲ, ಹಾಲು, ನಲ್ಲಿಯಲ್ಲಿ ನೀರು ಬಂದಿತು, ಮತ್ತೆ ಮಳೆ ಹೊಯ್ಯುತಿದೆ ಎಲ್ಲನೆನಪಾಗುತಿದೆ, ಜಾನಿ ಮೆಟ್ಟಲು ಹತ್ತಿದಳು, ಹೆಳವನ ಹೆಗಲಮೇಲೆ ಕುರುಡಕೂತಿದ್ದಾನೆ, ಗಿಡ್ಡಿ ನೆರಳು ಬೆಳಕಿನಾಟದಲ್ಲಿ ಕಂಡದ್ದೇನು? ಮತ್ತು ಹಗಲು- ರಾತ್ರಿ, ಮುಂತಾದ ಕಥೆಗಳಿವೆ.

**ಅಭಿಪ್ರಾಯ:**

ಸದಾಶಿವರ ಪ್ರಾತಿನಿಧಿಕ ಎನ್ನಬಹುದಾದ ಕಥೆಗಳು ಇಲ್ಲಿವೆ* ಸದಾಶಿವರ ಅನುಭವದ ವಿಸ್ತಾರ, ಬರವಣಿಗೆಯ ವೈವಿಧ್ಯ ಕಂಡು ಬರುತ್ತದೆ. * ಆ ಕಾರಣಕ್ಕಾಗಿ ಹಂಪನಾ ಅಭಿನಂದನೀಯರು.

**-- ಕೆ. ಎಂ. ಮುನಿಕೃಷ್ಣಪ್ಪ**

# ಸವ್ಯಸಾಚಿ ಪಂಪ

**ಚಾರಿತ್ರಿಕ ಕಾದಂಬರಿ**

| | | |
|---|---|---|
| ಕ್ರೌನ್ 1/8 ಆಕಾರ, ಪುಟಗಳು | : | 202+vii |
| ಪ್ರಥಮ ಮುದ್ರಣ | : | 1976 |
| | | ವಿವೇಕೋದಯ ಗ್ರಂಥಮಾಲೆ, |
| | | ಸುರೇಶ್ ಜೈನ್, ಗುಡಿಬಂಡೆ. |
| ದ್ವಿತೀಯ ಮುದ್ರಣ | : | 1981, ಡೆಮ್ಮಿ 1/8 ಆಕಾರ, ಪುಟಗಳು -172. |
| ತೃತೀಯ ಮುದ್ರಣ | : | 1985, ವರ್ಧಮಾನ ಪ್ರಕಾಶನ, ಬೆಂಗಳೂರು |
| ಚತುರ್ಥ ಮುದ್ರಣ | : | 1994, ವಿದ್ಯಾನಿಧಿ ಪ್ರಕಾಶನ, ಗದಗ. |

ಕನ್ನಡ ಸಾಹಿತ್ಯದ ಏಕಮೇವಾದ್ವಿತೀಯನೆನಿಸಿದ ಮಹಾಕವಿ ಪಂಪನ ಜೀವನವನ್ನು ಆಧರಿಸಿ ರಚಿಸಿರುವ ಮೊಟ್ಟ ಮೊದಲನೆಯ ಚಾರಿತ್ರಿಕ ಕಾದಂಬರಿ. ಪಂಪನ ತಾಯಿ ತಂದೆ ತಾತ ಮುತ್ತಾತರ ಕಾಲದಿಂದ ಪಂಪನ ತಮ್ಮ ಜಿನವಲ್ಲಭನವರೆಗಿನ ಆತ್ಮೀಯ ಪಾತ್ರ ಚಿತ್ರಣವಿದೆ. ಪಂಪನಿಗೂ ಆಶ್ರಯದಾತನಾದ ವೇಮುಲವಾಡ ಚಾಲುಕ್ಯ ಇಮ್ಮಡಿ ಆರಿಕೇಸರಿಗೂ ಇದ್ದ ಗೆಳೆತನವನ್ನು ಮನಸ್ಸಿಗೆ ಹಿಡಿಸುವಂತೆ ಚಿತ್ರಿಸಲಾಗಿದೆ. ಪಂಪನ ರಸಿಕ ಜೀವನ, ವೀರ ಜೀವನ, ಕಾವ್ಯಜೀವನ, ವೈರಾಗ್ಯಜೀವನ, ಇವು ತಲಸ್ಪರ್ಶಿಯಾಗಿ ಚಿತ್ರಿತವಾಗಿವೆ, ಬನವಾಸಿಯೊಂದಿಗೆ ಪಂಪನು ಹೊಂದಿದ್ದ ಭಾವನಾತ್ಮಕ ಬೆಸುಗೆಯನ್ನು ಆತ್ಮೀಯವಾಗಿ ವರ್ಣಿಸಲಾಗಿದೆ. ಮುಖ್ಯವಾಗಿ ಪಂಪನಿಗಿದ್ದ ಧಾರ್ಮಿಕ ಹಿನ್ನೆಲೆ ಹಾಗೂ ಕಾವ್ಯಶಕ್ತಿಯನ್ನು ಸುಂದರವಾಗಿ ಕಡೆದು ಮೂಡಿಸಲಾಗಿದೆ.

ಪ್ರಥಮ ಮುದ್ರಣವನ್ನು ಕಾ. ಸ. ಧರಣೇಂದ್ರಯ್ಯ ಅವರಿಗೆ ಅರ್ಪಿಸಲಾಗಿದೆ.

**ಅಭಿಪ್ರಾಯಗಳು:**

1. ಲಲಿತವಾದ ಶೈಲಿ ಕಾದಂಬರಿಯನ್ನು ಇಡಿಯಾಗಿ ಓದಿಸಿಕೊಂಡು ಹೋಗುವಲ್ಲಿ ಸಫಲವಾಗಿದೆ**. ಎಲ್ಲಿಯೂ ಅತಿಭಾವುಕತೆಗೆ, ಮತಾಂಧತೆಗೆ ಎಡೆಕೊಟ್ಟಿಲ್ಲ.** ಕಾದಂಬರಿ ಹಲವು ಮಜಲುಗಳಲ್ಲಿ ಬಹುವಿಸ್ತಾರವಾಗಿ ಸಾಗಿ ಪಂಪನೇ ಸಾರ್ವಭೌಮನಾಗಿ ಮೆರೆದಿದ್ದಾನೆ.** ಕಾದಂಬರಿಕಾರರು ಗ್ರಾಮೀಣ ಪರಿಸರದಿಂದ ಬಂದವರಾದ್ದರಿಂದ ಜನಪದ ಭಾಷೆಯನ್ನು ತುಂಬಾ ಶಕ್ತಿಯುತವಾಗಿ ದುಡಿಸಿಕೊಂಡಿದ್ದಾರೆ. **ರಸಿಕ ಜೀವನದ ಸರಸಮಯ ಸಲ್ಲಾಪಗಳು, ಅನುಭವಗಳು ಹಸಿಯಾಗಿರದೆ ಲಲಿತ ಮಾಧುರ್ಯದಿಂದ ಕೂಡಿ, ಸಂಭಾಷಣೆಗಳು ಪ್ರೇಮಪೂರಿತ ಮೃದು ಮಧುರವಾಗಿವೆ.** ಹಂಪನಾ ಅವರಿಗಿರುವ ಜೈನ ಸಾಹಿತ್ಯದ ವಿಸ್ತಾರವಾದ ಓದಿನಿಂದಾಗಿ, ಪಂಪನಂಥ ಮಹಾಕವಿಯ ಜೀವನ ವೃತ್ತಾಂತವನ್ನು ಮತ್ತು

ಆ ಪರಿಸರದ ಬ್ರಹ್ಮಾಂಡ ಸಾಮಗ್ರಿಯನ್ನು ಸಮಗ್ರವಾಗಿ ಕಾದಂಬರಿ ರೂಪದಲ್ಲಿ ಓದುಗರಿಗೆ ಉಣಬಡಿಸಲು ಸಾಧ್ಯವಾದದ್ದು... ಸವ್ಯಸಾಚಿ ಪಂಪ ಎಂಬ ಈ ಕೃತಿಯನ್ನು ಕನ್ನಡಿಗರಿಗಿತ್ತು ಉಪಕೃತರಾಗಿದ್ದಾರೆ.

**-- ಡಾ. ಸುಶೀಲಾ ನೆಲ್ಲಿಸರ**

2. ಹೆಸರಿನಲ್ಲಿ ಕಾದಂಬರಿಯಾದರೂ ವಿಷಯ ನಿರೂಪಣೆಯಲ್ಲಿ ಜೀವನ ಚರಿತ್ರೆಯ ಆಶ್ರಯವನ್ನು ಪಡೆದಿದೆ. ಪಂಪನ ಮಾನವೀಯ ಗುಣಗಳನ್ನು, ಅಂದಿನ ಸಾಮಾಜಿಕ ಸಮತೋಲನ ಸ್ಥಿತಿಯನ್ನು ಗುರುತಿಸುವುದು ಮುಖ್ಯಾಂಶವಾಗಿದೆ. ಪಂಪನ ಮನಸ್ಸಿನಲ್ಲಿ ಉಂಟಾದ ತುಮುಲಗಳನ್ನು ಬಿಡಿಸುವ ರೀತಿ ಉತ್ತಮವಾಗಿದೆ.

**-- ಸಿ. ಹನುಮಂತರಾಯಪ್ಪ**

3. ಪಂಪನ ಸವ್ಯಸಾಚಿತನವನ್ನು ಜನಸಾಮಾನ್ಯರಿಗೆ ತಿಳಿಯುವಂತೆ ಮಾಡುವಲ್ಲಿ ಈ ಕೃತಿ ಸಹಕಾರಿಯಾಗಿದೆ.

**-- ಪ್ರೊ. ಸುಕನ್ಯಾಮಾರುತಿ**

4. ಡಾ. ಜಿ. ಆರ್. ತಿಪ್ಪೇಸ್ವಾಮಿ

'ಕನ್ನಡ ನುಡಿ' ಯಿಂದ

5. ಮೌಲ್ಯದಲ್ಲಿ ಭಾಷಾ ವಿಜ್ಞಾನಕ್ಕೆ ಸರಿಗಟ್ಟುವಂಥದು 'ಸವ್ಯಸಾಚಿ ಪಂಪ' ಕಾದಂಬರಿ. ಇಲ್ಲಿ ಹಂಪನಾ ಬಳಸಿರುವುದು ಕಲಾಲೋಕದ ಪರಿಕರಗಳನ್ನು. ಈ ಕಾದಂಬರಿಯಲ್ಲಿ ಹಂಪನಾ ಹತ್ತನೆಯ ಶತಮಾನದ ಕನ್ನಡ ನಾಡನ್ನು ಪುನಃ ಸೃಷ್ಟಿಸಿದ್ದಾರೆ. ಕನ್ನಡದ ಮಹಾಕವಿ ಪಂಪನ ಮಹಾಶಿಲ್ಪವನ್ನು ಕ್ರಮವಾಗಿ ಕಟೆದು ಉಸಿರು ತುಂಬಿದ್ದಾರೆ. ಅರಸುಗುವರ ಅರಿಗನ ಜತೆಯ ಸಖ್ಯ, ಸಹ ಅಧ್ಯಯನಗಳ ಚಿತ್ರಣ ಅತ್ಯಂತ ನೈಜವೆಂಬಂತೆ ಕಣ್ಣಿಗೆ ಕಟ್ಟುತ್ತದೆ. * ಕಾದಂಬರಿಯಲ್ಲಿ ಬರುವ ಊರುಗಳು ಕಾವ್ಯಯಾತ್ರೆಗೆ ಓದುಗರನ್ನು ಕರೆಯುತ್ತವೆ. ಕಾದಂಬರಿಕಾರ ದಾರ್ಶನಿಕನೂ ಆಗುವ ಪರಿಯನ್ನು ಕಾಣಬಹುದು. *ಗದ್ಯಮಹಾಕಾವ್ಯವೆನಿಸಿಕೊಳ್ಳಲು ಅರ್ಹವಾದ **'ಸವ್ಯಸಾಚಿ ಪಂಪ'** ಕಾದಂಬರಿ*

**-ನಿರಂಜನ**

# ಸಾಂಗತ್ಯ ಕವಿಗಳು

**ಸಾಹಿತ್ಯ ಚರಿತ್ರೆ**

| | | |
|---|---|---|
| ಕ್ರೌನ್ 1/8 ಆಕಾರ, ಪುಟಗಳು | : | 228+viii |
| ಪ್ರಥಮ ಮುದ್ರಣ | : | 1975 |
| ದ್ವಿತೀಯ ಮುದ್ರಣ | : | 2000 |
| ಪ್ರಕಾಶಕರು | : | ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ |

ಕನ್ನಡ ನಾಡಿನ ಪತ್ರಿಕೋದ್ಯಮ ಕ್ಷೇತ್ರದ ಮಹಾಸಾಹಸಿ ಭೀಷ್ಮನೆನಿಸಿದ ಕೊಡುಗೈ ದಾನಿ ಬಿ. ಎಸ್. ಗುಪ್ತ ಅವರು ನೀಡಿದ ಹಣ ಸಹಾಯದಿಂದ ಹೊರತಂದ ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ ಮಾಲೆಯಲ್ಲಿ ಪ್ರಕಟವಾಗಿರುವ ಈ ಪುಸ್ತಕದಲ್ಲಿ ಸಾಂಗತ್ಯ ಕಾವ್ಯಗಳ, ಶತಕ ಸಾಹಿತ್ಯದ, ಅಷ್ಟಕಗಳ ಹಾಗೂ ಚೌಪದಗಳ ವಿವರವಾದ ಪರಿಚಯಾತ್ಮಕ ಸಮೀಕ್ಷೆ ಹಾಗೂ ಅಲ್ಲಲ್ಲಿ ಸೂಕ್ತ ವಿಮರ್ಶೆಯೂ ಬಂದಿದೆ. ಸಾಂಗತ್ಯ ಛಂದಸ್ಸನ್ನು ಕುರಿತು ಪ್ರಬುದ್ಧ ಕರ್ನಾಟಕದಲ್ಲಿ (42-1, 1960) 36 ವರ್ಷಗಳ ಹಿಂದೆಯೇ ಹಂಪನಾ ಸುದೀರ್ಘವಾದ ಮತ್ತು ಅಭ್ಯಾಸ ಪೂರ್ಣವಾದ ಸಂಶೋಧನ ಲೇಖನವನ್ನು ಬರೆದಿದ್ದರು. ಅಂದಿನ ವ್ಯಾಸಂಗ ಈ ಪುಸ್ತಕ ರಚನೆಗೆ ಒಳ್ಳೆಯ ತಳಹದಿಯೂ ಆಗಿದೆ. ಸಾಂಗತ್ಯ ಕವಿಗಳನ್ನೂ ಕಾವ್ಯಗಳನ್ನೂ ಕುರಿತು ಇಷ್ಟು ತಲಸ್ಪರ್ಶಿಯಾದ ಅಧ್ಯಯನದ ಪುಸ್ತಕ ಮೊದಲನೆಯದೆಂಬುದು ಈ ಹೊತ್ತಗೆಯ ಹೆಗ್ಗಳಿಕೆ. ನಮ್ಮಂಥ ನಿವೃತ್ತಿ ವಿದೂರರಿಗೆ ತಣ್ಣನೆಯ ಮತ್ಸರ ಹುಟ್ಟಿಸುತ್ತವೆ!

**ಡಾ. ಬಸವರಾಜ ಮಲಶೆಟ್ಟಿ**
**ಹೊಸಪೇಟೆ**

## ಸಾಂತರರು ಅಭಿಪ್ರಾಯಗಳು

ಪ್ರಸ್ತುತ ಕೃತಿ ಮುಖ್ಯವಾಗಿ ಶಾಸನಾಧಾರಗಳನ್ನು ಅವಲಂಬಿಸಿದೆ. ಸಾಂತರ ರಾಜ್ಯದ ಭೌಗೋಳಿಕ ಎಲ್ಲೆ ಕಟ್ಟು, ಅವರ ಆಡಳಿತದ ವಿವಿಧ ಕಾಲಘಟ್ಟಗಳು, ಆ ಘಟ್ಟಗಳಲ್ಲಿ ಆದ ಮಹತ್ವದ ಘಟನೆಗಳು, ರಾಜರ ವಂಶಾವಳಿ, ಸಾಂತರ ಅರಸಿಯರು, ಸಾಂಸ್ಕೃತಿಕ ಸಾಧನೆಗಳು- ಇವೆಲ್ಲ ಸುದೀರ್ಘವಾಗಿ ವಿವೇಚನೆಗೆ ಒಳಪಟ್ಟಿವೆ. ಗಂಗರು, ಚಾಳುಕ್ಯರು ಹಾಗೂ ಹೊಯ್ಸಳರೊಂದಿಗೆ ಸಾಂತರರಿಗೆ ಇದ್ದ ಚಾರಿತ್ರಿಕ ಸಂಬಂಧದ ವಿಶ್ಲೇಷಣೆ ಮಹತ್ವದ್ದು, ಅನುಬಂಧಗಳು ಉಪಯುಕ್ತವಾಗಿವೆ.

**-ಡಾ. ಎಸ್.ಪಿ. ಪದ್ಮಪ್ರಸಾದ್**

Dr. Hampa. Nagarajaiah has projected himself as a competent and experienced historian in this work. Scholars and students interested in Karnataka history and culture should be grateful to the scholarly author for this excellent work.

**Prof. A.V. Narasimha Murthy**
**Mysore**

ಧಾರವಾಡದಲ್ಲೀಗ ಜಿಟಿಜಿಟಿ ಮಳೆ, ಆಹ್ಲಾದಕರ ವಾತಾವರಣ. ಈ ತಿಂಗಳುಗಳನ್ನು ಸಾಮಾನ್ಯವಾಗಿ ನಾನು ಓದುತ್ತಾ, ಬರೆಯುತ್ತಾ ಕಳೆಯಲು ಇಷ್ಟಪಡುವೆ ನಿಮ್ಮ ಮೂರೂ ಸುಂದರವಾಗಿ ಪ್ರಕಟಗೊಂಡ ಪಾಂಡಿತ್ಯ ಪೂರ್ಣ ಗ್ರಂಥಗಳನ್ನು ಓದಿ ಆನಂದಿಸಿದೆ, ನಾನು ಹೊಂಬುಚ್ಚದಲ್ಲಿ ಕಳೆದ ದಿನಗಳನ್ನು ನೆನಸಿಕೊಂಡೆ. ಶಾಸನ ಕ್ಷೇತ್ರಕ್ಕೆ, ಇತಿಹಾಸಕ್ಕೆ, ಕಲಾ-ಇತಿಹಾಸಕ್ಕೆ ತಮ್ಮಿಂದ ವಿಶೇಷ ಕೊಡುಗೆ ಲಭಿಸುತ್ತಾ ಬಂದಿದೆ. ಈ ಮೂರೂ ಗ್ರಂಥಗಳಿಂದ ಅದನ್ನು ತಾವು ಬಲಪಡಿಸಿಕೊಂಡಿದ್ದೀರಿ.

**ಪ್ರೊ. ಷ. ಶೆಟ್ಟರ್**
**ಮಾಜಿ ಅಧ್ಯಕ್ಷರು- ಐ.ಸಿ.ಎಚ್.ಆರ್.**

## ಬಾಹುಬಲಿ ಅಂಡ್ ಬಾದಾಮಿ ಚಲುಕ್ಯಾಸ್

ನೀವು ಕಳಿಸಿದ ಪ್ಯಾಕೆಟನ್ನು ತೆಗೆದೊಡನೆಯೇ ಆಶ್ಚರ್ಯವೂ ಸಂತೋಷವೂ ಆದವು. ಜೈನಸರಸ್ವತಿಯ ಮುಡಿಗೆ ಇನ್ನೊಂದು ಅನರ್ಘ್ಯ ರತ್ನವನ್ನು ಸೇರಿಸಿದಿರಿ. ಅಭಿನಂದನೆಗಳು. ನಿಮ್ಮ ಹಿಂದಿನ ಮತ್ತು ಮುಂಬರುವ ಗ್ರಂಥಗಳನ್ನು ನೋಡಿದರೆ ನಿಮ್ಮಿಂದಾಗಿ ಕರ್ನಾಟ ಜೈನ ಸರಸ್ವತಿ ಸರ್ವಾಲಂಕಾರ ಭೂಷಿತೆಯಾಗುತ್ತಾಳೆ ಎಂಬುದು ಅತ್ಯಂತ ಸಂತಸದ ವಿಷಯ. ನಿಮ್ಮ ಈ ಸಾಧನೆಗೆ ಅನಂತಾನಂತ ಅಭಿನಂದನೆಗಳು.

ನಿಮ್ಮ ವಿಶ್ವಾಸದ
**(ಶ್ರೀನಿವಾಸ ರಿತ್ತಿ)**

# ಸಾಳ್ವ ಭಾರತ

**ಗ್ರಂಥ ಸಂಪಾದನೆ : ಷಟ್ಪದಿ ಕಾವ್ಯ**

| | | |
|---|---|---|
| ಡೆಮ್ಮೆ 1/8 ಆಕಾರ, ಪುಟಗಳು | - | 746+xcvi=842 |
| ಪ್ರಥಮ ಮುದ್ರಣ | : | 1976 |
| ಪ್ರಕಾಶಕರು | : | ಪ್ರಸಾರಾಂಗ,<br>ಬೆಂಗಳೂರು ವಿಶ್ವವಿದ್ಯಾಲಯ<br>ಬೆಂಗಳೂರು-560056 |

ಕನ್ನಡ ಸಾಹಿತ್ಯದಲ್ಲಿ ವ್ಯಾಸಪರಂಪರೆ ಹಾಗೂ ಜಿನಸೇನಾಚಾರ್ಯ ಪ್ರಣೀತ ಹರಿವಂಶ ಪರಂಪರೆ- ಇವೆರಡೂ ಪರಂಪರೆಯ ಭಾರತಗಳಿವೆ. ವ್ಯಾಸರು ಹಾಗೂ ಜಿನಸೇನರು, ಈ ಇಬ್ಬರನ್ನೂ ಜೈನಕವಿಗಳು ಅನುಸರಿಸಿರುವುದುಂಟು. ಕೌರವರೂ ಪಾಂಡವರೂ ಇರುವ ಮಹಾಭಾರತವು ನಡೆದ ಕಾಲದಲ್ಲಿಯೇ, ಜೈನ ಪರಂಪರೆಯ 22ನೆಯ ತೀರ್ಥಂಕರರಾದ ನೇಮಿನಾಥರೂ ಜೀವಿಸಿದ್ದು ಕುರುವಂಶಜರಿಗೆ ನೆಂಟರಾಗಿದ್ದರು. ಜೈನ ಪರಂಪರೆಯ ನೇಮಿನಾಥ ಪುರಾಣ ಬಂಧುವರ್ಮನ ಹರಿವಂಶಾಭ್ಯುದಯ, ನೇಮಿಚಂದ್ರನ ಅರ್ಧನೇಮಿ ಪುರಾಣ, ಮಹಾಬಲ ಕವಿಯ ನೇಮಿನಾಥ ಪುರಾಣ, ಮಂಗರಸನ ನೇಮಿಜಿನೇಶ ಸಂಗತಿ- ಇವು ಜೈನ ಭಾರತಗಳೆನ್ನಬಹುದಾದ ಮಹಾಭಾರತದ ಕಥೆ ಇರುವ ಪುರಾಣಗಳು.

ಪ್ರಸ್ತುತ ಸಾಳ್ವ ಕವಿಯ ಸಾಳ್ವಭಾರತವೂ ಈ ಪರಂಪರೆಗೆ ಸೇರಿದ ಕಾವ್ಯ. ಮಾರ್ಗ ಪರಂಪರೆಯ ಚಂಪೂ ಕಾವ್ಯಗಳಲ್ಲಿ ಇದ್ದ ಈ ರೂಪವನ್ನು ಕೊಟ್ಟವನು ಸಾಳ್ವಕವಿ. ಈ ಕಾವ್ಯದ ಹೆಸರು 'ನೇಮಿನಾಥ ಚರಿತೆ'ಯೇ ಆದರೂ, ರೂಢಿಯ ಹೆಸರು 'ಸಾಳ್ವಭಾರತ' ಎಂದಿದೆ. ಈ ಬೃಹತ್ ಕಾವ್ಯವನ್ನು ಏಕೈಕ ಸಂರಕ್ಷಿತ ಹಸ್ತಪ್ರತಿಯ ಸಹಾಯದಿಂದ ಪ್ರಥಮ ಬಾರಿಗೆ ಪ್ರಕಟಿಸಿದ್ದಾರೆ. ವಿಸ್ತಾರವಾದ ಮತ್ತು ಪಾಂಡಿತ್ಯ ಪೂರ್ಣವಾದ ಪ್ರಸ್ತಾವನೆ, ಅನುಬಂಧಗಳು ಈ ಕೃತಿಯ ವೈಶಿಷ್ಟ್ಯ.

**ಅಭಿಪ್ರಾಯಗಳು :**

1. ಷಟ್ಪದಿಯ ವಿವಿಧ ಪ್ರಕಾರಗಳಲ್ಲಿ ಬೃಹತ್ತಾಗಿ ಮೈ ದೋರಿಸುವ ಈ ಕೃತಿಯನ್ನು ಶ್ರೀ ಹಂಪ. ನಾಗರಾಜಯ್ಯನವರು ತುಂಬ ಶ್ರಮವಹಿಸಿ ಸಂಪಾದಿಸಿ, ಇದುವರೆಗೂ ಈ ಕೃತಿಯ

ಬಗ್ಗೆ ಉಪಲಬ್ಧವಿರುವ ಮಾಹಿತಿಗಳನ್ನು ಅಳವಡಿಸಿಕೊಂಡು, ಉಪಯುಕ್ತವಾದ ಪ್ರಸ್ತಾವನೆ ಮತ್ತು ಅನುಬಂಧಗಳೊಡನೆ ಅಚ್ಚುಕಟ್ಟಾಗಿ ಸಿದ್ಧಪಡಿಸಿಕೊಟ್ಟಿದ್ದಾರೆ. ಈ ವಿಶೇಷ ಸಂಪಾದನಾ ಕಾರ್ಯಕ್ಕಾಗಿ ನಾನು ಶ್ರೀ ಹಂಪ. ನಾಗರಾಜಯ್ಯನವರನ್ನು ಅಭಿನಂದಿಸುತ್ತೇನೆ.

**--ಡಾ. ಜಿ. ಎಸ್. ಶಿವರುದ್ರಪ್ಪ**

(ಮುನ್ನುಡಿಯಿಂದ)

2. ಸಾಳ್ವಭಾರತವು ಕನ್ನಡ ಗ್ರಂಥ ಸಂಪಾದನೆಯ ಆದರ್ಶವನ್ನು ಸಾರುವ ಉತ್ತಮವಾದ ಗ್ರಂಥ ಸಂಪಾದನೆಯಾಗಿದೆ. ಹಂಪನಾ ಅವರ ವಿದ್ವತ್ತು, ಪ್ರಾಚೀನ ಕನ್ನಡ ಸಾಹಿತ್ಯದ ವ್ಯಾಸಂಗದ ಅಪೂರ್ವವಾದ ಜ್ಞಾನ ಮತ್ತು ಗ್ರಂಥ ಸಂಪಾದನೆ ತತ್ವಗಳ ಸ್ಪಷ್ಟವಾದ ಗ್ರಹಿಕೆಯಿಂದ ಸಾಳ್ವಭಾರತವು ಅಮೂಲ್ಯ ಕೃತಿಯಾಗಿ ಶೋಭಿಸುವಂತಾಗಿದೆ. ಅವರ ಸಾಧನೆ ಅನನ್ಯವಾಗಿದೆ.

**--ಡಿ. ವಿ. ಹೆಗಡೆ**

3. ಕ್ರಿ. ಶ. 1550 ಎಂಬ ಕವಿಚರಿತೆಕಾರರ ಅಭಿಪ್ರಾಯವನ್ನೇ ಒಪ್ಪಿಕೊಂಡು ಬಂದ ಸಾಳ್ವನ ಕಾಲವನ್ನು, ಮೊಟ್ಟಮೊದಲ ಬಾರಿಗೆ ಕವಿಯ ರಾಜ-ಗುರು ಪರಂಪರೆ, ಆಶ್ರಯದಾತನ ಹಿನ್ನೆಲೆ, ಶಾಸನಗಳ ಆಧಾರ- ಇವುಗಳಿಂದ 1485 ಎಂದು ನಿರ್ಣಯಿಸಿ ಕೊಟ್ಟಿರುವುದು ಹಂಪನಾ ಅವರ ಸಂಶೋಧನಾ ಪ್ರತಿಭೆಗೆ ಪ್ರೌಢ ನಿದರ್ಶನಗಳು.

**--ಡಾ. ಎಸ್. ಎನ್. ಕೋತಿನ**

# ಹಂಪನಾ ಆಯ್ದ ಪ್ರಬಂಧಗಳು

**ಪ್ರಬಂಧ ಸಂಕಲನ**

| | | |
|---|---|---|
| ಕ್ರೌನ್ 1/8 ಆಕಾರ, ಪುಟಗಳು | : | 135 |
| ಪ್ರಥಮ ಮುದ್ರಣ | : | 1993 |
| ಪ್ರಕಾಶಕರು | : | ಚೇತನ ಬುಕ್ ಹೌಸ್, ಮೈಸೂರು. |
| ದ್ವಿತೀಯ ಮುದ್ರಣ | : | 1996. |
| ಪ್ರಕಾಶಕರು | : | ಅಖಿಲ ಏಜೆನ್ಸೀಸ್, ಮೈಸೂರು. |

ಹಂಪನಾ ಅವರ 'ಹೆಸರಿನ ಸೊಗಸು' ಎಂಬ ಲಲಿತ ಪ್ರಬಂಧಗಳ ಸಂಕಲನಕ್ಕೆ 'ದಂತಕಥೆ' ಎಂಬ ಮತ್ತೊಂದು ಪ್ರಬಂಧವನ್ನು ಸೇರಿಸಿ ಪ್ರಸ್ತುತ ಕೃತಿಯನ್ನು ಪ್ರಕಟಿಸಲಾಗಿದೆ. ಈ ಪ್ರಬಂಧ ಸಂಕಲನವನ್ನು ಕುವೆಂಪು ವಿಶ್ವವಿದ್ಯಾಲಯ ವ್ಯಾಪ್ತಿಗೆ ಸೇರಿದ ಕಾಲೇಜುಗಳ ಪ್ರಥಮ ಪದವಿ ತರಗತಿಗೆ 1996-97 ನೇ ಸಾಲಿಗೆ ಪಠ್ಯಪುಸ್ತಕವೆಂದು ನಿಗದಿಪಡಿಸಲಾಗಿದೆ.

ಈ ಪುಸ್ತಕ ಕುರಿತು ಹೆಚ್ಚಿನ ಮಾಹಿತಿಗಳಿಗೆ ನೋಡಿ: **ಹೆಸರಿನ ಸೊಗಸು** ಶೀರ್ಷಿಕೆಯಲ್ಲಿ ನೀಡಿರುವ ವಿವರಣೆ.

# ಹೆಸರಿನ ಸೊಗಸು

**ಪ್ರಬಂಧ ಸಂಕಲನ**

| | | |
|---|---|---|
| ಕ್ರೌನ್ 1/8 ಆಕಾರ, ಪುಟಗಳು | : | 80+iv |
| ಪ್ರಕಾಶಕರು | : | ಡಿ. ವಿ. ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು |
| ಪ್ರಥಮ ಮುದ್ರಣ | : | 1974 |
| ದ್ವಿತೀಯ ಮುದ್ರಣ | : | 1975 |
| ತೃತೀಯ ಮುದ್ರಣ | : | 1978 - ಪ್ರಭಾ ಪಬ್ಲಿಶರ್ಸ್, ಧಾರವಾಡ |

ಇದರಲ್ಲಿ ಪ್ರಥಮ ಮುದ್ರಣ ಆವೃತ್ತಿಯಲ್ಲಿ 12 ಪ್ರಬಂಧಗಳಿವೆ, ದ್ವಿತೀಯ ಮುದ್ರಣದಲ್ಲಿ 13 ಪ್ರಬಂಧಗಳಿವೆ.

ಇದು ಬೆಂಗಳೂರು ವಿಶ್ವವಿದ್ಯಾಲಯ ವಲಯ ವ್ಯಾಪ್ತಿಗೆ ಸೇರಿದ ಕಾಲೇಜುಗಳಿಗೆ 1975-76ರ ಸಾಲಿಗೆ ಪಠ್ಯಪುಸ್ತಕವಾಗಿತ್ತು.

ಇದರಲ್ಲಿ ಸೇರ್ಪಡೆ ಆಗಿರುವ ಪ್ರಬಂಧಗಳ ಶೀರ್ಷಿಕೆಗಳು:

1. ಮನೆಯ ಮುಂದೆ ಬಂದು ಮಾರುವವರು 2. ಸಾಲಾವತಾರ 3. ಘಾಟಿ ಹುಡುಗರು 4. ಹೆಸರಿನ ಸೊಗಸು. 5. ಧಿಮಾಕಿನ ಚೀಲ 6. ಶಾಸ್ತ್ರಿಯ ಇಂಗ್ಲಿಷ್ ಪ್ರೇಮ. 7. ಕ(ಕಿ)ವಿಯ ಹೆಂಡತಿ 8. ರಿಪೇರಿ. 9. ಅನಾರೋಗ್ಯ ಭಾಗ್ಯ 10. ನೈನಂ ಛಿಂದಂತಿ ಶಸ್ತ್ರಾಣಿ. 11. ಸಭಾಕಂಪ. 12. ಹುಯ್ಯೋಹುಯ್ಯೋ ಮಳೆರಾಯ 13. ಪುಸ್ತಕಜೀವಿ.

- ಇವುಗಳಲ್ಲಿ ಹುಯ್ಯೋ ಹುಯ್ಯೋ ಮಳೆರಾಯ ಎಂಬ ಪ್ರಬಂಧವನ್ನು ತೃತೀಯ ಮುದ್ರಣದ ವೇಳೆಯಲ್ಲಿ ಸೇರಿಸಲಾಗಿದೆ.

**ಅಭಿಪ್ರಾಯ :**

"ಕೆಲವು ತಿಳಿಹಾಸ್ಯದ ಲಲಿತ ಪ್ರಬಂಧಗಳಾದರೆ, ಇನ್ನೂ ಕೆಲವು ಸಂಶೋಧನಾತ್ಮಕ ಅಂಶವನ್ನು ಲೇಪಿಸಿಕೊಂಡಿವೆ. ಇನ್ನು ಕೆಲವು ಸೃಜನಶೀಲತೆಯ ಅಂಶಗಳನ್ನು ಒಳಗೊಂಡಿರುವುದರಿಂದ ಅವರ ಅನೇಕ ಕೃತಿಗಳಲ್ಲಿ ಎದ್ದು ಕಾಣುವ ಸಂಕಲನವಾಗಿದೆ**.

ದುಡಿಯುವವರ ಬಗ್ಗೆ ಮಾನವೀಯ ನೆಲೆಯಿಂದ ನೋಡಿದ ನೋಟವಿದೆ* ಪ್ರಬಂಧ ಹಾಗೇ ನವಿರಾದ ಹಾಸ್ಯದೊಂದಿಗೆ ಮುಂದುವರೆದು ಕೊನೆ ಕೊನೆಗೆ ತಾತ್ವಿಕ ಚರ್ಚೆಯಲ್ಲಿ ಕೊನೆಗೊಳ್ಳುತ್ತದೆ*.

ಸಾಧಾರಣ ಕೊಡೆರಿಪೇರಿ ಮಾಡಲು ಮನೆ ಮುಂದೆ ಬಂದ ರಿಪೇರಿಯವನ ಕಾಯಕ ಲೇಖಕರಿಗೆ ಬದುಕಿನ ಅನೇಕ ಹೊಸ ಸತ್ಯಗಳನ್ನು, ತತ್ವಗಳನ್ನು ಹೊಳೆಯಿಸಿ ಬಿಡುತ್ತದೆ. ಇಂಥ ಕಡೆ ಬರುವ ತಾತ್ವಿಕ ಚರ್ಚೆ ಒಟ್ಟು ಪ್ರಬಂಧ ಧ್ವನಿಗೆ ಪೂರಕವಾಗಿ ನಿಲ್ಲುತ್ತದೆ*.

ಹಂಪನಾ ಅವರ ಲವಲವಿಕೆಯ ಗದ್ಯದ ಪರಿಚಯವನ್ನು ಇಲ್ಲಿನ ಪ್ರಬಂಧಗಳು ಮಾಡಿಕೊಡುತ್ತವೆ."

**--ರಂಗಾರೆಡ್ಡಿ ಕೋಡಿರಾಂಪುರ**

# ಹೊಂಬುಜದ ಶಾಸನಗಳು

**ಗ್ರಂಥ ಸಂಪಾದನೆ : ಶಾಸನ**

| | | |
|---|---|---|
| ಕ್ರೌನ್ 1/8 ಆಕಾರ, ಪುಟಗಳು | : | 146 |
| ಸಹ ಲೇಖಕರು | : | ಎಂ. ಜಿ. ಮಂಜುನಾಥ |
| ಪ್ರಥಮ ಮುದ್ರಣ | : | 1997 |
| ಪ್ರಕಾಶಕರು | : | ಶ್ರೀ ಸಿದ್ಧಾಂತಕೀರ್ತಿ ಗ್ರಂಥಮಾಲೆ<br>ಶ್ರೀ ಹೊಂಬುಜ ಜೈನಮಠ,<br>ಹೊಂಬುಜ -577436. ಶಿವಮೊಗ್ಗ ಜಿಲ್ಲೆ |

ಶಿವಮೊಗ್ಗ ಜಿಲ್ಲೆ ಹೊಸನಗರ ತಾಲ್ಲೂಕಿಗೆ ಸೇರಿದ ಹೊಂಬುಜ(ಹುಂಚ) ಹಿಂದೊಮ್ಮೆ ಸಾಂತರರ ರಾಜಧಾನಿಯಾಗಿದ್ದಂತಹ ಸ್ಥಳ. ಹಿಂದಿನ ಸಾಂಸ್ಕೃತಿಕ, ಐತಿಹಾಸಿಕ ಮಹತ್ವದ ಅಂಶಗಳನ್ನು ತನ್ನ ಗರ್ಭದಲ್ಲಿ ಅಡಗಿಸಿಕೊಂಡಿರುವ ಮಹತ್ವದ ಸ್ಥಳವಾಗಿರುವ ಹೊಂಬುಜವು ಜೈನರ ಪವಿತ್ರವಾದ ತೀರ್ಥಸ್ಥಳವೂ ಹೌದು. ಜಿನಶಾಸನ ದೇವತೆ ಪದ್ಮಾವತೀ ಯಕ್ಷಿಯು ಈ ಸ್ಥಳದ ಅಧಿದೇವತೆ. ಆಕೆಯ ನೆಲಸುವಿಕೆಯಿಂದ ಆ ಸ್ಥಳವು ಜಾಗೃತಸ್ಥಳವೆಂಬ ಕೀರ್ತಿಯನ್ನು ಹೊಂದಿದೆ.

ಹೊಂಬುಜದಲ್ಲಿ ಪ್ರಾಚೀನ ದೇವಾಲಯಗಳಲ್ಲದೆ ಪ್ರಾಚೀನ ಶಾಸನಗಳೂ ಇವೆ. ಈ ಹಿಂದೆ ಬೆಂಜಮಿನ್ ಲೂಯಿ ರೈಸರು ಸಂಪಾದಿಸಿದ ಎಪಿಗ್ರಾಫಿಯ ಕರ್ನಾಟಕದ ಏಳನೆಯ ಸಂಪುಟದಲ್ಲಿ ಇಲ್ಲಿ ದೊರೆತ ಶಾಸನಗಳ ಪಾಠವಿದೆ. ಇವುಗಳಿಗೆ ರಾಜಕೀಯ, ಐತಿಹಾಸಿಕ, ಧಾರ್ಮಿಕ ಪ್ರಾಮುಖ್ಯವಿದೆ. ಇಲ್ಲಿ ಗದ್ಯಾನುವಾದ ಸಹಿತ ಎಲ್ಲ ಉಪಲಬ್ಧ ಶಾಸನಗಳನ್ನು ಪ್ರಕಟಿಸಿದೆ. ಈ ಶಾಸನಗಳಿಗೆ ಹಂಪನಾ ಹೊಸಗನ್ನಡ ಗದ್ಯಾನುವಾದವನ್ನು ಕೊಟ್ಟಿರುವುದರಿಂದ ಸಂಶೋಧಕರಿಗೆ ಹೆಚ್ಚು ನೆರವಾಗಿದೆ.

ಸಂ.

## ಹಂಪ. ನಾಗರಾಜಯ್ಯ ಕುರಿತ ಎರಡು ಜೀವನ ಚರಿತ್ರೆಗಳು:

### ೧. ಧೀಮಂತ ಹಂಪನಾ

| | | |
|---|---|---|
| ಕ್ರೌನ್ 1/8 ಆಕಾರ ಪುಟಗಳು | : | ೧೨೪ |
| ಲೇಖಕರು | : | ನಾಗೇಂದ್ರಪ್ಪ ದಾಗಿನಕಟ್ಟೆ |
| ಪ್ರಕಟಿತ ವರ್ಷ | : | ೧೯೯೩ |
| ಪ್ರಕಾಶಕರು | : | ಸ್ವಾತಿ ಪ್ರಕಾಶನ, ಚಾಮರಾಜಪೇಟೆ, ಬೆಂಗಳೂರು 18 |

1. "ಹೆಸರೇ ಹೇಳುವಂತೆ ಇದು ಹಂಪನಾ ಅವರ 'ವ್ಯಕ್ತಿ-ಕೃತಿ'ಗಳನ್ನು ಪರಿಚಯಿಸುವ ಕೃತಿ. ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾಗಿ ಅನೇಕ ಜನಪರ ಸಾಹಿತ್ಯ ಕಾರ್ಯಗಳನ್ನು ಮಾಡಿ ವಿವಾದಾಸ್ಪದವಾಗಿಯೂ ಪ್ರಖ್ಯಾತರಾದ ವ್ಯಕ್ತಿತ್ವ ಅವರದು. ಅವರ ರಚನಾತ್ಮಕ ಕೆಲಸ ಸತತವಾಗಿ ಸಾಗಿದೆ. ಅವರದು ಚುಂಬಕ ವ್ಯಕ್ತಿತ್ವ: ಭಾಷಾ ವಿಜ್ಞಾನ, ದಾರ್ಶನಿಕತೆ, ವೈಚಾರಿಕತೆ, ಹಳೆಗನ್ನಡ ಕಾವ್ಯ, ವಿಮರ್ಶೆ, ಸಂಶೋಧನೆ, ಜೀವನ ಚರಿತ್ರೆ- ಮುಂತಾದ ಗಂಭೀರ ಸಾಹಿತ್ಯ ಸೃಷ್ಟಿಯ ಹರಹು; ನಿರರ್ಗಳವಾಗಿ, ಆಕರ್ಷಕವಾಗಿ ಮಾತಾಡಬಲ್ಲ ಪ್ರಗಲ್ಭ ವಿದ್ವಾಂಸರು- ಅದಕ್ಕೆ ಅವರು 'ಧೀಮಂತ ಹಂಪನಾ'.

ಇದೊಂದು ಕನ್ನಡದ ಶ್ರೇಷ್ಠ ವಿದ್ವಾಂಸ ಕಾರ್ಯಕರ್ತರೊಬ್ಬರ ಸಂಸ್ಥಾನಿಷ್ಠ ಪರಿಚಯ ಮಾಡಿಕೊಡುವ ವಿಶಿಷ್ಟ ಗ್ರಂಥ.

**-'ಪವಿ'**

**ಸಂಬಂಧ ಪತ್ರಿಕೆ, ಜೂನ್ 1994**

ಮುಂಬಯಿ

2. ಶ್ರೀ. ದಾಗಿನಕಟ್ಟೆಯವರು ಬರೆದಿರುವ ವ್ಯಕ್ತಿಚಿತ್ರ ಚೆನ್ನಾಗಿದೆ. ಹೆಚ್ಚಿನ ವಿವರಗಳೆಲ್ಲ ನನಗೆ ತಿಳಿದುದೇ ಆದರೂ ತುಂಬ ಸಂತೋಷದಿಂದ ಓದಿದ್ದೇನೆ. ಅದರಲ್ಲೂ ಈ ಕೃತಿಯಲ್ಲಿ ಮೆಚ್ಚಿಕೊಳ್ಳಲೇಬೇಕಾದ ಹಂಪನಾರ ಲೇಖನ ಸೂಚಿಯನ್ನು ಪ್ರಕಟಿಸಿ ತುಂಬ ಉಪಕಾರ ಮಾಡಿದ್ದಾರೆ.

**-ವ್ಯಾಸರಾಯಬಲ್ಲಾಳ**

ಮುಂಬಯಿ

೨. ಸಾಹಿತಿ- ಸಾಹಸಿ ಹಂಪನಾ

| | | |
|---|---|---|
| ಡೆಮ್ಮೈ 1/8 ಆಕಾರ ಪುಟಗಳು | : | 8+112 |
| ಲೇಖಕರು | : | ಬಾಳೇಶ ಲಕ್ಷೆಟ್ಟಿ |
| ಪ್ರಕಟಿತ ವರ್ಷ | : | 1994 |
| ಪ್ರಕಾಶಕರು | : | ರಾಘುವೇಂದ್ರ ಪ್ರಕಾಶನ, ಬೆಂಗಳೂರು |
| ಮುನ್ನುಡಿ | : | ಡಾ. ಏಜಾಸುದ್ದೀನ್ ಅಶ್ರಫೀ |

## ೪. ಸಂಕೃತಿ

### ಅಭಿನಂದನ ಗ್ರಂಥ

| | | |
|---|---|---|
| ಡೆಮ್ಮಿ 1/8 ಆಕಾರ, ಪುಟಗಳು | : | 316+xvi |
| ಪ್ರಥಮ ಮುದ್ರಣ | : | 1988 |
| ಸಂಪಾದಕರು | : | ಪ್ರೊ. ಎಚ್. ಜೆ. ಲಕ್ಕಪ್ಪಗೌಡ, ಶ್ರೀಮತಿ ಸುಕನ್ಯಾ ಮಾರುತಿ |
| ಪ್ರಕಾಶಕರು | : | ಹಂಪನಾ ಅಭಿನಂದನಾ ಸಮಿತಿ, ಬೆಂಗಳೂರು. |

ಡಾ. ಹಂಪನಾ ಅವರಿಗೆ ಐವತ್ತು ವರ್ಷ ತುಂಬಿದ ಸವಿನೆನಪಿಗೆ ಅಭಿನಂದನ ಗ್ರಂಥವೊಂದನ್ನು ಸಮರ್ಪಿಸಲು ಅವರ ಅಭಿಮಾನಿಗಳೆಲ್ಲರೂ ಕೂಡಿಕೊಂಡು 'ಸಂಕೃತಿ'ಯನ್ನು ಸಮರ್ಪಿಸಿದರು. ಈ ಕೃತಿಯಲ್ಲಿ ಹಂಪನಾ ಅವರು ರಚಿಸಿದ್ದ ಹಲವಾರು ಕೃತಿಗಳನ್ನು ಕುರಿತ ವಸ್ತುನಿಷ್ಠ ವಿಮರ್ಶಾಲೇಖನಗಳನ್ನು ಸಂಕಲಿಸಿ ಪ್ರಕಟಿಸಲಾಗಿದೆ. ಹಂಪನಾ ಅವರು ರಚಿಸಿರುವ ಮಹಾ ವೀರ, ನಾಡೋಜ ಪಂಪ, ಮಹಾಕವಿರನ್ನ, ದೇವರಾಯನ ದುರ್ಗ ಮುಂತಾದ ಶಿಶುಸಾಹಿತ್ಯ ಕುರಿತ ಕೃತಿಗಳು ಆ ಕಾಲಕ್ಕೇ (1988) ಅನುಪಲಬ್ಧವಾಗಿದ್ದುದರಿಂದ ಆ ಪುಸ್ತಕಗಳನ್ನು ಕುರಿತ ವಿಮರ್ಶಾಲೇಖನಗಳನ್ನು ಈ ಕೃತಿಯಲ್ಲಿ ಸೇರಿಸಲಾಗಿಲ್ಲವೆಂದು ಸಂಪಾದಕರು ಮುನ್ನುಡಿಯಲ್ಲಿಯೇ ಹೇಳಿಕೊಂಡಿದ್ದಾರೆ. ಒಟ್ಟಿನಲ್ಲಿ ಹಂಪನಾ ಅವರ ಸಾಹಿತ್ಯವನ್ನು ಕುರಿತಂತೆ ಅಧ್ಯಯನ ನಡೆಸಬಯಸುವವರಿಗೆ ಇದೊಂದು ಉತ್ತಮ ಮಾರ್ಗದರ್ಶಿಕೆಯಾಗಬಲ್ಲ ಕೃತಿಯೆಂದು ಹೇಳಬಹುದು.

ಇದರಲ್ಲಿ ಒಟ್ಟು 48 ಲೇಖನಗಳಿವೆ. ದೇಜಗೌ, ಬಸವರಾಜ ಮಲಶೆಟ್ಟಿ, ಮ. ಗು. ಬಿರಾದಾರ, ಶ್ರೀಕಂಠ ಕೂಡಿಗೆ, ಜಿ. ಬ್ರಹ್ಮಪ್ಪ, ಚಂದ್ರಶೇಖರ ಕಂಬಾರ, ಸರಿತಾ ಜ್ಞಾನಾನಂದ, ಕೆ. ಆರ್. ಸಂಧ್ಯಾರೆಡ್ಡಿ, ಟಿ. ಕೇಶವ ಭಟ್ಟ, ಬಿ. ಆರ್. ಹಿರೇಮಠ- ಮೊದಲಾದ ಹಿರಿಯ ವಿದ್ವಾಂಸರ ವಿಮರ್ಶಕರ ಲೇಖನಗಳಿವೆ.

ಇದು ಹಂಪನಾಗೆ ಒಪ್ಪಿಸಿದ ಮೂರನೇ . . ಭಾವನ ಗ್ರಂಥ.

## ೧. ಪಚ್ಚೆತೆನೆ

**ಸಂಭಾವನ ಗ್ರಂಥ**

| | | |
|---|---|---|
| ಡೆಮ್ಮೈ 1/8 ಆಕಾರ, ಪುಟಗಳು | : | 102 |
| ಪ್ರಥಮ ಮುದ್ರಣ | : | 1985 |
| ಸಂಪಾದಕರು | : | ಟಿ. ಕೆ. ಮಹಮೂದ್, ಶಾ. ಮಂ. ಕೃಷ್ಣರಾಯ |
| ಪ್ರಕಾಶಕರು | : | ಉತ್ತರ ಕನ್ನಡ ಜಿಲ್ಲಾ ಸಾಹಿತ್ಯ ಪರಿಷತ್ತು, ಭಟ್ಕಳ |

ಹಂಪನಾ ಅವರಿಗೆ ಐವತ್ತುವರ್ಷ ತುಂಬಿದ ಸಂದರ್ಭದಲ್ಲಿ ಪ್ರಕಟಿಸಬೇಕೆಂದು ಅವರ ಅಭಿಮಾನಿಗಳು ತಮ್ಮ ಸಂತೋಷವನ್ನು ಪ್ರಕಟಿಸಲು ಕೇವಲ ಮೂರು ವಾರಗಳಲ್ಲಿ ಈ ಗೌರವ ಗ್ರಂಥವನ್ನು ಹೊರತಂದಿದ್ದಾರೆ. ಗಾತ್ರದಲ್ಲಿ ಪುಟ್ಟದಾದರೂ ಮಹತ್ವದ ಈ ಕೃತಿಯನ್ನು ಉತ್ತರ ಕನ್ನಡ ಜಿಲ್ಲಾ ಸಾಹಿತ್ಯ ಪರಿಷತ್ತಿನ ಜಿಲ್ಲಾ ಸಮಿತಿಯವರು ಪ್ರಕಟಿಸಿದ್ದಾರೆ. ಭಟ್ಕಳದಲ್ಲಿ ಸಾಹಿತ್ಯ ಸಮ್ಮೇಳನ ನಡೆದ ಸಂದರ್ಭದಲ್ಲಿ ಡಾ. ಹಂಪನಾ ದಂಪತಿಗಳಿಗೆ ಏರ್ಪಡಿಸಿದ್ದ ಭವ್ಯ ಸನ್ಮಾನ ಸಮಾರಂಭದಲ್ಲಿ 'ಪಚ್ಚೆತೆನೆ'ಯನ್ನು ಬಿಡುಗಡೆಗೊಳಿಸಿ ಅರ್ಪಿಸಲಾಯಿತು.

ಇದರಲ್ಲಿ ಹಂಪನಾ ಅವರ ಬಾಳಿಗೆ ಒಳಪಡುವ 15 ಚಿತ್ರಗಳಿವೆ, 13 ಲೇಖನಗಳಿವೆ, ಅಲ್ಲದೆ ಹಲವು ಹಿರಿಯರು ಹೇಳಿದ ಅಭಿಪ್ರಾಯಗಳಿವೆ. ಹಿರಿಯ ಪತ್ರಕರ್ತ ಖಾದ್ರಿ ಶಾಮಣ್ಣನವರಿಗೆ ಹಂಪನಾ ಬರೆದ ಬಹಿರಂಗ ಪತ್ರವನ್ನು ಇದರಲ್ಲಿ ಸೇರಿಸಲಾಗಿದೆ; ಮಾಧ್ಯಮಗಳಲ್ಲಿ ಶೂದ್ರರಿಗೂ ದಲಿತರಿಗೂ ಶತಮಾನಗಳಿಂದ ನಡೆಯುತ್ತಿರುವ ಅನ್ಯಾಯವನ್ನು ಹಂಪನಾ ದಿಟ್ಟತನದಿಂದ ದಾಖಲಿಸಿರುವ ಹಾಗೂ ರಾಷ್ಟ್ರಕವಿ ಕುವೆಂಪು ಗಮನ ಸೆಳೆದ ಐತಿಹಾಸಿಕ ಮಹತ್ವದ ಪತ್ರವಿದು. ಇಂತಹ ಅಮೂಲ್ಯವಾದ ಬರಹಗಳಿಂದ ಈ ಕೃತಿ ಚಾರಿತ್ರಿಕ ಪ್ರಾಮುಖ್ಯತೆ ಪಡೆದುಕೊಂಡಿದೆ.

ಇದು ಡಾ. ಹಂಪನಾ ಅವರಿಗೆ ಸಮರ್ಪಿಸಲ್ಪಟ್ಟ ಮೊಟ್ಟ ಮೊದಲ ಸಂಭಾವನಾಗ್ರಂಥ.

ಸಂ.

## ೩. ಸಂಕರ್ಷಣ

### ಅಭಿನಂದನ ಗ್ರಂಥ

| | | |
|---|---|---|
| ಡೆಮ್ಮಿ 1/8 ಆಕಾರ, ಪುಟಗಳು | : | 368+xxxii |
| ಪ್ರಥಮ ಮುದ್ರಣ | : | 1989 |
| ಸಂಪಾದಕರು | : | ಜಿ. ಜ್ಞಾನಾನಂದ, ಪ್ರೊ. ಸಂಜೀವ ಶೆಟ್ಟಿ |
| ಪ್ರಕಾಶಕರು | : | ಡಾ. ಹಂಪನಾ ಅಭಿನಂದನ ಸಮಿತಿ, ಬೆಂಗಳೂರು |

ಡಾ. ಹಂಪನಾ ಅವರಿಗೆ ಐವತ್ತು ವಸಂತಗಳು ತುಂಬಿದ ಸಂದರ್ಭದಲ್ಲಿ ಅವರಿಗೆ ಸಂಭಾವನಾ ಗ್ರಂಥವನ್ನು ಅರ್ಪಿಸಬೇಕೆಂದು ಅವರ ಅಭಿಮಾನಿಗಳು ಹಾಗೂ ಶಿಷ್ಯರು ಮಾಡಿದ ಪ್ರಯತ್ನದ ಸತ್ಫಲವಾಗಿ ಈ ಕೃತಿಯು ರೂಪುಗೊಂಡಿದೆ. ಈ ಸಂಭಾವನಾ ಗ್ರಂಥದಲ್ಲಿ ಹಂಪನಾ ಅವರ ಆಡಳಿತ ಸಾಮರ್ಥ್ಯ, ನಡವಳಿಕೆ, ವ್ಯಕ್ತಿತ್ವ, ಹಾಗೂ ಬಹುಮುಖಿ ಸಾಧನೆಗೆ ಸಂಬಂಧಿಸಿದಂತೆ ಅವರನ್ನು ಹತ್ತಿರದಿಂದ ಬಲ್ಲವರು ಮತ್ತು ಅವರ ಸಾಹಿತ್ಯಸೇವೆಯ ಮಹತ್ವವನ್ನರಿತ ವಿದ್ವಾಂಸರ ಲೇಖನಗಳನ್ನು ಸಂಕಲಿಸಿ ಪ್ರಕಟಿಸಲಾಗಿದೆ.

ಇದರಲ್ಲಿ ಒಟ್ಟು 73 ಲೇಖನಗಳಿವೆ. ನಿರಂಜನ, ಬಸವರಾಜಕಟ್ಟೀಮನಿ, ಚದುರಂಗ, ಚಂಪಾ, ಚಂದ್ರಶೇಖರ ಕಂಬಾರ, ರಾ. ಯ. ಧಾರವಾಡಕರ, ಸೂ. ರಂ. ಎಕ್ಕುಂಡಿ, ಅನುಪಮಾ ನಿರಂಜನ, ಎಂ. ಕೆ. ಇಂದಿರಾ, ಗೀತಾ ಕುಲಕರ್ಣಿ, ವ್ಯಾಸರಾಯ ಬಲ್ಲಾಳ, ಎಚ್. ಜಿ. ಲಕ್ಕಪ್ಪಗೌಡ, ಪೋಲಂಕಿ ರಾಮಮೂರ್ತಿ, ಚನ್ನಣ್ಣ ವಾಲಿಕಾರ- ಮೊದಲಾದವರ ಲೇಖನಗಳು ಈ ಕೃತಿಯಲ್ಲಿವೆ.

ಇದು ಹಂಪನಾಗೆ ಒಪ್ಪಿಸಿದ ಎರಡನೆಯ ಸಂಭಾವನೆ ಗ್ರಂಥ.

ಸಂ.

# ೨. ಬರಹ ಬಾಗಿನ

**ಅಭಿನಂದನ ಗ್ರಂಥ**

| | | |
|---|---|---|
| ಡೆಮ್ಮೆ 1/8 ಆಕಾರ, ಪುಟಗಳು | : | 630+xii |
| ಪ್ರಥಮ ಮುದ್ರಣ | : | 1996 |
| ಪ್ರಧಾನ ಸಂಪಾದಕರು | : | ಪ್ರೊ. ಎಚ್. ವಿ. ನಾಗೇಶ್ |
| ಪ್ರಕಾಶಕರು | : | ಸಹನಾ ಪ್ರಕಾಶನ, ಪದ್ಮಾಂಬ ನಿಲಯ. ಸಂಗೊಳ್ಳಿ ರಾಯಣ್ಣ ರಸ್ತೆ, ಶಿವಮೊಗ್ಗ-577201. |

ಡಾ. ಹಂಪನಾ ಅವರಿಗೆ ಅರವತ್ತು ವರ್ಷಗಳು ತುಂಬಿದ ಸವಿನೆನಪಿಗೆ ಗೌರವ ಗ್ರಂಥವಾಗಿ 'ಬರಹ ಬಾಗಿನ'ವನ್ನು ಅವರ ಅಭಿಮಾನಿಗಳು, ಗೆಳೆಯರು, ಹಾಗೂ ಹಿತೈಷಿಗಳೆಲ್ಲರೂ ಸೇರಿ ಸಮರ್ಪಿಸಿದರು. ಮೂರು ಭಾಗಗಳನ್ನು ಹೊಂದಿರುವ ಈ ಕೃತಿಯಲ್ಲಿ ಹಂಪನಾ ಅವರ ಆತ್ಮಚರಿತ್ರೆಯಾದ 'ಭಾಗ್ಯವಂತ' ಮೊದಲ ಸ್ಥಾನದಲ್ಲಿದೆ. ನಂತರ ಹಂಪನಾ ಅವರ ಪತ್ನಿ ಡಾ. ಕಮಲಾ ಹಂಪನಾ ಅವರ ಲೇಖನವಿದೆ.ಮುಂದಿನ ಭಾಗದಲ್ಲಿ ಹಂಪನಾ ಅವರ ಮಾರ್ಗದರ್ಶನದಲ್ಲಿ ಪಿ. ಎಚ್. ಡಿ. ಮಾಡಿದ ಹಾಗೂ ಮಾಡುತ್ತಿರುವವರ ಲೇಖನಗಳು ಮತ್ತು ಹಂಪನಾ ಅವರ ಬಗ್ಗೆ, ಅವರ ಗುಣವಿಶೇಷಗಳ ಬಗ್ಗೆ ಅವರನ್ನು ಹತ್ತಿರದಿಂದ ಕಂಡ ಹಿರಿಯರ ಬರಹಗಳಿವೆ.

ಎರಡನೆಯ ಭಾಗದಲ್ಲಿ ಹಂಪನಾ ಅವರ ಕೃತಿಗಳ ಬಗ್ಗೆ ಹಲವು ವಿದ್ವಾಂಸರ ಲೇಖನಗಳಿವೆ. ಮೂರನೆಯ ಭಾಗದಲ್ಲಿ ಭಾಷಾ ವಿಜ್ಞಾನ, ಜೈನಧರ್ಮ, ಸಾಹಿತ್ಯ, ಸಂಸ್ಕೃತಿ, ಸಂಶೋಧನೆ-ಶಾಸನ ಸಾಹಿತ್ಯ, ಗ್ರಂಥ ಸಂಪಾದನೆ, ಜಾನಪದ, ಹಾಗೂ ಸಂಕೀರ್ಣ ವಿಷಯಗಳನ್ನೊಳಗೊಂಡ ಸಂಶೋಧನ ಲೇಖನಗಳಿವೆ. ಒಟ್ಟಾರೆ ಇಲ್ಲಿರುವ 70 ಲೇಖನಗಳೂ ಸಹ ಒಂದಕ್ಕಿಂತ ಒಂದು ಶ್ರೇಷ್ಠ ಮಟ್ಟದವುಗಳಾಗಿದ್ದು ಆಸಕ್ತರಿಗೆ ಉತ್ತಮ ಮಾಹಿತಿಯನ್ನು ನೀಡುವಂತಹವುಗಳಾಗಿವೆ.

ಟಿ.ವಿ. ವೆಂಕಟಾಚಲಶಾಸ್ತ್ರಿ, ಎಂ.ಎಂ. ಕಲಬುರ್ಗಿ, ಸಿ.ಪಿ.ಕೆ, ಅ. ಸುಂದರ, ಎಂ.ಬಿ. ನೇಗಿನಹಾಳ, ಸೋಮಶೇಖರ ಇಮ್ರಾಪೂರ, ತಾಳ್ತಜೆ ವಸಂತಕುಮಾರ, ಎನ್.ಎಸ್. ತಾರಾನಾಥ, ಜಿ.ಎಂ. ಹೆಗಡೆ, ರಾಗೌ, ಶೇಷಶಾಸ್ತ್ರಿ, ಲಕ್ಷ್ಮಣ ತೆಲಗಾವಿ- ಮೊದಲಾದವರ ಲೇಖನಗಳಿವೆ.

ಇದು ಹಂಪನಾಗೆ ಒಪ್ಪಿಸಿದ ನಾಲ್ಕನೆಯ ಸಂಭಾವನೆ ಗ್ರಂಥ.

ಸಂ.

## ೫. ಹಂಗ್ರಂಥಾವಳಿ

**ಗ್ರಂಥಗಳ ಪರಿಚಯ**

| | | |
|---|---|---|
| ಡೆಮ್ಮೈ 1/8 ಆಕಾರ, ಪುಟಗಳು | : | ix+4+132 |
| ಪ್ರಥಮ ಮುದ್ರಣ | : | ೧೯೯೭ |
| ಪ್ರಕಾಶಕರು | : | ಸಾಹಿತ್ಯ ಸಂಗಮ ಮಿತ್ರಕೂಟ, ಬೆಂಗಳೂರು560060 |
| ಸಂಪಾದಕರು | : | ತಮಿಳ್ ಸೆಲ್ವಿ, ಸ್ಮಿತಾರೆಡ್ಡಿ |
| ಮುನ್ನುಡಿ | : | ಪ್ರೊ. ದೊಡ್ಡರಂಗೇಗೌಡ |

ಹಂಪ ನಾಗರಾಜಯ್ಯ ೧೯೯೭ರವರೆಗಿನ ಅವಧಿಯಲ್ಲಿ ಬರೆದಿರುವ ಗ್ರಂಥಗಳ ತಾಂತ್ರಿಕ ವಿವರ ಸಹಿತ ಪರಿಚಯ ಮಾಡಿರುವ ಉಪಯುಕ್ತ ಗ್ರಂಥ. ಒಬ್ಬ ಲೇಖಕರ ಜೀವನ ಚರಿತ್ರೆ ಇರುವ ಪುಸ್ತಕಗಳು ಸಾಕಷ್ಟಿವೆ. ಆದರೆ ಕೃತಿಗಳನ್ನು ತಾಂತ್ರಿಕ ಮಾಹಿತಿ, ವಿಮರ್ಶಕರ ಅಭಿಪ್ರಾಯ ಒಟ್ಟಿಗೆ ಒಂದೇ ಗ್ರಂಥದಲ್ಲಿ ಅಡಕವಾಗಿ ಪರಿಚಯಿಸುವ ಪುಸ್ತಕಗಳು ಅತಿ ವಿರಳ. ಪ್ರಸ್ತುತ ಗ್ರಂಥ ಆ ವಿರಳ ಕೃತಿಗಳಲ್ಲಿ ಒಂದು.

ಇದು ಹಂಪನಾಗೆ ಒಪ್ಪಿಸಿದ ಐದನೆಯ ಸಂಭಾವನೆ ಗ್ರಂಥವೂ ಹೌದು.

ಸಂ.

# ಡಾ. ಹಂಪನಾ ಅವರ ಲೇಖನಗಳು:

## I. ವ್ಯಕ್ತಿಚಿತ್ರಗಳು:

(ಕ್ರಮಸಂಖ್ಯೆ. ಲೇಖನದ ಹೆಸರು. ಪತ್ರಿಕೆಯ ಹೆಸರು. ಪ್ರಕಟಿತ ವರ್ಷ)

1. ಭಾರತದ ಕವಿ ರವೀಂದ್ರರು, ಪ್ರಬುದ್ಧ ಕರ್ನಾಟಕ, 1961.
2. ಇನ್ನೊಂದು ಜ್ಯೋತಿ ಆರಿತು, ಗುರುದೇವ. 8-8, 1964.
3. ಕರ್ಮಯೋಗಿ ಕಾರಂತರು, ಗುರುದೇವ, 1964.
4. ಮಂಜೇಶ್ವರ ಗೋವಿಂದಪ್ಪೈ, ಸಮರಸ, ತುಮಕೂರು, 1964.
5. ರವೀಂದ್ರನಾಥ ಟಾಗೂರರು,ವೀರಭಾರತಿ, 1963.
6. ನೆಹರು- ಲೇಖಕರಾಗಿ, ಮಲೆನಾಡು, 1965.
7. ಆಚಾರ್ಯ ತೀನಂಶ್ರೀ, ಪ್ರಜಾವಾಣಿ, 18-8-66.
8. ತರಗತಿಯಲ್ಲಿ ತೀನಂಶ್ರೀ, ಕನ್ನಡ ನುಡಿ, ಆಕ್ಟೋಬರ್. 1966.
9. ಬಿ. ಎಂ. ಶ್ರೀ ವ್ಯಕ್ತಿತ್ವ ಮತ್ತು ಸಾಧನೆ, ದರ್ಶನ, ಬೆಂಗಳೂರು 1967.
10. ಡಾ. ಆ. ನೇ. ಉಪಾಧ್ಯೆ, ವ್ಯಕ್ತಿಪರಿಚಯ, ಗುರುದೇವ, 11-8, 1967.
11. ಪ್ರೊ|| ಆದಿನಾಥ ನೇಮಿನಾಥ ಉಪಾಧ್ಯೆ, ಕನ್ನಡ ನುಡಿ, ಮೇ. 1967.
12. ಶಂಕರಗೌಡರು (ವ್ಯಕ್ತಿಪರಿಚಯ), ಪ್ರಜಾಮತ, 12-11-1967.
13. ವಿಶ್ವವಿಭೂತಿಗಳ ಸಾಲಿನಲ್ಲಿ ಬಸವಣ್ಣನವರು, ಬಸವ ಪರುಷ, 1975.
14. ಪರಿಷತ್ತು ಮತ್ತು ಕೃಷ್ಣಶಾಸ್ತ್ರಿಗಳು, ಪ್ರಬುದ್ಧ ಕರ್ನಾಟಕ, ಮೇ, 1968.
15. ಉಮಾಶಂಕರ ಜೇಥಲಾಲ ಜೋಶಿ, ಪ್ರಜಾಮತ, 16-6-1968
16. ಜ್ಞಾನಪೀಠ ಪ್ರಶಸ್ತಿ ವಿಜೇತ ಕುವೆಂಪು, ಪ್ರಜಾಮತ, 23-6-1968.
17. ಕರ್ನಾಟಕದ ಕೆಲವು ಹಿರಿಯ ಸಾಹಿತಿಗಳು, ಜಾಗೃತ ಕರ್ನಾಟಕ, ರಾಜ್ಯೋತ್ಸವ ಸಂಚಿಕೆ, 1968.
18. ಜೆ. ಎಫ್. ಫ್ಲೀಟ್, ಜೀವನ 29-1, ಜನವರಿ. 1969.
19. ಚಾವುಂಡರಾಯನ ವ್ಯಕ್ತಿತ್ವ, ಗುರುಕುಲ (ಶ್ರೀ ಬೃಹನ್ಮಠ ಚಿತ್ರದುರ್ಗ) ಮಾರ್ಚಿ. 1970.
20. ಡಾ. ಡಿ. ಎಲ್. ಎನ್., ಪ್ರಜಾಮತ, ಮಾರ್ಚಿ 1970.
21. ಝೂನ್ಸಿರಾಣಿ ಲಕ್ಷ್ಮೀಬಾಯಿ,ಜೀವನ, ಆಗಸ್ಟ್ 1970.
22. ಗುರುಸ್ಮರಣೆ, ಕನ್ನಡ ನುಡಿ, ಡಿ. ಎಲ್. ಎನ್. ವಿಶೇಷಾಂಕ, ಜುಲೈ 1971.
23. ರವೀಂದ್ರ ಕಲಾಕ್ಷೇತ್ರದ ಶಿಲ್ಪಿ ಕಾ. ಸ. ಧರಣೇಂದ್ರಯ್ಯನವರು, ವಿವೇಕಾಭ್ಯುದಯ, 1971. ಈ ಲೇಖನ ಜೀವನ ಪತ್ರಿಕೆಯಲ್ಲೂ 'ಸರ್ವೋದಯ ಸಾಧಕ ಸಾಹಿತಿ'-

ಗ್ರಂಥದಲ್ಲೂ (1971) ಕನ್ನಡ ನುಡಿ, ಸೆಪ್ಟೆಂಬರ್ 1977 ಸಂಚಿಕೆಯಲ್ಲೂ ಪ್ರಕಟವಾಗಿದೆ.

24. ಯುಗಪುರುಷ ಗಾಂಧಿ, ಜೀವನ, ಅಕ್ಟೋಬರ್ 1971.
25. ಎಲ್.ವಿ. ರಾಮಸ್ವಾಮಿ ಅಯ್ಯರ್, ಮೈ.ವಿ.ವಿ.ದ ವಿಶ್ವಕೋಶ, 1973.
26. ತೀನಂಶ್ರೀ, ವಿಶ್ವಕೋಶ, 1973.
27. ಆಸ್ಥಾನ ವಿದ್ವಾನ್ ಎ. ಶಾಂತಿರಾಜಶಾಸ್ತ್ರಿಗಳು, ಸನ್ಮತಿ, 18-1, ಜನವರಿ, 1974.ಪು. 11-13.
28. ಪುರುಷ ಸರಸ್ವತಿ ರಾಜರತ್ನಂ, ರಾಜಮಾರ್ಗ, 1981, +ತರಳಬಾಳು 6-4, ಏಪ್ರಿಲ್ 1981
29. ಸ್ವಾಭಿಮಾನಿ (ಸಾಲಿಯವರನ್ನು ಕುರಿತು), ಸಾಲಿ ರಾಮಚಂದ್ರರಾಯ (ಗೌರವ ಗ್ರಂಥ), 1980.
30. ಡಾ. ಎ. ಎನ್. ಮೂರ್ತಿರಾವ್, ಬದುಕು ಬರೆಹ, ಕನ್ನಡ ನುಡಿ. 16-10-1982.
31. ಗೋವಿಂದ ಪೈ- ಸ್ಮೃತಿಕೃತಿ, ಕನ್ನಡ ನುಡಿ, 1984.
32. ಜಿ. ಪಿ. ರಾಜರತ್ನಂ, ತರಂಗ, ಡಿಸೆಂಬರ್, 1984.
33. ಅಪ್ಪಟ ಚಿನ್ನ, "ಚದುರಂಗ : ವ್ಯಕ್ತಿ, ಅಭಿವ್ಯಕ್ತಿ", 1988.
34. ಸೋಲೊಪ್ಪದ ಚೇತನ, ನಿರಂಜನ: ಅಭಿನಂದನ, 1986.
35. ಇಬ್ಬರು ಪ್ರಬಂಧಕಾರರು, ವೀ. ಸೀ. - ಎನ್. ಪಿ. : ಪ್ರಬಂಧ- ಪ್ರಪಂಚ, 1990. ಪುಟ. 270-278.
36. ಸಂಶೋಧನಕ್ಷೇತ್ರದ ದಿಗ್ಗಜ ಡಾ. ಆ. ನೇ. ಉಪಾಧ್ಯೆ: ತರಂಗ 16-10-1988.
37. ದೇವರಾಜ ಅರಸು: ಸ್ಮೃತಿ, ಕೃತಿ: ತಾಯಿನುಡಿ, ಮುಂಬಯಿ, ದೀಪಾವಳಿ ಸಂಚಿಕೆ, 1988.

**II. ಭಾಷಾ ವಿಜ್ಞಾನ:**

38. ಭಾಷಾ ಶಾಸ್ತ್ರದ ರೂಪರೇಖೆಗಳು, ಅರುಣ, ದಾವಣಗೆರೆ, 1961.
39. ರೇಫ- ಶಕಟರೇಫ, ಕನ್ನಡನುಡಿ, 28-10, 1965.
40. ತುಳು ಭಾಷೆಯ ಸ್ವರೂಪ, ಗುರುದೇವ, 1965.
41. ಭಾಷಾ ವಿಜ್ಞಾನ ಪಾರಿಭಾಷಿಕ ಪದಗಳು, ಪರಿಷತ್ಪತ್ರಿಕೆ, 1965.
42. ಮರ್ರೆಬಾರ್ನಸನ್ ಎಮಿನೊ, ಕನ್ನಡ ನುಡಿ 29-2, 1966
43. ಪ್ರಾಧ್ಯಾಪಕ ಫ್ರಾಂಜ್‌ಬಾಪ್,
    1. ಗುರುದೇವ 1994.
    2. ಭಾರತ ಅಮೇರಿಕ ಸಂಘ ಪುರವಣಿ, 1965.

44. ಉತ್ತರ ಕನ್ನಡ ಭಾಷೆ, ಗುರುದೇವ 10-4, 1966.
45. ಆರು ದ್ರಾವಿಡ ಭಾಷೆಗಳು, ಅಜಂತ, ಫೆಬ್ರವರಿ, 1966.
46. ಲಿಯೊನಾರ್ಡ್ ಬ್ಲೂಮ್ ಫೀಲ್ಡ್, ಕನ್ನಡ ನುಡಿ, ಮೇ. 1966.
47. ಜಾರ್ಜ್ ಎಬ್ರಹಾಂ ಗ್ರಿಯರ್ಸನ್, ಕನ್ನಡ ನುಡಿ, ಜೂನ್, 1966.
48. ರಾಬರ್ಟ್ ಕಾಲ್ಡ್‌ವೆಲ್, ಗುರುದೇವ, 1966.
49. ಥಾಮಸ್‌ಬರೊ, ಗುರುದೇವ, 1966.
50. ಕೆಲವು ಕೃತಕ ಭಾಷೆಗಳು, ಗುರುದೇವ 10-11, 1966.
51. ಎಡ್ವರ್ಡ್ ಪ್ರೊಕೊಸ್ಚ್, ಗುರುದೇವ 10-12-1966.
52. ಜನಗಣತಿ-ಭಾಷಾ ಸಮೀಕ್ಷೆ, ಕರ್ನಾಟಕ ವಿ. ವಿ. ಪತ್ರಿಕೆ, 1966.
53. ಮಾರಿಸ್‌ಬ್ಲೂಮ್‌ಫೀಲ್ಡ್, ಗುರುದೇವ. 1966.
54. ಎಡ್ಗರ್ ಹೂವಾರ್ಡ್‌ಸ್ಟುಟಿವಾಂಟ್, ಮಲೆನಾಡು 13-8-1966.
55. ಫರ್ಡಿನಂಡ್ ಡಿ ಸಸ್ಸೂರ್, ಸಿದ್ಧಗಂಗಾ, 1966.
56. ವಿಭಿನ್ನ ಭಾಷಾ ಸಂಸ್ಕೃತಿ ವರ್ಗಗಳ ಕಾಣಿಕೆ (ಅನು), ಯುಗಯಾತ್ರೀ ಭಾರತೀಯ ಸಂಸ್ಕೃತಿ, ಮೈ. ವಿ. ವಿ. 1967
57. ಭಾಷಾ ಮೂಲದ ಕೆಲವು ಸಿದ್ಧಾಂತಗಳು, ಸಿದ್ಧಗಂಗಾ, 1967.
58. ದರ್ಪಣಾವಲೋಕನ, ಕನ್ನಡ ನುಡಿ, ನವೆಂಬರ್, 1967.
59. ಭಾಷೆಯ ಬೆಳವಣಿಗೆ, ಶಿವಮೂರ್ತಿಶಾಸ್ತ್ರಿಗಳ ಅಭಿನಂದನ ಗ್ರಂಥ 'ದೇವಗಂಗೆ', 1968.
60. ರ್‍ಯಾಸಮಸ್ ಕ್ರಿಶ್ಚಿಯನ್‌ರಾಸ್ಕ, ಸಿದ್ಧಗಂಗಾ, ಜೂನ್. 1969.
61. ಗಾಂಧೀಜಿ ಮತ್ತು ಜನಭಾಷೆಗಳು, ಜನಮತ1-1, 1969.
62. ಭಾಷಾ ವಿಜ್ಞಾನಿ ಎಡ್ವರ್ಡಸಪೀರ್, ಸವಿನೆನಪು, ವೆಂಕಣ್ಣಯ್ಯ ಸ್ಮಾರಕಗ್ರಂಥ, 1970.
63. ಕನ್ನಡದಲ್ಲಿ ಭಾಷಾವಿಜ್ಞಾನದ ಬೆಳವಣಿಗೆ, ಚಿನ್ನದ ಬೆಳಸು, 1970.
64. ದ್ರಾವಿಡ ಭಾಷೆಗಳ ಸ್ವರವ್ಯವಸ್ಥೆ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, 972.
65. ಕನ್ನಡದಲ್ಲಿ ಆಸ್ಟ್ರೋ- ಏಷಿಯಾಟಿಕ್ ಶಬ್ದಗಳು, ಬೆಳ್ಗೊಲ, 1981
66. ಕನ್ನಡ ಭಾಷೆಯಲ್ಲಿ ಕಾಕಲ್ಯಘರ್ಷ ಧ್ವನಿ, ಸಾಧನೆ 5-3, 1976.
67. ಕೇಶಿರಾಜ ಮತ್ತು ಶಬ್ದಮಣಿ ದರ್ಪಣ. ವೀರ ಭಾರತಿ, 3-12. 1961.

**III. ಶಬ್ದಾರ್ಥಜಿಜ್ಞಾಸೆ: ನಿಘಂಟುಶಾಸ್ತ್ರ.**

68. ಅದಗುಂತಿ- ದಗುಂತಿ: ಗುರುದೇವ, 1964.
69. ಪಂಪನ ನಾಲ್ಕು ಪದಗಳು: ಗುರುದೇವ, 1964.
70. ಡೊಕ್ಕರಿ ಒಂದು ವಿಚಾರ: ಕನ್ನಡ ನುಡಿ 28-2-1965.
71. ಮೊಲಗಳ್ತಲೆ: ಕನ್ನಡ ನುಡಿ. 1965.

72. ಬಾಷ್ಪ- ಒಂದು ವಿವೇಚನೆ: ಕನ್ನಡ ನುಡಿ. ಸೆಪ್ಟೆಂಬರ್ 1966.
73. ಬಿಚ್ಚಳಿಸು: ಉಪಾಯನ, 1967.
74. ವಸ್ತ್ರನಾಮ ವಿಶೇಷ: ಸಾಧನೆ 1-1, 1972.
75. ಕೀರ್ತಿ - ಒಂದು ವಿವೇಚನೆ: ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ. 1972.
76. ಎಸಗು: ಜೀವನ, 1973.
77. ಎರ್ದೆ: ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ. 1972.
78. ಕಳ್ವಪ್ಪು-ಕಟವಪ್ರ: ಸಾಧನೆ 2-4, 1973.
79. 'ಕುಟುಪು' ಶಬ್ದದ ಅರ್ಥ: ಜೀವನ, 1973.
80. ಸಂಚಿವಾರ ಶಬ್ದಾರ್ಥ ಜಿಜ್ಞಾಸೆ: ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, 1982.
81. ಪೊನ್ನ ಎರಡು ಹೊಸ ಶಬ್ದಗಳು: ಗುರುದೇವ 1978. ಜನವರಿ.
82. ಪೊನ್ನ ಮತ್ತು ಕನ್ನಡ ನಿಘಂಟು: ಕರ್ನಾಟಕ ಭಾರತಿ. 1978.
83. ಚೀರಘಟ್ಟಿ- ಒಂದು ಟಿಪ್ಪಣಿ: 1982 ಮಾರ್ಚಿ.
84. ಅತ್ತಪರ - ಶಬ್ದಾರ್ಥ ಜಿಜ್ಞಾಸೆ, ಕಮ್ಮಟದ ಕಿಡಿಗಳು. 1980.
85. ಕರ್ಣಪಾರ್ಯ ಕವಿ ಮತ್ತು ಕನ್ನಡ ನಿಘಂಟು.
86. ಕೂರ್ಚಕ- ಕೂಚಿಭಟ್ಟ: ಸಾಧನೆ. ಸಂಪುಟ 6-ಸಂಚಿಕೆ. 4.
87. ಕಳಿರನ್- ಶಬ್ದಾರ್ಥ ಜಿಜ್ಞಾಸೆ: ಸಾಧನೆ. ಸಂಪುಟ 3-ಸಂಚಿಕೆ 4.
88. ಬೂತು-ಶಬ್ದಾರ್ಥ ವಿವೇಚನೆ: ಕಮ್ಮಟದ ಕಿಡಿಗಳು. 1980.
89. ಪೊನ್ನ ಬಳಸಿದ ಅಪೂರ್ವ ಶಬ್ದ ತರಂಬು: ಕಮ್ಮಟದ ಕಿಡಿಗಳು. 1980.
90. ಡೊಕ್ಕರಿ- ಪುನರ್ ಪರಿಶೀಲನೆ: ಸಾಧನೆ. ಸಂಪುಟ 4. ಸಂಚಿಕೆ 2.
91. ಸೂಕ್ತಿಸುಧಾರ್ಣವದ ಎರಡು ಪದ್ಯಗಳು: ಕನ್ನಡ ನುಡಿ. 1964.
92. ಪಂಪನ ಎರಡು ಪದ್ಯಗಳು: ಪ್ರಬುದ್ಧ ಕರ್ನಾಟಕ. 46-1, 1963.
93. ಸೂಕ್ತಿ ಸುಧಾರ್ಣವದ ಒಂದು ಪದ್ಯ, ಪ್ರಬುದ್ಧಕರ್ನಾಟಕ, 46-1, 1964.
94. ವಿಕ್ರಮಾರ್ಜುನ ವಿಜಯದ ಎರಡು ಪದ್ಯಗಳು: ಸಮರಸ. 1964.

**IV. ಕವಿಕಾವ್ಯ ವಿಮರ್ಶೆ**

95. ಮಿತಭಾಷಿ ಪಂಪ: ಪುಷ್ಪಾಂಜಲಿ, 1957.
96. ಬಸವಣ್ಣನವರು ಬಣ್ಣಿಸಿರುವ ಭಕ್ತಿ-ಭಕ್ತ: ಮಹಾರಾಜ ಕಾಲೇಜು ಪತ್ರಿಕೆ 1958.
97. ರತ್ನಾಕರವರ್ಣಿ: ಗುರುದೇವ 1960.
98. ಸಾಂಗತ್ಯದ ಕೆಲವು ಸಂಗತಿಗಳು: ಬ್ರಬುದ್ಧ ಕರ್ನಾಟಕ, 42-1, 1960.
99. ರನ್ನನ ದುರ್ಯೋಧನ ದುರಂತ ನಾಯಕನೆ?: ಮಲೆನಾಡು, 8-1, 1961.ಜನವರಿ.
100. ರನ್ನ ಕವಿಯ ಕಾಲ ವಿಚಾರ, ವೀರ ಭಾರತಿ 4-7. 1961.

101. ಭಾರತದ ಕವಿ ರವೀಂದ್ರರು: ಪ್ರಬುದ್ಧ ಕರ್ನಾಟಕ. 1961.
102. ಮಹಾಕವಿ ರತ್ನಾಕರ: ಕನ್ನಡ ವಾಗ್ವಿಲಾಸ ವೈಭವ. 1964.
103. ಸ್ವತಂತ್ರ ಕೃತಿ ಸಮಯ ಪರೀಕ್ಷೆ: ಗುರುದೇವ 9-3, 1964.
104. ಪಂಪ ಭಾರತದಲ್ಲಿ ವೀರರಸ: ಆಕಾಶವಾಣಿ. 6.10.1964.
105. ಪಂಪ ಭಾರತದಲ್ಲಿ ಪರಾಕ್ರಮ: ಸನ್ಮತಿ, 9-7.1965.
106. ಬೊಮ್ಮಣ್ಣ ಕವಿ:ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, 52. 2, 1971.
107. ದ. ಕ. ಜಿಲ್ಲೆಯ ಕವಿ ಕೋಗಿಲೆ: ದರ್ಶನ, 15.2.1971.
108. ಕನ್ನಡವನ್ನುದ್ಧರಿಸಿದ ಶಿವಶರಣರು:ವಯಸ್ಕರ ಶಿಕ್ಷಣ ಸಮಿತಿ ವಿಶೇಷಾಂಕ, 1967.
109. ಚಂಪೂ ಸಾಹಿತ್ಯ: ಪ್ರಬುದ್ಧ ಕರ್ನಾಟಕ, 1980.
110. ಚಾವುಂಡರಾಯನ ವ್ಯಕ್ತಿತ್ವ: ಗುರುಕುಲ, 1970 ಮಾರ್ಚಿ.
111. ಅಭಿನವ ಮಂಗರಸ: ವಿಶ್ವಕೋಶ ಸಂಪುಟ. 1, 1969. ಅಕ್ಟೋಬರ್.
112. ವಿಶ್ವಕವಿ ಪಂಪ: ಜೀವನ, 1971.ಜೂನ್.
113. ಚಂದ್ರಸಾಗರವರ್ಣಿ: ಬ್ರಹ್ಮಣಾಂಕರು ಅಭಿನ್ನರೆ? (ವಿವೇಕಾಭ್ಯುದಯ) ಅಕ್ಟೋಬರ್, 1971.
114. ಚಂದ್ರಸಾಗರವರ್ಣಿ: ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ 1973 ಡಿಸೆಂಬರ್.
115. ನಾಗಕುಮಾರ ಚರಿತೆಗಳು:ವಿಶ್ವಕೋಶ. 1973.
116. ಕಾವ್ಯಾವಲೋಕನದ ಒಂದು ಪದ್ಯ: ಸಾಧನೆ 2-2, 1973.
117. ಶಾಂತಿಪುರಾಣದಲ್ಲಿ ಜಿನಚಂದ್ರಮುನಿ:ವಿವೇಕಾಭ್ಯುದಯ, 1974 ಫೆಬ್ರವರಿ.
118. ಪಂಪನ ವ್ಯಕ್ತಿತ್ವ: ಪಂಪ ಒಂದು ಅಧ್ಯಯನ, (ಸಂ) ಜಿ.ಎಸ್. ಶಿವರುದ್ರಪ್ಪ, 1974.
119. ನೇಮಿನಾಥ ಪುರಾಣ: ಐ. ಬಿ. ಎಚ್. 1974.
120. ದುರ್ಗಸಿಂಹನ ಪಂಚತಂತ್ರದ ಪರಿಶೀಲನೆ: ಮಂಗಳಾವಲೋಕನ, 1976.
121. ಚಾಣಾಕ್ಯರಿಸಿಯ ಕಥೆ, ಸಾಧನೆ 3-4, 1974.
122. ಪೊನ್ನ ಮತ್ತು ಬ್ರಹ್ಮಶಿವ: ಗುರುದೇವ 1977. ಡಿಸೆಂಬರ್.
123. ಪೊನ್ನ ಮತ್ತು ಜಾನಪದ: ಸನ್ಮತಿ. 1977 ಡಿಸೆಂಬರ್.
124. ಪೊನ್ನ ಮತ್ತು ಶ್ರೀಷೇಣನ ಕಥೆ: ಸನ್ಮತಿ. 1978 ಜನವರಿ.
125. ಪೊನ್ನನ ವ್ಯಕ್ತಿತ್ವ: ಗುರುದೇವ 1982. ಏಪ್ರಿಲ್ - ಮೇ.
126. ಪೊನ್ನ ಮತ್ತು ಸಂಸ್ಕೃತ: ಕನ್ನಡ ನುಡಿ 1982. ಜೂನ್. 15. 45-12.
127. ಕವಿ ಶಿಶುಮಾಯಣನ ಕಾಲ: ಸಾಧನೆ. 6-1.
128. ನಾಗವರ್ಮನ ಕಾಲವಿಚಾರ: ಪರಿಶೀಲನೆ ಸಾಧನೆ, 7-1.
129. ಮಂಗರಸನ ಕಾಲ- ಸಣ್ಣಟಿಪ್ಪಣಿ.

130. ನವ್ಯಕಾವ್ಯ: ಸಾಧನೆ, 7-2.
131. ವಡ್ಡಾರಾಧನೆಯ ಪಾಠಾಂತರಗಳು. ಕ. ಸಾ. ಪ. ಪ. 67-2, 1982.
132. ವಡ್ಡಾರಾಧನೆಯ ಪಾಠಾಂತರಗಳು, ತರಳಬಾಳು, ಏಪ್ರಿಲ್ 1982 ಪು. ೯-೧೦.
133. ಕವಿತೆಯ ಪರಿಕರ, ತರಳಬಾಳು, ೩-೧, ಅಕ್ಟೋಬರ್1976, ಪು. 37-43.
134. ವಡ್ಡಾರಾಧನೆ-ಸಂಸ್ಕೃತ ವರ್ಧಮಾನ ಪುರಾಣ, ಕನ್ನಡ ನುಡಿ 46-8. 1983.
135. ವಡ್ಡಾರಾಧನೆ- ಭ್ರಾಜಿಷ್ಣು- ಬೆಳ್ಗೊಳ, ಸಣ್ಣಟಿಪ್ಪಣಿ. ದೀಪ. 1971. ಮೇ.
136. ವಡ್ಡಾರಾಧನೆಯ ಮೂರುಶ್ಲೋಕಗಳು. ಕ. ಸಾ. ಪ. ಪತ್ರಿಕೆ. 69-1, 1984.
137. ಕಾವ್ಯಾವಲೋಕನದ ಒಂದು ಪದ್ಯ: ಸಾಧನೆ 2.2, 1973.
138. ದೇವಸೇನಗಣಿ ಮತ್ತು ವಡ್ಡಾರಾಧನೆ: ಲೋಚನ 1-1, 1983.
139. ವಡ್ಡಾರಾಧನೆಯ ಕಾಲ- ಮತ್ತಷ್ಟು ಸಾಮಗ್ರಿ: ಕ. ಸಾ. ಪ. ಪತ್ರಿಕೆ, 68-1, 1983.
140. ಭೋಜ ಪ್ರಬಂಧ ಮತ್ತು ವಡ್ಡಾರಾಧನೆ: ಕನ್ನಡ ನುಡಿ 46-9, 1983.
141. ವಡ್ಡಾರಾಧನೆ- ಚಾವುಂಡರಾಯ ಪುರಾಣ. ಕ. ಸಾ. ಪ. ಪ. 66-1.1983.
142. ಕುಂದಕುಂದ ಆಚಾರ್ಯರು ಮತ್ತು ವಡ್ಡಾರಾಧನೆ : ಕನ್ನಡನುಡಿ, 1983. ಏಪ್ರಿಲ್.
143. ಮಾಘನಂದಿಯವರ ಕೃತಿಗಳಲ್ಲಿ ಉಮಾಸ್ವಾಮಿಯವರ ಪ್ರಭಾವ:ಗುರುದೇವ 27-7, 1983 ಏಪ್ರಿಲ್.
144. ವಡ್ಡಾರಾಧನೆ ಮತ್ತು ಪೂಜ್ಯಪಾದರು: ಕನ್ನಡ ನುಡಿ. 46-10. 1983 ಮೇ 16.
145. ವಡ್ಡಾರಾಧನೆ ಮತ್ತು ಅಸಗನ ಶಾಂತಿಪುರಾಣ: ಕನ್ನಡ ನುಡಿ. 1983. ಜೂನ್ 1.
146. ಭದ್ರಬಾಹು ಭಟಾರರ ಕಥೆ ಪರಿಶೀಲನೆ: ಸಾಹಿತ್ಯ ಜೀವಿ. (ಜಿ. ವೆಂಕಟಸುಬ್ಬಯ್ಯ ಅಭಿನಂದನ ಗ್ರಂಥ) 1976.
147. ಚಾಮರಸ- ಕುಮಾರವ್ಯಾಸ, ಒಂದು ಸಂತುಲನ : ಜ್ಞಾನದೇಗುಲ: ಪುಟ್ಟರಾಜಗವಾಯಿ ಅಭಿನಂದನ ಗ್ರಂಥ: 1989. ಪು. 676-685.
148. ಮಹಾಪುರಾಣ: ಶಾಂತಿಶ್ರೀ. 1989. ಪು. 35-37.
149. ಮಹಾಪುರಾಣದ ಮಹತ್ವ: ವಿಶ್ವಪ್ರಭೆ. ಮೂರು ಸಾವಿರ ಮಠ, ಹುಬ್ಬಳ್ಳಿ. 1989.
150. ಕನಕದಾಸರ ಕೀರ್ತನೆಗಳ ಕಳವು: ಕನಕನ ಸಾಹಿತ್ಯದರ್ಶನ. 1990.
151. ಚಾರುದತ್ತನ ಕಥೆ: ಮೂಲಚೂಲ, ಸಂಶೋಧನ (ಸಂ) ಲಕ್ಷ್ಮಣ ತೆಲಗಾವಿ, 1991.
152. ಬಂಧುವರ್ಮ- ಪೊನ್ನ:ಸಂತುಲನ; ಕರ್ನಾಟಕಭಾರತಿ 20-4 1988 ಮೇ.
153. ಬಂಧುವರ್ಮ: 4 ಟಿಪ್ಪಣಿಗಳು: ಸಾಧನೆ?
154. ಸಮ್ಯಕ್ತ್ವಕೌಮುದಿ-ತೌಲನಿಕ ಸಮೀಕ್ಷೆ: ಸಮ್ಯಕ್ತ್ವಕೌಮುದಿ. (ಸಂ) ಎ. ಶಾಂತಿರಾಜಶಾಸ್ತ್ರಿ. ತೃತೀಯ ಮುದ್ರಣ. 1989. ಹಿನ್ನುಡಿ.
155. ಬಂಧುವರ್ಮನ ಜೀವಸಂಬೋಧನೆಯಲ್ಲಿ ಸಗರನ ಕಥೆ, ಕವಿ ಬಂಧುವರ್ಮ ಜಿಜ್ಞಾಸೆ, 1993

156. ಬಂಧುವರ್ಮನ ಇತಿವೃತ್ತ: ತೀರ್ಥವಂದನೆ. 1991.

V. ಧಾರ್ಮಿಕ:

157. ವಡ್ಡಾರಾಧನೆಯ ಕಾಲ: ಮರುಚಿಂತನೆ: ಸಾಧನೆ15-16.1986-87.

158. ಧರ್ಮಕರ್ಮಗಳ ಫಲಾನುಭವ: ಗುರುದೇವ. 18-8.1964.

159. ಕರ್ಮ ಎಂದರೇನು: ಗುರುದೇವ. 1964.

160. ವೀರವಾಣಿ: ಆಕಾಶವಾಣಿ. 27.4.65.

161. ಬೆಳ್ಗೊಳ ಮತ್ತು ಭರತ ಬಾಹುಬಲಿ: ಶರಣಸಾಹಿತ್ಯ, 1967. ಮೇ.

162. ಮಹಾವೀರರ ಸಂದೇಶ: ಆಕಾಶವಾಣಿ. 31.3.1969.

163. ವರ್ಧಮಾನ ಮಹಾವೀರ: ಸುಧಾ, 1972. ಮಾರ್ಚಿ 27.

164. ಕರ್ನಾಟಕದಲ್ಲಿ ಜೈನಸಂಸ್ಕೃತಿ: ವಿವೇಕಾಭ್ಯುದಯ. 1973.

165. ದೇವನಂದಿ- ಪೂಜ್ಯಪಾದ: ಸ್ಮರಣಸಂಚಿಕೆ ಆಚಾರ್ಯ. 1983. ಮತ್ತು ಆಸ್ವಾದ1983.

166. ಜೈನಧರ್ಮದಲ್ಲಿ ಅಹಿಂಸೆ ಮತ್ತು ಪರಮತ ಸಹಿಷ್ಣುತೆ: ಯೋಜನಾ 9-5.1993. ಡಿಸೆಂಬರ್.

167. ಜಾತಿಗಳು ಮತ್ತು ಜೈನಧರ್ಮ: ಹಳ್ಳಿಯ ಸಂದೇಶ. 12-10. 1993.

168. ಜೈನ ಪ್ರತಿ ಸಂಸ್ಕೃತಿಯ ನಿರ್ಮಾಣ ಮತ್ತು ಅಸ್ಪೃಶ್ಯತೆ: ಸಾಧನೆ. 23-1.2.1994.

VI. ಪುಸ್ತಕವಿಮರ್ಶೆ:

169. ಅರಿಕೇಸರಿ: ಪ್ರಬುದ್ಧ ಕರ್ನಾಟಕ. 1959.

170. ಡಿ. ಎಲ್. ಎನ್. ಲೇಖನಗಳು: ಜ್ಞಾನೋಪಾಸಕ. 1960.

171. ಕಾಲೂರ ಚೆಲುವೆ: ಕನ್ನಡ ನುಡಿ. 1964.

172. ಉತ್ತರ: ಪ್ರಜಾಮತ. 1964.

173. ಐದು ದೀಪದ ಕಂಬ: ಗೋಕುಲ. 1964.

174. ಖಾರವೇಲ ಪುಸ್ತಕವನ್ನು ಕುರಿತು: ಖಾರವೇಲ (ಮುನ್ನುಡಿ)1964.

175. 'ಶಿಲ್ಪಶ್ರೀ'ಯಲ್ಲಿ ಭರತತೋಜ:ವಿಕಾಸ. 1963-64.

176. 'ಶಿಲ್ಪಶ್ರೀ'ಯಲ್ಲಿ ಪದ್ಮಬ್ಬೆ: ವಿಕಾಸ. 1963-64.

177. ಪ್ರೇಮದ ಬಾಳು: ಪ್ರಜಾಮತ. 14-12-65.

178. ಅಯ್ದು ಹೊಸಪುಸ್ತಕಗಳು: ಕನ್ನಡ ನುಡಿ:1964.

179. ಅಪೂರ್ವ ಗ್ರಂಥ 'ಗ್ರಂಥಸಂಪಾದನೆ': ಪ್ರಜಾಮತ, 3.1.65.

180. ಇನ್ನೈದು ಪುಸ್ತಕಗಳು: ಕನ್ನಡ ನುಡಿ: 28-7.1965.

181. ವಿಭೀಷಣ ನಾಟಕವನ್ನು ಕುರಿತು: ವಿಭೀಷಣ (ಹಿನ್ನುಡಿ) 1966.

182. ಆಚಾರ್ಯ ಶ್ರೀ ಡಿ. ಎಲ್. ಎನ್. ಕೃತಿಗಳು: ಉಪಾಯನ 1967.

183. ಐತಿಹಾಸಿಕ ಕಾದಂಬರಿಗಳು: ಸಿದ್ಧಗಂಗಾ. 1968.

184. ವಿಮರ್ಶೆಯ ರೂಪರೇಖೆ: ಕಾವ್ಯಾಸ್ವಾದನ( ಡಿ. ಲಿಂಗಯ್ಯನವರ ಪುಸ್ತಕಕ್ಕೆ ಮುನ್ನುಡಿ) 1969.

185. ನೀಲಲೋಚನೆಯ ವಚನಗಳು. ಆಕಾಶವಾಣಿ. 13.5.1969.

186. ಅನ್ಯಸಾಹಿತ್ಯದಿಂದ: ಸಾಹಿತ್ಯವಾರ್ಷಿಕ. 1971.

187. ಶಾಸ್ತ್ರಗ್ರಂಥಗಳು: ಸಾಹಿತ್ಯವಾರ್ಷಿಕ. 1973.

188. ಕಾದಂಬರಿಗಳು: ಸಾಹಿತ್ಯವಾರ್ಷಿಕ. 1974.

189. ಭಾವ: ಶ್ರೀನಿವಾಸ (ಅಭಿನಂದನ ಗ್ರಂಥ), 1972.

190. ಅಯ್ದು ವಿಮರ್ಶೆ: 1. ಜೀವನ ರಸಿಕ: ರಂ. ಶ್ರೀ. ಮುಗಳಿ.
 2. ಸಿಂಗಾರ: ಹಾ. ಮಾ. ನಾಯಕ.
 3. ಶಿವರಾಮ ಕಾರಂತ:ವಿ. ಎಂ. ಇನಾಂದರ್.
 4. ನಾಡಿಗರ ಬರಹಗಳು: ನಾಡಿಗಕೃಷ್ಣಮೂರ್ತಿ.
 5. ಬಲಿದಾನ:(ಮೂಲ) ಹರಿಕೃಷ್ಣಪ್ರೇಮಿ. ಅನು:ಪ್ರಧಾನ್‌ಗುರುದತ್ತ.:ಕನ್ನಡ ನುಡಿ 16.11.82.

191. ನಯಾಗರಕ್ಕೆ ಐನೂರು ಮೈಲಿ: ಕನ್ನಡ ನುಡಿ, 16.12.1982.

192. ಅಪರೂಪದ ಕನ್ನಡ ನಾಟಕ: ಕನ್ನಡನುಡಿ1.7.84.

193. ಭಾರತೀಯ ಸಾಹಿತ್ಯ ಸಂಕಲನ: ಕನ್ನಡ ನುಡಿ, 16.5.1985.

194. ಮಣಿಹ: ಕನ್ನಡ ನುಡಿ, 16.2.83.

195. ಕಾರಂತ: ಕೆಲವು ಮುಖಗಳು: ಕನ್ನಡ ನುಡಿ. 1-3.83.

196. ವೈಶಾಖ: ಕನ್ನಡ ನುಡಿ: 1-8-81.

197. ಭಾರತ ಸಿಂಧುರಶ್ಮಿ: ಕನ್ನಡ ನುಡಿ 16-10-84.

198.ಪರಂಪರೆ (ಸುಜನಾ) : ಕನ್ನಡ ನುಡಿ 16.2.84.

199. ವಿಚಾರ ಕ್ರಾಂತಿಗೆ ಆಹ್ವಾನ : ಕನ್ನಡ ನುಡಿ 1986.

200. ಕೃಷ್ಣಶರ್ಮರ 'ಕನ್ನಡ ಸಮಸ್ಯೆ': ಸಿದ್ಧಹಸ್ತ ಅಭಿನಂದನ ಗ್ರಂಥ 1973.

**VII. ಸಾಂದರ್ಭಿಕ**

201. ಅಗಲಿದ ನಾಯಕನಿಗೆ ಕಂಬನಿ: ಗುರುದೇವ. 10-5.1966.

202. ರಾಜ್ಯೋತ್ಸವ: ಜನಮತ 1-3 15-11-69.

203. ಹಸಿರು ನೆನಪು (ಎಸ್. ಗೋಪಾಲಗೌಡ): ಜೀವಂತಜ್ವಾಲೆ. 1981.

204. ನಾಟಕ ಗೋಷ್ಠಿ ಉದ್ಘಾಟನಾ ಭಾಷಣ: ಶಿರಸಿಸಾಹಿತ್ಯ ಸಮ್ಮೇಳನ 1982 ಪು. 211-214.

205. ಎಂದೆಂದಿಗೂ ನೀ ಕನ್ನಡವಾಗಿರು: ಮದರಾಸು ಸಮ್ಮೇಳನ ಅಧ್ಯಕ್ಷ ಭಾಷಣ. ಕನ್ನಡ ನುಡಿ. 49-12ಜೂನ್. 16.1986.

206. ಸಂಭಾವಿತ ಮೃದುಭಾಷಿ 'ಪಿ.ಕೆ. ನಾರಾಯಣ' ಒಂದು ಸ್ಮೃತಿ: ಸ್ಫಟಿಕ ಮಂಜೂಷ 1986.

207. ಮೋಡಿ ಮಾಡಿದ ಜಾದೂಗಾರ: ಸಾಹಸಯಾತ್ರಿ, ಪುಟ 391-393.

208. ಅಧ್ಯಕ್ಷಭಾಷಣ: ಧ್ವನಿ- ಪ್ರತಿಧ್ವನಿ: ಕರ್ನಾಟಕ ಲೇಖಕರ ಸಂಘ, 1990.

**VIII. ಸಂಕೀರ್ಣ:**

209. ಕೇರಳ ಸಂಗೀತ: ದೇವ ಗಂಗೆ, ಮೈಸೂರು 1958.

210. ಗೊಮ್ಮಟೇಶ್ವರ ವಿಶ್ವವಿದ್ಯಾಲಯ : ವೀರಭಾರತಿ 3-9 ಫೆಬ್ರುವರಿ 1961.

211. ಸ್ವಾತಂತ್ರ್ಯ ಪೂರ್ವ ಪ್ರಬಂಧ ಸಾಹಿತ್ಯ: ಕನ್ನಡ ನುಡಿ, ಬೆಳ್ಳಿ ಸಂಚಿಕೆ, 1963.

212. ನಿಲಯದ ಪೋಷಣೆ ಅಗತ್ಯ: ಗುರುದೇವ, 1963.

213. ಐತಿಹಾಸಿಕ ಕಾದಂಬರಿಗಳು : ಗುರುದೇವ, 7-6-1963.

214. ಜನಪದ ಗೀತೆಗಳಲ್ಲಿ ತಾಯಿ ಮಗು: ಗುರುದೇವ, 1964.

215. ಮಕ್ಕಳಿರಲವ್ವ ಮನೆ ತುಂಬ: ತಾಯಿನಾಡು, ದೀಪಾವಳಿ ಸಂಚಿಕೆ, 1963.

216. ಹೆಸರಿನ ಸೊಗಸು : ಕೈಲಾಸ, 1964.

217. ಮನೆಮುಂದೆ ಬಂದು ಮಾರುವರು: ತರಂಗಿಣಿ, 1964.

218. ಹೆಸರಿನಲ್ಲಿ ಏನಿದೆ? ಸ್ನೇಹಸಂಘ, ಹೊನ್ನಾಳಿ, 1964.

219. ಭಾಷಣಕಲೆ: ಗುರುದೇವ, 9-6.1965.

220. ಕನ್ನಡ ಲಿಪಿಯ ವಿಕಾಸ: ಗುರುದೇವ, 9-8, 1965.

221. ಮಾತಿನ ಮಹತ್ವ : ಗುರುದೇವ, 9-9, 1965.

222. ಸ್ವತಂತ್ರಭಾರತದಲ್ಲಿ ಸುಖೀರಾಜ್ಯ ಕನಸೆ? : ಕಾರ್ಮಿಕವಾಣಿ 1-10.1965.

223. ತೀನಂಶ್ರೀಯವರ ಒಂದು ಅಪ್ರಕಟಿತ ಪದ್ಯ : ಕನ್ನಡ ನುಡಿ. ಫೆಬ್ರುವರಿ 1967.

224. ಶ್ರವಣಬೆಳಗೊಳ ಶ್ರೀ ಕ್ಷೇತ್ರದ ಸಂಶೋಧಕರು: ಮುಕ್ತಿಶ್ರೀ. 1967.

225. ಶ್ರವಣಬೆಳ್ಗೊಳದ ಐತಿಹಾಸಿಕ ಹಿನ್ನೆಲೆ: ಪ್ರಜಾಮತ. 30-4.1967.

226. ಕನ್ನಡದಲ್ಲಿ ಬರಬೇಕಾದ ಹಾಸ್ಯದ ಹೊಸ ಬಗೆಗಳು: ವಿನೋದ, ಅಕ್ಟೋಬರ್. 1967.

227. ಕನ್ನಡವನ್ನುದ್ಧರಿಸಿದ ಶಿವಶರಣರು: ವಯಸ್ಕರ ಶಿಕ್ಷಣ ಸಮಿತಿ ವಿಶೇಷಾಂಕ, 1967.

228. ನಮ್ಮ ನಾಲ್ಕು ವಿಶ್ವವಿದ್ಯಾಲಯಗಳು: ಪ್ರಜಾಮತ ದೀಪಾವಳಿ ಸಂಚಿಕೆ, 1967.

229. ಕಾದಂಬರಿಗಳ ಬೆಳವಣಿಗೆ. ಸಿದ್ಧಗಂಗಾ, 1967.

230. ಚಂಪೂ ಸಾಹಿತ್ಯ : ಪ್ರಬುದ್ಧ ಕರ್ನಾಟಕ, 1980.

231. ಸರಸ್ವತಿಯ ಮನೆಯಲ್ಲಿ ಕಳವು : ಪ್ರಜಾಮತ, 11-2-1968.

232. ಮಾಜಿ ಮಂತ್ರಿಗಳ ಉಪನ್ಯಾಸ : ಪ್ರಜಾಮತ, 18-2-1968.

233. ಭಾಷಣ ಕಲೆಯ ಸ್ವರೂಪ : ಪ್ರಜಾಮತ, ದೀಪಾವಳಿ ವಿಶೇಷ ಸಂಚಿಕೆ. 1968.

234. ಕರ್ನಾಟಕದ ಕೆಲವು ಹಿರಿಯ ಸಾಹಿತಿಗಳು: ಜಾಗೃತ ಕರ್ನಾಟಕ. ರಾಜ್ಯೋತ್ಸವ ಸಂಚಿಕೆ, 1968.

235. ನಮ್ಮ ಪಾದರಕ್ಷೆಗಳು: ಸಿದ್ಧಗಂಗಾ ಸಂಚಿಕೆ, 4.10.1968.

236. ಕುವೆಂಪು ಕಂಡ ಕನ್ನಡ : ಉಪಾಯನ ಕೃತಿಕರಂಡ, ವಿಶೇಷ ಸಂಚಿಕೆ. ಚಿಕ್ಕಮಗಳೂರು, 1.3.1969.

237. ಘಾಟಿ ಹುಡುಗರು: ಮಾಧುರಿ14-ಏಪ್ರಿಲ್. 1969.

238. ನಮ್ಮ ಶಾಸ್ತ್ರೀಯ ಇಂಗ್ಲಿಷ್ ಪ್ರೇಮ: ಜನಪ್ರಗತಿ, ದೀಪಾವಳಿ ಸಂಚಿಕೆ, ಅಕ್ಟೋಬರ್, 1971.

239. ಮಧುಗಿರಿ ಮಾರಮ್ಮನ ಕಥೆ: ಜೀವನ, 1973.

240. ಕವಿಚರಿತೆಗೆ ತಿದ್ದುಪಡಿ: ಶ್ರೀಕಂಠತೀರ್ಥ, 1976.

241. ಕನ್ನಡ ಗ್ರಂಥ ಸಂಪಾದನೆಗೆ ಸಾಹಿತ್ಯ ಪರಿಷತ್ತಿನ ಕೊಡುಗೆ: ಕ. ಸಾ. ಪ. ಪತ್ರಿಕೆ.

242. ಕಾವ್ಯಗಳು-ಶಾಸನಗಳು : ಸಾಧನೆ 6-3.1977.

243. ಕರ್ನಾಟಕ ಸಂಸ್ಕೃತಿ: ಅವಲೋಕನ. 1985. ಪು. 292-296.

244. ಹಂಪನಾ ವಚನಗಳು: ಗುರುದೇವ, 26-10.1982.

245. ಕರ್ನಾಟಕ ಇತಿಹಾಸ ವೈಭವ, ದರ್ಶನ, 1982.

246. ಸಿಹಿ ಅನುಭವಗಳ ಸುರಿಮಳೆ: ನೇತ್ರಾವತಿ, ದ. ಕ. ಜಿಲ್ಲಾ ಸಮ್ಮೇಳನ. ಸ್ಮರಣಸಂಚಿಕೆ, 1985.

247. 54ನೇ ಸಾಹಿತ್ಯ ಸಮ್ಮೇಳನ ಸಮೀಕ್ಷೆ, ಅಖಿಲ ಭಾರತ 57ನೇ ಸಾಹಿತ್ಯ ಸಮ್ಮೇಳನ ಸ್ಮರಣಸಂಚಿಕೆ, ಶರಣ ಸಿರಿ, 1985.

248. ನವಲೂರು ಸಂಘ: ಒಂದು ಟಿಪ್ಪಣಿ : ಹರತಿಸಿರಿ (ಸಂ) ಲಕ್ಷ್ಮಣ ತೆಲಗಾವಿ, 1987.

249. ಪುಸ್ತಕೋದ್ಯಮ ಮತ್ತು ಪರಿಷತ್ತು: ಅಮೃತಶ್ರೀ, 1988.

250. ನಂದವಾಡಿಗೆ ಮಹಾಮಂಡಲೇಶ್ವರ : ಸಾಧನೆ 21-22.1992-93.

251. ಶಾಸನಗಳಲ್ಲಿ ಯಕ್ಷಿ ಜ್ವಾಲಾಮಾಲಿನಿ ಮಹಿಮೆ : ಸಮಂತಭದ್ರ ಪು. 23-27. 1994.

252. ವಾಜಿವಂಶ ಮತ್ತು ತೈಲಪ ಭುಜಾದಂಡ ದಲ್ಲಪ : ಸಾಧನೆ 23-1,2. 1994. ಜನವರಿ - ಜೂನ್.

253. ವಸುಧೈಕ ಬಾಂಧವ ರೇಚಣ ದಂಡಾಧಿನಾಥ: ಬೆಳ್ಳಿ ಬಾಗಿನ. ಪು. 91-99.1994.

254. ಮೈಳಾಪ ತೀರ್ಥ-ಶಾಸನಗಳ ಆಧಾರ: ಸಮ್ಮೀಲನ, ಪು. 17-22, 1994.

255. ದೇಶೀಯ ಸ್ತ್ರೀವಾದದ ಉದ್ಘಾಟಕಿ ಅತ್ತಿಮಬ್ಬೆ: ಉದಯವಾಣಿ ದೀಪಾವಳಿ ವಿಶೇಷಾಂಕ : ಪು. 201-205.1994.

256. ಒಂದು ಹೊಸ ಶಾಸನ, ಹೊಸ ವಿಗ್ರಹ: ಸಾಧನೆ ಸಂ, 24-ಸಂ.3. 1995.
257. ಮಹಾವೀರರು ಮತ್ತು ಬಸವೇಶ್ವರರು, ತರಳಬಾಳು, ಜನವರಿ 1976,ಸಂ-1 ಸಂಚಿಕೆ -2, ಪು. 35-45
258. ಪ್ರಾಚೀನ ಕನ್ನಡ ಪರಂಪರೆ ಮತ್ತು ಜೈನ ಸಾಹಿತ್ಯ, "ಸೌಜನ್ಯ" ಎಸ್, ಎಮ್. ಕುಲಕರ್ಣಿ ಅಭಿನಂದನ ಗ್ರಂಥ ಬೆಳಗಾವಿ, 2000, (ಸಂ) ಶ್ರೀನಿವಾಸ ಕುಲಕರ್ಣಿ, ಪು. 88-104
259. ರಾಷ್ಟ್ರಕೂಟರ ಕಾಲದ ಪ್ರಾಚೀನ ಜಿನಾಲಯ ಶೋಧನೆ: ಮಾನತುಂಗ, (ಸಂ) ಶೆಟ್ಟಿ, ಎಸ್. ಡಿ., ವೇಣೂರು, 2000; [ಪು. 137-42]
260. ನುನ್ನ ವಂಶ. ಅಭಿಜ್ಞ, ಸಾ.ಶಿ. ಮರುಳಯ್ಯ ಸಂಭಾವನೆ, 2000
261. ನೇರಿಲಗೆಯ ಶಾಸನ: ಅಭಿಜ್ಞಾನ. ಪು. 566-78.19995.
262. ಕುವೆಂಪು ಸಮಕಾಲಿಕ ಸಾಹಿತ್ಯ ಸಂದರ್ಭ, ಸಂಕ್ರಮಣ. 30-10/11, ಅಕ್ಟೋ- ನವೆಂ. 1995.
263. ಶಾಸನಗಳಲ್ಲಿ ಜೈನ ತೀರ್ಥಗಳು:ಸಾಧನೆ
264. ಶಾಸನಗಳಲ್ಲಿ ಜೈನ ಬಸದಿಗಳು: ಸಾಧನೆ
265. ರವಿದೇವಿಯಕ್ಕಳ ಶಾಸ್ತ್ರದಾನದ ಅನನ್ಯತೆ, ಕಸಾಪಪ 80-3, 2002.
266. ಕವಿರಾಜಮಾರ್ಗದ ಅನನ್ಯತೆ ಕಸಾಪಪ 81-3, 2003

**IX. ಇಂಗ್ಲಿಷ್ ಲೇಖನಗಳು:**

Chamundaraya His Achivement: Sanmathi
Prof. Dr. A. N. Upadya:Veerabharathi, 1967.
Jaina Literature in Kannada: AIR Talk 1967.
Vasunandi and His Date: Jain Journal.
Children's Literature in Kannada: *Children's Literature in Indian Languages*. -Ed. Dr. K. A. Jamuna.
The Story of Carudatta: Jain Journal 1991.
A. Note on Aradhana of Sivakoti: 1993.
Influence of Pk. literature on Kannada Literature, Pk Bharathi.
Introductory Speech on Kannada Literature, Prakrit Bharathi.

Pampa, Apogee of Ka. Lit Jain Journal, XXXIII-4, April 99 Umasavati Invocatory sk verses- sambodhi J'm in karnataka, tirthainkaa vani, 6-5, Feb 1999 Ahmedabad.Apropos of Himsa vs Ahimsa and the Jaina warriors, Jinamanjari Significance of some new inscriptions from Koppala in Karnataka, Jambu Jyoti A' Bad (Gujarat) 2004 the Neo-Digambara school, Jain Journal Volume XL-3, January 2006.

Jainism in Deccan with special reference to Kerala, Kalpetta North, 14-10-2006

X. **ರೇಡಿಯೋ ಭಾಷಣಗಳು / ರೂಪಕಗಳು:**

ಮಹಾನವಮಿ ಮತ್ತು ಅದರ ಸಂಕೇತ : ಪ್ರಸಾರವಾದದ್ದು 12.10.67.
ವೀರ ಅಭಿಮನ್ಯು: (ರೂಪಕ) ಪ್ರಸಾರ 16.8.68.
ಮಹಾವೀರರ ಸಂದೇಶ : ಪ್ರಸಾರ 31.3.69.
ಪುಸ್ತಕ ಪರಿಚಯ: ಪ್ರಸಾರ 31.5.69.
(1) ಜಾನಪದ. (2) ನೀಲ ಲೋಚನೆಯ ವಚನಗಳು, (3) ಹುತಾತ್ಮ ಕಿಂಗ್.
ಡಾ. ಎಚ್. ತಿಪ್ಪೇರುದ್ರಸ್ವಾಮಿ ಅವರೊಡನೆ ಒಂದು ಸಂದರ್ಶನ: ಮಾರ್ಚ್ 1970.
ಮುದ್ದಣ ಮನೋರಮ (ನಾಟಕ) : ಪ್ರಸಾರ 29.11.70.
ಕರ್ನಾಟಕದಲ್ಲಿ ಜೈನ ಸಂಸ್ಕೃತಿ ಪ್ರಸಾರ 15.4.73.

- ಮೂರ್ತಿರಾಯರ ವಿಮರ್ಶೆಯ ಅನನ್ಯತೆ, ಹೆಬ್ಬಾಳು, 2003
- ಕೆ.ಜಿ. ಕುಂದಣಗಾರರು, ಸಾಲುದೀಪಗಳು, 2001
- ಜನ್ನನ ಅನನ್ಯತೆಯ ವಿನ್ಯಾಸ, ಅನನ್ಯ, 2003
- ಮುಳುಗುಂದದ ಮೂರು ಅಪ್ರಕಟಿತ ಶಾಸನಗಳು, ಅರವಂಟಿಗೆ 1-1,
- ಜ್ವಾಲಾಮಾಲಿನಿದೇವಿ: ಚರಿತ್ರೆಯ ಹಾಸಿನಲ್ಲಿ, ಚಂದ್ರಪ್ರಭ, 2001(ಸಂ) ಎಸ್. ಪ್ರಭಾಕರ, 2001
- ರಾಯ ಝುಗಝುಂಪ, ಅನನ್ಯ, 2003
- ಬಸದಿಗಳು - ಸಾಂಸ್ಕೃತಿಕ ತವನಿಧಿ, ರತ್ನಶ್ರೀ (ಸಂ) ವಿಮಲ ಸುಮತಿಕುಮಾರ್ 1999, ಪು. 205-24
- ವಡ್ಡಾರಾಧನೆಯಲ್ಲಿ ಸಾಂಸ್ಕೃತಿಕ ಮುಲುಕುಗಳು, ವಡ್ಡಾರಾಧನೆ (ಸಂ) ಬಿ.ಎಂ. ಪುಟ್ಟಯ್ಯ, 2001
- ಬಾಬಾನಗರ ಶಾಸನದ ಅನನ್ಯತೆ ಮತ್ತು ಬಿಜ್ಜಳನ ಮತ ವಿಚಾರ, ಕಸಾಪ, 79-1/ 4, 2001
- ಕುವೆಂಪು ವಿಮರ್ಶೆಯ ಬಹುಮುಖಿ ವಿನ್ಯಾಸ - ಆಕೃತಿ, ಆಶಯ: ಕನ್ನಡ ಕಾವ್ಯ ಋಷಿ ಕುವೆಂಪು, ಶಿರಸಿ, 2005
- ಅತ್ತಿಮಬ್ಬೆ : ವ್ಯಕ್ತಿ, ವ್ಯಕ್ತಿತ್ವ ಮರುಪರಿಶೀಲನೆ, ರಂಗಧಾಮ, 2005,ಪು. 273-276
- ಅತ್ತಿಮ(ಯ)ಬ್ಬೆ: ಅಂತ ರ್ಜಾತೀಯ ವಿವಾಹ, ಚರಿತ್ರೆ ಅಧ್ಯಯನ, ೧-೨, 2006, ಪು. ೧೦೦-೧೨
- ಶಾಸ್ತ್ರೀಯ ಭಾಷೆಯ ರಾಜಕಾರಣ, ಪ್ರಜಾವಾಣಿ 23-1-2005
- ಬ್ರಹ್ಮಜಿನಾಲಯ ಪರಿಕಲ್ಪನೆಯ ಆಯಾಮ, ಕ್ಷಿತಿ ಸಂಪೂಜ್ಯ (ಸಂ) ಬಿ. ನಾಗೇಂದ್ರಕುಮಾರ್, 2005,ಪು. 47-50

1. A note on Rethinking Indian Culture : Cuttak
2. A note on Ārādhanā of Śivāraja
3. An Ancient Image of Mahāvīra : Iconographic significance.

4. Apropos of hiṃsā vs ahiṃsā and the Jaina warrios
5. Apropos of Indra in Jaina Iconography
6. Apropos of Koṇḍakunda Ācārya
7. Apropos Of Umāsvāti
8. Ārādhanā Karṇāṭa Ṭīkā
9. Are Historians upto date
10. Architecture of Mahāvīra Temples in South India
11. Arhad Pārśva shirnes
12. Bāhubali : Messenger of Peace : J.J. XLI-I
13. Bhālki : An Ancient Jaina colony
14. Dimentions of Bābānagar Inscription, Sambodhi, XXV, 2002.
15. Early Āgama Literature
16. Early Jaina Literature in Kannada
17. Epigraphia Jainika
18. Gommata Images in Karnataka
19. Influence of Anekānta on the Earliest Kannada work, paper presented at the International conference, Baroda organised by Vishva Bharati Institute, Ladnun.
20. Invocatory Sanskrit verses. ICANAS Budapest (Humgary) 1997
21. Jaina Diaspora in the Deccan
22. Jaina in south Kanara
23. Jainism and the Kalacuris
24. Jainism and the Seuṇas
25. Jainism in Karnataka
26. Jainism under the Gaṇga Kings
27. Jina Pārśva & his +s in K : Nirgrantha
28. Kaḷasāpura : Medieval Nirgrantha Centre
29. Mahāmaṇḍaleśhvara Butuga : A profile, J.J. 37-3., Jan. 2003
30. Mahāvīra : Messenger of non-violence
31. Mānastambha : Jaina Pillar of Eminence
32. Pampa : Apogee of Kannaḍa Literature
33. Poselytism of Jaina Shrines : An Appraisal
34. Prof. Padmanabha S. Jaini : A Profile
35. Status of Jainism in Kerala
36. The Ādipurāṇa : The Genisi Human History JJ. 38-4. April 2004.
37. The concept of Sastra - Dāna, International workshop on Jain & Society, London chain, March 06.

38. The Earliest Image of Bāhubali
39. The Jaina Rituals of Medival Karnataka
40. The Jaina, Spectrum in Āndhra
41. The Neo- Digambara school
42. The Physiognomy of Jaina Architecture
43. The Yāpanīyas : A Vanished Religion.
44. Tīrtha - Yātrā : Piligrimage
45. Vaddārādhane : A peerless Prose work

## ಡಾ. ಹಂಪನಾ ಅವರು ಮುನ್ನುಡಿ / ಬೆನ್ನುಡಿ ಬರೆದ ಪುಸ್ತಕಗಳು

೧. ಬರಕೋ ಪದಾ ಬರಕೋ- (ಸಂ) ಡಾ. ಶಿವಾನಂದ ಗುಬ್ಬಣ್ಣವರ
೨. ಗೊಮ್ಮಟೇಶ್ವರ ಚರಿತೆ- (ಸಂ) ಡಾ. ಬಿ. ವ್ಹಿ. ಶಿರೂರ
೩. ನಿಂಬ ಸಾಮಂತ ಚರಿತೆ- (ಸಂ) ಡಾ. ಎಂ. ಎಂ. ಕಲಬುರ್ಗಿ.
೪. ಕುಮುದೇಂದು ರಾಮಾಯಣ- (ಸಂ) ಡಾ. ಪಿ. ವಿ. ನಾರಾಯಣ
೫. ಕಂನುಡಿಯ ಹುಟ್ಟು- ಡಾ. ಶಂ. ಬಾ. ಜೋಶಿ
೬. ಸಾಹಿತ್ಯ ವಿಹಾರ- ಡಾ.ಬೆಟಗೇರಿ ಕೃಷ್ಣಶರ್ಮ
೭. ತೊರೆವ ರಾಮಾಯಣ ಕಥಾವಸ್ತು ವಿವೇಚನೆಗೆ- ಡಾ.ಎಸ್. ಎಸ್.ಬ್ಯಾತನಾಳ
೮. ಕನ್ನಡ ಪ್ರತಿಭಟನೆ ಕಾವ್ಯ- (ಸಂ) ಸಿ. ವೀರಣ್ಣ
೯. ಅಮೆರಿಕಾದಲ್ಲಿ ಗೊರೂರು- ಡಾ. ಗೊರೂರು ರಾಮಸ್ವಾಮಿ ಅಯ್ಯಂಗಾರ್
೧೦. ಮಹಾಭಾರತದ ಭೀಮ- ಬಿ. ಎಸ್. ಗೋಪಾಲಕೃಷ್ಣ
೧೧. ರಂಗಗೀತೆಗಳು- ಕೆ .ವಿ. ಆಚಾರ್
೧೨. ಪಾರಿಜಾತ- (ಸಂ) ಎಚ್. ಜಿ. ಸಣ್ಣಗುಡ್ಡಯ್ಯ
೧೩. ಚಂದುಳ್ಳ ಮಕ್ಕಳ ಒಂಬತ್ತು ಕೊಡು ಸ್ವಾಮಿ- (ಸಂ) ಬಿ. ಸಿದ್ದಗಂಗಯ್ಯ ಕಂಬಾಳು
೧೪. ದಾಸಪ್ಪ ಜೋಗಪ್ಪ- (ಸಂ) ಹಿ. ಚಿ. ಬೋರಲಿಂಗಯ್ಯ
೧೫. ಕತ್ತಾಲ ದಾರಿ ದೂರ (ಸಂ)- ಕೃಷ್ಣಮೂರ್ತಿ ಹನೂರು
೧೬. ಜಾನಪದ ಜಾಣ್ಮೆ (ಸಂ)- ಡಾ. ವೀರಣ್ಣ ರಾಜೂರ, ಬಿ. ವಿ. ಬಿರಾದರ
೧೭. ಸುವ್ವಿ ಸುವ್ವಮ್ಮಲಾಲಿ ಸುವ್ವಲಾಲೆ - (ಸಂ) ಸುಶೀಲಾ ಸೊಂಡೂರ್
೧೮. ತುಮಕೂರು ಜಿಲ್ಲೆಯ ಜಾನಪದ ನಂಬಿಕೆಗಳು - (ಸಂ) ಎನ್. ಎಸ್, ತಿಮ್ಮೇಗೌಡ
೧೯. ಮುತ್ತು ಮುತ್ತಿನ ತ್ವಾಟ -(ಸಂ) ಡಾ. ಚಂದ್ರಶೇಖರ ಕಂಬಾರ, ಜಯಪ್ರಕಾಶ್ ಬರಗೂರು
೨೦. ಬಣ್ಣವಾಡು - (ಸಂ) ದೇವಂಗಿ ಟಿ. ಚಂದ್ರಶೇಖರ
೨೧. ಮೂವತ್ತು ಜನಪದ ಕಥೆಗಳು- (ಸಂ) ಡಾ. ಕೆ. ಆರ್. ಸಂಧ್ಯಾರೆಡ್ಡಿ
೨೨. ಜಾನಪದ ಅಧ್ಯಯನದ ಸಂಕ್ಷಿಪ್ತ ಇತಿಹಾಸ, - (ಸಂ) ಡಾ. ನಂ. ತಪಸ್ವೀಕುಮಾರ್

೨೩. ಉತ್ತರ ಕನ್ನಡದ ಹವ್ಯಕರ ಜನಪದ ಕಥೆಗಳು - ಡಾ. ಶಾಂತಿ ನಾಯಕ
೨೪. ಐವರು ಹೇಳಿದ ಜಾನಪದ ಕಥೆಗಳು - (ಸಂ) ತರೀಕೆರೆ ರಹಮತ್
೨೫. ಧರ್ಮದೇವತೆ (ಸಂ) ಡಾ. ಮಲ್ಲಿಕಾರ್ಜುನ ಶಿವಪ್ಪ ಲಠ್ಠೆ
೨೬. ಜನಪದ ಬಸವ ಪುರಾಣ - (ಸಂ) ಪಿ. ಕೆ. ರಾಜಶೇಖರ
೨೭. ಸಾತು ಕ್ಯಾಮಣ್ಣನ ಲಾವಣಿಗಳು - (ಸಂ) ನಿಂಗಣ್ಣ ಸಣ್ಣಕ್ಕಿ
೨೮. ಬೆಳವಲ ಬೆಳಕು - (ಸಂ) ಜಿ. ಬಿ. ಖಾಡೆ
೨೯. ಭಾಷಾ ವೀಕ್ಷಣ - ಡಾ. ಆರ್, ರಾಮಕೃಷ್ಣ-2000
೩೦. ಇತಿಹಾಸದ ಹಾದಿಯಲ್ಲಿ ಪ್ರೊ. ವಸಂತಕುಮಾರಿ, ೨೦೦೩
೩೧. ಜೈನ ಸಂಸ್ಕೃತಿ ಸಮೀಕ್ಷೆ ಪ್ರೊ. ಶಾಂತಿನಾಥ ದಿಬ್ಬದ
೩೨. ವಡ್ಡಗೆರೆ ನಾಗಮ್ಮ (ಸಂ) ವೈಜಯಂತಿಮಾಲ
೩೩. ಎರಡು ಕಿನ್ನರಿಜೋಗಿ ಕಾವ್ಯಗಳು- (ಸಂ) ಜಿ. ಎಸ್. ವಸಂತಮಾಲ
೩೪. ಉತ್ತರ ಕರ್ನಾಟಕದ ಬೈಗುಳಗಳು ಮೃತ್ಯುಂಜಯ ಹೊರಕೇರಿ
೩೫. ಗ್ರಾಮೀಣ ಗಾದೆಗಳು (ಸಂ) ಬಿ. ಕೃಷ್ಣಪ್ಪ ರೆಡ್ಡಿ
೩೬. ಜನಪದ ಶಿಶುಪ್ರಾಸಗಳು (ಸಂ) ಶ್ರೀಕಂಠ ಕೂಡಿಗೆ
೩೭. ಗುಲಗಂಜಿ ಮಾದೇವಿ (ಸಂ) ಕುರುವ ಬಸವರಾಜ್
೩೮.ಹಸರ ಗಿಡದ ಮ್ಯಾಲ ಮೊಸರ ಚೆಲ್ಲೇದ (ಸಂ) ಜಂಬುನಾಥ ಕಂಚ್ಯಾಣಿ
೩೯. ಸಂಸಾರಿ ಹೆಚ್ಚೋ ಸಂನ್ಯಾಸಿ ಹೆಚ್ಚೋ (ಸಂ) ಎಂ. ಎ. ಜಯಚಂದ್ರ
೪೦.ಜನಪದ ಒಡಪುಗಳು- (ಸಂ) ಸಂಕರಾನಂದ ಉಲ್ಲಾಸರ
೪೧. ಹಳ್ಳಿ ಹಬ್ಬಿಸಿದ ಹೂಬಳ್ಳಿ- (ಸಂ) ಜಿ. ಬಿ. ಖಾಡೆ
೪೨. ಜನಪದದಲ್ಲಿ ಮಳೆರಾಯನ ಮುನಿಸು- (ಸಂ) ಬಸವರಾಜ ಆಕಳವಾಡಿ
೪೩. ಲಂಬಾಣಿಗರ ಜನಪದ ಗೀತೆಗಳು- (ಸಂ) ಬೆನಕನಹಳ್ಳಿ ಜಿ. ನಾಯಕ್
೪೪. ಕಥೆ ಕೇಳೇ ಗುಬಲಾಡಿ (ಸಂ) - ಜೀನಹಳ್ಳಿ ಸಿದ್ಧಲಿಂಗಪ್ಪ
೪೫. ಎಣ್ಣೆಗೆರೆಯ ಜನಪದ ಗೀತೆಗಳು
೪೬. ಲಂಬಾಣಿ ಗಾದೆಗಳು- ಸಣ್ಣರಾಮ
೪೭. ನಲ್ಲೂರು ದೊರೆಕಾಳಿ- (ಸಂ) ನಲ್ಲೂರು ಪ್ರಸಾದ್
೪೮. ಕನ್ನಡ ನಾಟಕ ಸಂಪುಟ-ಡಾ. ಎಸ್. ಎಸ್. ಬ್ಯಾತನಾಳ
೪೯. ಜನಪದ ಜೀವನ ತರಂಗಗಳು- ಪ್ರೊ. ಎಂ. ಎನ್. ವಾಲಿ
೫೦. ಬಂದೀರೆ ನನ್ನ ಜಡೆವೊಳಗೆ (ಸಂ) -ಡಾ.ಚಂದ್ರಶೇಖರ ಕಂಬಾರ ಜಿ. ಆರ್. ತಿಪ್ಪೇಸ್ವಾಮಿ
೫೧. ಕರ್ನಾಟಕದ ವೀರಗಲ್ಲುಗಳು-ಡಾ. ಆರ್. ಶೇಷಶಾಸ್ತ್ರಿ
೫೨. ಜನಪದ ಕಲಾವಿದರ ಸೂಚಿ (ಸಂ) ಹಂಪ. ನಾಗರಾಜಯ್ಯ

೫೩. ಕನ್ನಡ ಗಾದೆಗಳ ಮಹಾಕೋಶ ಸಂಪುಟ-೧ (ಸಂ) -ಹು. ಮ. ರಾಮಾರಾಧ್ಯ
೫೪. ಕನ್ನಡ ಗಾದೆಗಳ ಮಹಾಕೋಶ ಸಂಪುಟ-೨ (ಸಂ)- ಹು. ಮ. ರಾಮಾರಾಧ್ಯ
೫೫. ಕಾದಂಬರಿಕಾರನ ಕಥೆ: ಬಸವರಾಜ ಕಟ್ಟೀಮನಿ
೫೬. ನಾನು ಯಾರು - ಡಿ. ವಿ. ಡಿ.
೫೭.ಜನಪದ ಝೇಂಕಾರ (ಸಂ)- ಬಿ. ಎಸ್. ಸ್ವಾಮಿ
೫೮. ನಮ್ಮ ಕಣ್ಣು -ಡಾ. ಎಸ್. ಬಿ. ವಸಂತಕುಮಾರ್
೫೯. ರಿವಾಯತ ಪದಗಳು (ಸಂ)-ತೇಜಸ್ವಿ ಕಟ್ಟೀಮನಿ
೬೦. ಕನ್ನಡ ಜನಪದ ಕಥೆಗಳು-ಡಾ.ಕೆ. ಆರ್. ಸಂಧ್ಯಾರೆಡ್ಡಿ
೬೧. ಹಠಮಾರಿ ಹೆಣ್ಣು ಮತ್ತು ಇತರ ಜನಪದ ಕಥೆಗಳು - ಬಸವರಾಜ ನೆಲ್ಲಿಸರ
೬೨. ಕೋಲಾಟಗಳು ಮತ್ತು ಕೋಲುಪದಗಳು (ಸಂ) ಡಾ. ಎಸ್. ಪಿ. ಪದ್ಮಪ್ರಸಾದ್
೬೩. ನಾನೊಂದು ಕನಸು ಕಂಡೆ-ಡಾ. ಸರೋಜಿನಿ ಶಿಂತ್ರಿ - (ಕಮಲಾ ದೇವಿ ಚಟ್ಟೋಪಾಧ್ಯಾಯರ ಜೀವನ ಚರಿತ್ರೆ)
೬೪. ಮಹಿಳೆಯರ ಕೆಲವು ಮರಾಠಿ ಕಥೆಗಳು - ಅನು: ಎಸ್. ಪಿ. ಪಾಟೀಲ
೬೫. ಶಿವಗಂಗೆ ಸುತ್ತಿನ ಜನಪದ ಕಥೆಗಳು (ಸಂ) - ಸುಧಾಕರ
೬೬. ಭಾರತದ ಪ್ರಾಚೀನ ವಿದ್ಯಾಪೀಠಗಳು- ಬಿ. ಪಿ. ಶಿವಾನಂದರಾವ್
೬೭. ಕನ್ನಡ ವೃತ್ತಿಗಾಯಕ ಕಾವ್ಯಗಳು -ಡಾ. ಜೀ. ಶಂ. ಪರಮಶಿವಯ್ಯ
೬೮. ಉತ್ತಂಗಿ ಚೆನ್ನಪ್ಪನವರು - ಎಸ್. ಆರ್. ಗುಂಜಾಳ
೬೯. ಅಖಿಲ ಕರ್ನಾಟಕ ಲೇಖಕಿಯರ ಸಮ್ಮೇಳನ -ವಿವಿಧ ಲೇಖಕಿಯರು
೭೦. ನಮ್ಮ ಲೇಖಕಿಯರು- ವಿವಿಧ ಲೇಖಕಿಯರು
೭೧. ರಿವಾಯತಗಳು- ಪ್ರೊ.ಶ್ರೀಮತಿ ಎಚ್. ಎಂ. ಬೀಳಗಿ
೭೨. ಕೊಡವ ಕನ್ನಡ ನಿಘಂಟು - ಐ. ಮಾ. ಮುತ್ತಣ್ಣ
೭೩. ಚಿನ್ನದ ಕದರ್ಖಾಂಗೆ ಸಲಹಿನಿ- ಗುಂಡ್ಮಿ ಚಂದ್ರಶೇಖರ ಐತಾಳ
೭೪. ಲಕ್ಷ್ಮೀಶ ಕವಿ ವಿಚಾರ ಸಂಕಿರಣ- ವಿವಿಧ ಲೇಖಕರು
೭೫. ನಮ್ಮ ಕರ್ನಾಟಕ -ಡಾ.ಟಿ. ವಿ. ವೆಂಕಟಾಚಲಿ ಶಾಸ್ತ್ರಿ
೭೬. ಕೂಸಾಯ್ತು ನಮ್ಮ ಕೊಮಾರಾಗೆ-ಡಾ.ಎನ್. ಆರ್. ನಾಯಕ್
೭೭. ಓಂಕಾರ ನಾದಸುಧಾ -ಸಿ. ಹೊನ್ನಪ್ಪ ಭಾಗವತರ್
೭೮. ವೀರಶೈವ ಪುರಾಣಗಳು- ಡಾ.ಎಸ್. ವಿದ್ಯಾಶಂಕರ
೭೯. ಸರ್ವಜ್ಞಾನ ಸಮಾಜ ದರ್ಶನ ಮತ್ತು ಸಾಹಿತ್ಯ ಸತ್ವ ಡಾ. ಎಂ. ಅಕಬರ ಆಲಿ
೮೦. ನಾಗಚಂದ್ರ ಒಂದು ಅಧ್ಯಯನ- ಡಾ. ವಿಜಯಾ ದಬ್ಬೆ
೮೧. ಭಕ್ತ ಮಾರ್ಕಂಡೇಯ - ಎಮ್. ಟಿ. ಧೂಪದ

೮೨. ಚಾಮರಸ ವಿಚಾರ ಸಂಕಿರಣ- ವಿವಿಧ ಲೇಖಕರು
೮೩. ಕೊಡಗು ಇತಿಹಾಸ ಪುಟಗಳಿಂದ -'ಕಾಕೆಮಾನಿ'
೮೪. ಸ್ವಾತಂತ್ರ್ಯೋತ್ತರ ವಿಚಾರ ಸಾಹಿತ್ಯ-ಗೌರೀಶ ಕಾಯ್ಕಿಣಿ
೮೫. ಗುಮ್ಮಳ್ಳಿ ಕದನ- ಹೆಚ್. ವಿ. ವೀರನಾಯಕ
೮೬. ಚಾವುಂಡರಾಯ ಪುರಾಣಂ - ಕಮಲಾ ಹಂಪನಾ, ಕೆ. ಆರ್. ಶೇಷಗಿರಿ
೮೭. ತಿಳಿದ ಮಾಡು ಹಾದರಾ (ಸಂ) -ಬೈರಮಂಗಲ ರಾಮೇಗೌಡ
೮೮. ಹನೂಮಾನ್ ವೆಂಕಟರಾಯರು- ಕ. ರಾ. ಲಕ್ಷ್ಮೀಕಾಂತಯ್ಯ
೮೯. ಹಳ್ಳಿಯ ಹಾಡುಗಳು (ಸಂ) - ಗೊರೂರು ರಾಮಸ್ವಾಮಿ ಅಯ್ಯಂಗಾರ್
೯೦. ಹತ್ತೊಂಬತ್ತನೆಯ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ- ಎ. ಎನ್ ಜಯರಾಂ
೯೧. ರಾಘವಾಂಕ - ಒಂದು ಅಧ್ಯಯನ- ಡಾ. ಎಲ್. ಎ. ಸೂರ್ಯನಾರಾಯಣ.
೯೨. ಕನ್ನಡ ಸಾಹಿತ್ಯದಲ್ಲಿ ಪುರಾಣ ಪ್ರಜ್ಞೆ-ಡಾ. ಕೆ. ಎಲ್. ಗೋಪಾಲಕೃಷ್ಣಯ್ಯ.
೯೩. ಮಧ್ಯಕಾಲೀನ ಭಕ್ತಿ ಅನುಭಾವಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ - ಡಾ. ಬಸವರಾಜ ಕಲ್ಗುಡಿ.
೯೪. ಧ್ವನ್ಯಾಲೋಕ- ಒಂದು ಅಧ್ಯಯನ- ಡಾ. ಕೆ. ವಿ. ನಾರಾಯಣ
೯೫. ಕನ್ನಡ ರಂಗ ಭೂಮಿ ನಡೆದು ಬಂದ ದಾರಿ. (ಸಂ) ಡಾ. ಶ್ರೀರಂಗ.
೯೬. ಇತಿಹಾಸದ ಹಾದಿಯಲ್ಲಿ - ಡಾ, ವಸಂತಕುಮಾರಿ, ಮೈಸೂರು, 2003
೯೭. ಸಾಪೇಕ್ಷ-೨, ಸೀತಾರಾಮ ಬಾಗೀರ್‌ದಾರ್, ಮೈಸೂರು 2003
೯೮. ನೆನೆವುದೆನ್ನ ಮನಂ, (ಸಂ) ಅನ್ನಪೂರ್ಣ ವೆಂಕಟನಂಜಪ್ಪ ತುಮಕೂರು, 2004
೯೯. ಶ್ರೀಶಾಂತಿನಾಥ ಪುರಾಣಂ- ಪಾರ್ಶ್ವನಾಥ ನಾ. ಅಲ್ಲಯ್ಯನವರ ಚಿಕ್ಕೋಡಿ, 2006.
೧೦೦. ಮರೆಯದಿರು ಕಂದಾ ಇವರ, ಪ್ರೊ. ವಸಂತ ಕುಷ್ಟಗಿ, 2005
೧೦೧. ಭಾಷಾ ಸೌಜನ್ಯ, ವಿಜಯಕುಮಾರ ಅವರೆಕಾಡು, 2006
೧೦೨. ವಿಚಾರದ ಬೆಳಕು, ಡಾ. ಜಿ.ಎನ್. ಉಪಾಧ್ಯ, 2005
೧೦೩. ಸಾಂಪ್ರತ, ಎಂ.ಬಿ. ಕುಕ್ಯಾನ್, ಮುಂಬಯಿ, 2007
೧೦೪. ಕನ್ನಡ ಭಾಷಾ ಸ್ವರೂಪ ಡಾ. ರಾಜೇಶ್ವರಿ ಮಹೇಶ್ವರಯ್ಯ 1996
೧೦೫. ಜೈನ ಜನಪದ ಸಾಹಿತ್ಯ: ಸಂಪಾದನೆ, ಅಧ್ಯಯನ; ಡಾ. ಎಸ್.ಪಿ. ಪದ್ಮಪ್ರಸಾದ್.

# ಅಭಿನಂದನ ಗ್ರಂಥಗಳು

1. ಪಚ್ಚೆತೆನೆ, (ಸಂ) ಟಿ.ಕೆ. ಮಹಮೂದ್, ಶಾ.ಮಂ. ಕೃಷ್ಣರಾಯ 1985.
2. ಸಂಕೃತಿ, (ಸಂ) ಪ್ರೊ. ಎಚ್.ಜೆ. ಲಕ್ಕಪ್ಪಗೌಡ, ಪ್ರೊ. ಸುಕನ್ಯಾ ಮಾರುತಿ.1988.
3. ಸಂಕರ್ಷಣ,(ಸಂ) ಜಿ. ಜ್ಞಾನಾನಂದ, ಪ್ರೊ. ಸಂಜೀವ ಶೆಟ್ಟಿ, 1988.
4. ಬರಹ ಬಾಗಿನ, (ಸಂ) ಎಚ್.ವಿ. ನಾಗೇಶ್, ಧಾರವಾಡ, 1996.
5. ಹಂಗ್ರಂಥಾವಳಿ, (ಸಂ) ತಮಿಳ್‌ಸೆಲ್ವಿ,ಸ್ಮಿತಾರೆಡ್ಡಿ 1997.
6. Scholars speak, (Ed) Dr. Nalluru Prasad, Bangalore, 2006

**ಡಾ. ಹಂಪನಾ ಅವರಿಗೆ ಅರ್ಪಿಸಲ್ಪಟ್ಟ ಗ್ರಂಥಗಳು:**

1. ವಿಜಯಮ್ಮಿ ಚರಿತೆ- (ಸಂ) ಮಹೇಂದ್ರ, 1982.
2. ನನ್ನ ಕಿಟಕಿಯ ಆಚೆ- ಡಾ. ಎಸ್. ಪಿ. ಪದ್ಮಪ್ರಸಾದ್. 1985
   (ಡಾ. ಹಂಪನಾ ದಂಪತಿಗಳಿಗೆ ಅರ್ಪಿತ)
3. ವಡ್ಡಗೆರೆ ನಾಗಮ್ಮ- ಡಿ. ಎನ್. ರಘುರಾಂ, 1990.
4. ಚದುರಂಗರ ಕಾದಂಬರಿಗಳು- ಒಂದು ಅಧ್ಯಯನ
   -ರಾಜಣ್ಣ ಹುಣಸೇಪಾಳ್ಯ, 1992.
5. ಕಾವ್ಯಸಂಗಮ- ತಾ. ಸಿ. ತಿಮ್ಮಯ್ಯ, 1993.
6. ಧೀಮಂತ ಹಂಪನಾ-ನಾಗೇಂದ್ರಪ್ಪ ದಾಗಿನಕಟ್ಟೆ. 1993.
7. ಬಹಳ ಕಾದಿದ್ದೇನೆ- ಗಂಗೂ ಮೂಲಿಮನಿ,1994.
8. ಮಳೆ- ಒಂದು ಜಾನಪದೀಯ ಅಧ್ಯಯನ, - ಡಾ. ಎಸ್. ಪಿ. ಪದ್ಮಪ್ರಸಾದ್ 1994.
9. ಹಾಡೇನ- ಪಾಡೇನ- ಡಾ. ವಿಜಯ ಸುಬ್ಬರಾಜ್ 1996.
   (ಹಂಪನಾ ದಂಪತಿಗಳಿಗೆ ಅರ್ಪಿತ)
10. ಕಾವ್ಯಾನುಭವ - ಪ್ರೊ. ಡಿ. ಲಿಂಗಯ್ಯ 1996.
11. ಜಾನಪದವನ್ನು ಕುರಿತು- ಡಾ. ಜಿ. ವಿ. ಡಿ. 1996.
12. ಸಿರಿಗಂಧ- ಪಿ. ಜಿ. ಕೆಂಪಣ್ಣವರ, 1997.
13. ಸಾಹಿತ್ಯ ಮಂಥನ -ಡಾ. ಶಿವಾನಂದಗಾಳಿ, 1997
14. ಕರ್ನಾಟಕ ಇತಿಹಾಸ ಕೈಪಿಡಿ - ಎಂ. ಜಿ. ಮಂಜುನಾಥ, 1997.

15. ಮಾಲೆಗಟ್ಟುವ ಬೆವರು (ಹಂಪನಾ ದಂಪತಿಗಳಿಗೆ)- ಮೊಹ್ಮದ್ ಭಾಷಾ ಗೂಳ್ಯಂ, 1999
16. ಹೊಳೆದಂಡೆ ಕರಿಕೆ (ಹಂಪನಾ ದಂಪತಿಗಳಿಗೆ)- ಡಾ. ಚಿಕ್ಕಣ್ಣಯಣ್ಣೆಕಟ್ಟೆ, 1999
17. ಜೈನ ಸಂಸ್ಕೃತಿ ಸಮೀಕ್ಷೆ, ಪ್ರೊ, ಶಾಂತಿನಾಥ ಎ. ದಿಬ್ಬದ, 2003
18. ಸಿದ್ಧರಾಮನ ಸೊನ್ನಲಿಗೆ - ಡಾ. ಜಿ. ಎನ್. ಉಪಾಧ್ಯೆ, ಮುಂಬಯಿ, 2003
19. ಚಿಂತನ ದೀಪ್ತಿ – ಪ್ರೊ.ಕೆ. ಓಂಕಾರಪ್ಪ, 2007

# ಅನುಬಂಧ

## ಜೀವನದ ಮುಖ್ಯ ವಿವರಗಳು

| | | |
|---|---|---|
| ಹೆಸರು | : | ಹಂಪಸಂದ್ರ ಪದ್ಮನಾಭಯ್ಯ ನಾಗರಾಜಯ್ಯ |
| ತಂದೆ | : | ಶ್ಯಾನುಭೋಗ್ ಪದ್ಮನಾಭಯ್ಯ |
| ತಾಯಿ | : | ಪದ್ಮಾವತಮ್ಮ |
| ಜನ್ಮದಿನಾಂಕ | : | 7-10-1936. |
| ಜನ್ಮಸ್ಥಳ | : | ಹಂಪಸಂದ್ರ. ಗೌರೀಬಿದನೂರು ತಾಲ್ಲೂಕು, ಕೋಲಾರ ಜಿಲ್ಲೆ |
| ವಿದ್ಯಾಭ್ಯಾಸ | : | ಬಿ. ಎ. (ಆನರ್ಸ್) 1958<br>ಎಂ. ಎ. 1959,<br>ಪಿಎಚ್. ಡಿ. 1984. |
| ವಿವಾಹ (ರಿಜಿಸ್ಟರ್ಡ್) | : | 1961 ಮಡದಿ : ಡಾ. ಕಮಲಾ ಹಂಪನಾ |
| ಅಧ್ಯಾಪನ | : | 1. ಮಹಾರಾಣಿ ಕಾಲೇಜು, ಮೈಸೂರು<br>2. ಸರ್ಕಾರಿ ಕಾಲೇಜು, ಮಂಡ್ಯ<br>3. ಡಿ. ಆರ್. ಎಂ. ಕಾಲೇಜು. ದಾವಣಗೆರೆ<br>4. ಸಹ್ಯಾದ್ರಿ ಕಾಲೇಜು, ಶಿವಮೊಗ್ಗ<br>5. ಸರ್ಕಾರಿ ಕಲೆ ಮತ್ತು ವಿಜ್ಞಾನ ಕಾಲೇಜು, ಬೆಂಗಳೂರು<br>6. ಸೆಂಟ್ರಲ್ ಕಾಲೇಜು, ಬೆಂಗಳೂರು<br>7. ಕನ್ನಡ ಅಧ್ಯಯನ ಕೇಂದ್ರ, ಜ್ಞಾನಭಾರತಿ ಬೆಂಗಳೂರು ವಿಶ್ವವಿದ್ಯಾಲಯ |
| ಮಕ್ಕಳು | : | (ಮಗ) ಎಚ್.ಎನ್. ಹರ್ಷವರ್ಧನ ಬಿ.ಇ. (ಆರ್ಕಿಟೆಕ್ಚರ್)<br>(ಹಿರಿಯ ಮಗಳು) ಎಚ್. ಎನ್. ರಾಜ್ಯಶ್ರೀ<br>ಬಿ. ಎಸ್‌ಸಿ. ಪಿ.ಜಿ. ಡಿಪ್ -ಇನ್-ಕಂಪ್ಯೂಟರ್ ಸೈನ್ಸ್,<br>(ಕಿರಿಯ ಮಗಳು) ಎಚ್. ಎನ್. ಆರತಿ<br>ಎಂ. ಎಸ್ (ಕಮ್ಯುನಿಕೇಷನ್), ಎಂ.ಎ., |

## ನಿರ್ವಹಿಸಿದ ಸಾಂಸ್ಕೃತಿಕ ಜವಾಬ್ದಾರಿಗಳು

ಉಪಾಧ್ಯಕ್ಷರು : ಕರ್ನಾಟಕ ಸಂಘ, ಮಹಾರಾಜ ಕಾಲೇಜು ಮೈಸೂರು, 1958

ಕಾರ್ಯದರ್ಶಿ : ಮಂಡ್ಯ ಸರ್ಕಾರಿ ಕಾಲೇಜಿನ ಅಧ್ಯಾಪಕ ಸಂಘ, 1960-61
ಬೆಂಗಳೂರು ಸರ್ಕಾರಿ ಕಲೆ ಮತ್ತೆ ವಿಜ್ಞಾನ ಕಾಲೇಜು, 1965-67.
ಕನ್ನಡ ಸಾಹಿತ್ಯ ಪರಿಷತ್ತು(27-10-1966ರಿಂದ30-9-74)

ನಿರ್ದೇಶಕರು : ಜೈನ ಸಂಶೋಧನ ಕೇಂದ್ರ, 1977-79.
ಕನ್ನಡ ಅಧ್ಯಯನ ಕೇಂದ್ರ, 1992-94.
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, 1993.

ಸಂಚಾಲಕರು : ಅಖಿಲ ಭಾರತ ಜನಪರ ಸಾಹಿತ್ಯ ಪರಿಷತ್ತು, 1988 ರಿಂದ

ಸಂಪಾದಕರು : 'ಜೀವನ' ಮಾಸಪತ್ರಿಕೆ 1969-75
ಕನ್ನಡ ಸಾಹಿತ್ಯಪರಿಷತ್ಪತ್ರಿಕೆ, 1966
ಸಾಧನೆ 1977-78, 1992-94.

ಮೇನೇಜಿಂಗ್ ಟ್ರಸ್ಟಿ : ಪ್ರಾಕೃತ ಜ್ಞಾನಭಾರತಿ ಎಜುಕೇಷನ್ ಟ್ರಸ್ಟ್, 1989-92.

ಅಧ್ಯಕ್ಷರು :
1. ಕನ್ನಡ ಸಾಹಿತ್ಯ ಪರಿಷತ್ತು, 1978-1986 ಫೆಬ್ರುವರಿವರೆಗೆ.
2. ಕಾಸರಗೋಡು ಕನ್ನಡಿಗರ ಸಮ್ಮೇಳನ 1979 ಮಾರ್ಚ್.
3. ಹೈದರಾಬಾದು- ಸಿಕಂದರಾಬಾದು ಕನ್ನಡಸಾಹಿತ್ಯ ಸಮ್ಮೇಳನ 1979 ಮಾರ್ಚ್.
4. ಬೆಳಗಾವಿ ಜಿಲ್ಲಾಸಾಹಿತ್ಯ ಸಮ್ಮೇಳನ ೧೯೮೪.
5. ಹೆಬ್ರಿಸಾಹಿತ್ಯ ಸಮ್ಮೇಳನ, ಡಿಸೆಂಬರ್1984.
6. ಅಖಿಲ ಕರ್ನಾಟಕ ಕನ್ನಡ ಶೀಘ್ರಲಿಪಿ-ಬೆರಳಚ್ಚುಗಾರರ ಸಂಘ 1983 ರಿಂದ
7. ಕರ್ನಾಟಕ ಜೈನ ಸಾಹಿತ್ಯ ಪರಿಷತ್ತು, 1985-88.
8. ಕರ್ನಾಟಕ ಗ್ರಂಥ ಪ್ರಕಾಶನ ಸಂಸ್ಥೆ, 1980.
9. ಕನ್ನಡ ಬಳಗ, ಬೆಂಗಳೂರು, 1982-84
10. ರಂಗ ಚೇತನ, ಬೆಂಗಳೂರು 1989-94.
11. ಸಾಹಿತ್ಯಗೋಷ್ಠಿ : ಸೈಂಟ್ ಲೂಯಿಸ್, ಅಮೇರಿಕ 1990.
12. ಕೋಲಾರ ಜಿಲ್ಲಾ ಸಾಹಿತ್ಯ ಸಮ್ಮೇಳನ, ಚಿಕ್ಕಬಳ್ಳಾಪುರ,1992
13. ಸಾಹಿತ್ಯ ಗೋಷ್ಠಿ : ಲಾಸ್ ಏಂಜಲೀಸ್, ಅಮೇರಿಕ 1990.

14. ಅಂತರ ವಿಶ್ವವಿದ್ಯಾಲಯ ಪ್ರಸಾರಾಂಗ ಪ್ರಕಟಣ ಸಲಹಾ ಸಮಿತಿ 1992.

15. 8ನೇ ಸಂಸ್ಕೃತಿ ಸಮ್ಮೇಳನ (ಕರ್ನಾಟಕ ವಿಶ್ವವಿದ್ಯಾಲಯ), ಧರ್ಮಸ್ಥಳ, 2004

16. ಅಖಿಲ ಕರ್ನಾಟಕ ಜೈನ ಸಾಹಿತ್ಯ ಸಮ್ಮೇಳನ, ಶ್ರವಣ ಬೆಳಗೊಳ, ಅಕ್ಟೋಬರ್ 22, 23 – 2005

ಉದ್ಘಾಟಕರು:

1. 43 ನೇ ಧರ್ಮಸ್ಥಳ ಸಾಹಿತ್ಯ ಸಮ್ಮೇಳನ, 1978.
2. ಕಾರವಾರ ಜಿಲ್ಲಾ ಸಾಹಿತ್ಯ ಸಮ್ಮೇಳನ, 1979.
3. ಅಖಿಲ ಕರ್ನಾಟಕ ಗಮಕಿಗಳ ಸಮ್ಮೇಳನ ಮೈಸೂರು, 1979.
4. ಅಖಿಲ ಕರ್ನಾಟಕ ಕೀರ್ತನಕಾರರ ಸಮ್ಮೇಳನ, ಕೃಷ್ಣರಾಜನಗರ, 1980.
5. ಬೀದರ್ ಜಿಲ್ಲಾ ಸಾಹಿತ್ಯ ಸಮ್ಮೇಳನ, 1983. ಜೂನ್.
6. ಆಡಳಿತ ಭಾಷಾಗೋಷ್ಠಿ 51ನೇ ಸಾಹಿತ್ಯ ಸಮ್ಮೇಳನ ಧರ್ಮಸ್ಥಳ1979.
7. ನಾಟಕ ಗೋಷ್ಠಿ, 55ನೇ ಸಾಹಿತ್ಯ ಸಮ್ಮೇಳನ, ಶಿರಸಿ, 1982.
8. ಸಮೂಹ ಮಾಧ್ಯಮ ಗೋಷ್ಠಿ, 56 ನೇ ಸಾಹಿತ್ಯ ಸಮ್ಮೇಳನ, ಕೈವಾರ, 1984.

ವಿಶೇಷೋಪನ್ಯಾಸಗಳು : ಬೆಂಗಳೂರು, ಮೈಸೂರು, ಕುವೆಂಪು, ಮಂಗಳೂರು, ಮತ್ತು ಕರ್ನಾಟಕ ವಿಶ್ವವಿದ್ಯಾಲಯಗಳ ವತಿಯಿಂದ

ಪ್ರಶಸ್ತಿಗಳು : ಮಕ್ಕಳ ಸಾಹಿತ್ಯ ರಚನೆಗಾಗಿ ರಾಷ್ಟ್ರೀಯ ಪುರಸ್ಕಾರ ದೆಹಲಿ1990.
: ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, 1994.
: ಜಾನಪದ ಹಾಗೂ ಯಕ್ಷಗಾನ ಅಕಾಡೆಮಿ ಪ್ರಶಸ್ತಿ, 1995.
: ಚಾವುಂಡರಾಯ ಪ್ರಶಸ್ತಿ : ಕನ್ನಡ ಸಾಹಿತ್ಯ ಪರಿಷತ್ತು1996.
: 'ಧರ್ಮದಿವಾಕರ' ಬಿರುದು, ಚಿಕ್ಕೋಡಿಯ ಜನತೆಯಿಂದ(1-1-97)
: 'ಸಾಹಿತ್ಯಸಿಂಧು' ಬಿರುದು ಬಿಜಾಪುರ ಜಿಲ್ಲೆಯ ಇಂಡಿ ಜನತೆಯಿಂದ.
: ರಾಜ್ಯೋತ್ಸವ ಪ್ರಶಸ್ತಿ, 1998
: ಕಾವ್ಯಾನಂದ ಪ್ರಶಸ್ತಿ, 1999
: ಜ್ಞಾನೋದಯ ಪುರಸ್ಕಾರ, 1999 (ಇಂದೋರ್)
: ಬಾಬುಲಾಲ್ ಸುವರ್ಣ ಪದಕ, 2003 (ಅಹಮದಬಾದು)
: ಆಚಾರ್ಯ ಸುಮತಿ ಸಾಗರ ಪುರಸ್ಕಾರ, 2005 (ಸೋನಾಗಿರಿ, ಮಧ್ಯಪ್ರದೇಶ)

: ಶಾಸನ ಸಾಹಿತ್ಯ ಪ್ರಶಸ್ತಿ, ಶ್ರವಣಬೆಳಗೊಳ 2001
ಜ್ಞಾನೋದಯ ಪ್ರಶಸ್ತಿ, ಇಂದೋರು (1999) 2000
ಜ್ಞಾನ ಭಾಸ್ಕರ ಬಿರುದು, ಶಿವಮೊಗ್ಗ ನಾಗರಿಕರು, 2001
: ಶಂಬಾಜೋಶಿ ಪ್ರಶಸ್ತಿ ಶಿವಮೊಗ್ಗ ಕರ್ನಾಟಕ ಸಂಘ, 2005
ಕುವೆಂಪು ದೀಪ ಪ್ರಶಸ್ತಿ, ಹೊನ್ನಾವರ, 2004
: ನಿಡುಮಾಮಿಡಿ ಮಠದಿಂದ ಚಿನ್ನದ ಪದಕ ಮತ್ತು 'ಭಾಷಾಭೂಷಣ' ಬಿರುದು.ಶೃಂಗೇರಿಮಠ, ಚಿತ್ರದುರ್ಗದ ಮುರುಘಾಮಠ, ಶ್ರವಣ ಬೆಳಗೊಳಮಠ, ಸಾವಳಗಿ ಮಠಗಳ ವಿಶೇಷ ಪ್ರಶಸ್ತಿಗಳು.
: ಆಳ್ವಾಸ್ ನುಡಿ ಸಿರಿ ಪ್ರಶಸ್ತಿ ಮೂಡಬಿದುರೆ, 2006
: ನಾಡೋಜ ಪ್ರಶಸ್ತಿ ಕನ್ನಡ ವಿಶ್ವವಿದ್ಯಾಲಯ, ಹಂಪಿ 2006

**ಸಂಘ ಸಂಸ್ಥೆಗಳಿಂದ ಪ್ರಶಸ್ತಿಗಳು:**
: ಚಕ್ರೇಶ್ವರಿ ಸಂಘ, ಬೆಂಗಳೂರು ಮತ್ತು ಹಲವಾರು ಸಂಘ ಸಂಸ್ಥೆಗಳ ಪ್ರಶಸ್ತಿಗಳು.

**ಆಕಾಶವಾಣಿ** : ಸುಮಾರು 60 ಕ್ಕೂ ಹೆಚ್ಚಿನ ಕಾರ್ಯಕ್ರಮಗಳು.

**ವೀಕ್ಷಕ ವಿವರಣೆ :** 1967, ಮತ್ತು 1981, 2006ರಲ್ಲಿ ಶ್ರವಣಬೆಳಗೊಳದಲ್ಲಿ ನಡೆದ ಮಹಾ ಮಸ್ತಕಾಭಿಷೇಕ:
1982, ಮತ್ತು1994ರಲ್ಲಿ ಧರ್ಮಸ್ಥಳದಲ್ಲಿ ನಡೆದ ಮಹಾಮಸ್ತಕಾಭಿಷೇಕ ಸಂದರ್ಭದಲ್ಲಿ.

**ದೂರದರ್ಶನ**
**ಸಂದರ್ಶನ** ಹೈದರಾಬಾದ್ ಮತ್ತು ಬೆಂಗಳೂರು ಕೇಂದ್ರಗಳಿಂದ.

**ಇಂಗ್ಲಿಷ್ ಪ್ರಬಂಧ ಮಂಡಿಸಿದ ಸಮ್ಮೇಳನಗಳು**
: ಅಖಿಲ ಭಾರತ ದ್ರಾವಿಡ ಭಾಷಾ ಸಮ್ಮೇಳನ ಮದರಾಸು1974.
:, ಅಖಿಲ ಭಾರತ ಜೈನ ಸಮ್ಮೇಳನ, ಧಾರವಾಡ1975.
: ಅಖಿಲ ಭಾರತ ಭಾಷಾ ಸಮ್ಮೇಳನ, ಬೆಂಗಳೂರು 1977.
: ಬೇಸಿಗೆ ಶಿಬಿರ, ಬೊಂಬಾಯಿ 1966.



ಪುಸ್ತಕ ಬಹುಮಾನಗಳು

ರಾಜ್ಯಸಾಹಿತ್ಯ ಅಕಾಡೆಮಿ ಪ್ರಶಸ್ತಿ (ಎರಡು ಪುಸ್ತಕಗಳಿಗೆ).

1. ದ್ರಾವಿಡ ಭಾಷಾ ವಿಜ್ಞಾನ.
2. ಯಕ್ಷ ಯಕ್ಷಿಯರು.
3. ಬೆಂಗಳೂರು ವಿಶ್ವವಿದ್ಯಾಲಯ: ನೋಂಪಿಯ ಕಥೆಗಳು ಪುಸ್ತಕಕ್ಕೆ
4. ದೇವರಾಜ ಬಹದ್ದೂರ್ ಪುರಸ್ಕಾರ: ಕಮ್ಮಟದ ಕಿಡಿಗಳು ಪುಸ್ತಕಕ್ಕೆ
5. ಧಾರವಾಡ ವಿದ್ಯಾವರ್ಧಕ ಸಂಘ: ಫಣಿಕುಮಾರ ಕಥಾ ಸಾಹಿತ್ಯ ಪುಸ್ತಕಕ್ಕೆ

* Vaddaradhane: A Peerless Prose- Work, *Pracheen Teerrn Jeernodhar,* July 2002, Lucknow
* Jaina Warrior: Anxiety Over Practices of Himsa vs Animsa Jinamanari, Vol 24-2, Oct 2001
* Epigraphia Jainika, *Jain Journal* 38-1, July 2003
* The Adipurana: The Genesis of Human History, *Jain Journal* vol. 38-4 2004
* Bhalki: An Ancient Jaina colony, *Kala*, 2004

  Theme Editor of (ed) *Jinamanjari,* April 2000 (U.S.A. and Canada)
* Jainism under Calukyas of Kalyana, *Jain Journal*, vol xxxiv-3, January 2000
* Invocatory Sanskrit verses in Jaina Inscrpions (Karnataka): *Sambodhi,* vol. xxii-1998-99

  Dimensions of Babanagar Inscrition, *Jain Journal*, xxxviii-1, July 2002.

  Spectrum of 20th century Kannada language and Literature, *dravidian studies*, vol. 1, No. 1. (Octo 2002) Kuppam
* Mahamandalesvara Butuga, A prafile, *Jain Journal*, Vol, xxxvii-3, january 2003
* Rewards of Pilgrimage ಮಲ್ಲಾರ 5-6 ಜೂನ್ 2005
* The spread of Jainnism in Karnataka: Early phase: *Pracheen Teerth Jeernodhar*, vol. 42 July-Aug 2005

* Imprints of Buddhism in Karnataka: National Seminar on Global Dimensions of Buddhist culture; 11-13 December 2005 M L Sukhadia University, Udaipur (Rajasthan)

ಜನಪರ ಸಾಹಿತ್ಯ ಪರಿಷತ್ತಿನ ವತಿಯಿಂದ ಹಂಪನಾ ಪ್ರಕಟಿಸಿದ ಪುಸ್ತಕಗಳು;

1. ಕೆಂಡ ತುಂಬಿದ ಮಡಿಲು (ಕವನಸಂಕಲನ): ಹರಿಯಬ್ಬೆ ಕೆಂಚಮ್ಮ 1989
2. ಜನಪರ. (ಸ್ಮರಣಸಂಚಿಕೆ): ಟಿ. ಕೆ. ಮಹಮೂದ್(ಸಂ). 1989.
3. ಸಿಟಿಬಸ್ಸು. (ನಗೆಬರಹಗಳು): ಡಾ. ಸತ್ಯವತಿ. 1990.
4. ವಡ್ಡಗೆರೆ ವೀರನಾಗಮ್ಮ (ಜಾನಪದ): (ಸಂ) ಡಿ. ಎನ್. ರಘುರಾಮ್, 1990.
5. ಜನಪರ ಸ್ಪಂದನ (ಸ್ಮರಣ ಸಂಚಿಕೆ): (ಸಂ) ಟಿ. ಕೆ. ಮಹಮೂದ್. 1990
6.ವನಸುಮ (ವ್ಯಕ್ತಿಚಿತ್ರ): ಯಳನಾಡು ಅಂಜನಪ್ಪ. 1991.
7. ಮುಂಬೈಮಳೆ (ಪ್ರಬಂಧ ಸಂಕಲನ): ಡಾ. ಜಿ. ಡಿ. ಜೋಶಿ. 1991.
8. ಸ್ನೇಹದ ನೆಲದಲ್ಲಿ (ಕವನ ಸಂಕಲನ):ಪ್ರೊ. ಸಂಜೀವಶೆಟ್ಟಿ. 1992.
9. ಮುತ್ತಣ್ಣನ ಕಥೆಗಳು (ಕಥಾ ಸಂಲನ):ಡಾ. ಐ. ಮಾ. ಮುತ್ತಣ್ಣ. 1992.
10. ನೇಣು ಮತ್ತು ಇತರ ಕಥೆಗಳು. (ಕಥಾ ಸಂಕಲನ): ಯಳನಾಡು ಅಂಜನಪ್ಪ
11. ಗಿನ್ನೀಸ್ ರೆಕಾರ್ಡ್ (ನಗೆ ನಾಟಕಗಳು): ಡಾ. ಸತ್ಯವತಿ. 1996.
12. ತೆಳ್ಳಗಿರಬಾರದಯ್ಯ ಲೋಕದೊಳಗೆ (ನಗೆಬರಹಗಳು): ಡಾ. ಸತ್ಯವತಿ 1996.

# 1994ರ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ.*

'ಹಂಪನಾ' ಎಂಬ ಸಂಕ್ಷಿಪ್ತನಾಮದಿಂದ ಪ್ರಸಿದ್ಧರಾಗಿರುವ ಡಾ. ಹಂಪನಾಗರಾಜಯ್ಯನವರು 1936ರಲ್ಲಿ ಕೋಲಾರ ಜಿಲ್ಲೆಯ ಗೌರಿಬಿದನೂರು ತಾಲ್ಲೂಕಿನ ಹಂಪಸಂದ್ರದಲ್ಲಿ ಜನಿಸಿದರು. ವಿವಿಧ ಕಾಲೇಜುಗಳಲ್ಲಿ ಕೆಲಸಮಾಡಿ ಉತ್ತಮ ಅಧ್ಯಾಪಕರೆಂದು ಹೆಸರು ಮಾಡಿರುವ ಇವರು ಈಗ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇದಕ್ಕೂ ಮುಂಚೆ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದರು.

ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಯಾಗಿ ಮತ್ತು ಅಧ್ಯಕ್ಷರಾಗಿ ಅವಿಶ್ರಾಂತವಾಗಿ ಕೆಲಸ ಮಾಡಿರುವ ಇವರು ಅನೇಕ ಸಂಘ ಸಂಸ್ಥೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಸಾಂಸ್ಕೃತಿಕ ಹಾಗೂ ಆಡಳಿತಾತ್ಮಕ ಸೇವೆ ಸಲ್ಲಿಸಿದಾರೆ. ಅರವತ್ತಕ್ಕೂ ಹೆಚ್ಚು ಪುಸ್ತಕಗಳನ್ನೂ ಇನ್ನೂರಕ್ಕೂ ಹೆಚ್ಚು ಲೇಖನಗಳನ್ನು ಬರೆದಿರುವ ಡಾ . ಹಂಪನಾ ಅವರು ಜೀವನ, ಸಾಧನೆ, ಪರಿಷತ್ಪತ್ರಿಕೆ, ಕನ್ನಡನುಡಿ ಮುಂತಾದ ನಿಯತಕಾಲಿಕೆಗಳ ಸಂಪಾದಕರಾಗಿಯೂ ದುಡಿದಿದ್ದಾರೆ. ಅನೇಕ ರಾಷ್ಟ್ರೀಯ ಅಂತರರಾಷ್ಟ್ರೀಯ ವಿದ್ವತ್ ಗೋಷ್ಠಿಗಳಲ್ಲಿ ಸಾಹಿತ್ಯ, ಸಂಸ್ಕೃತಿ ಮತ್ತು ಭಾಷಾ ವಿಜ್ಞಾನಕ್ಕೆ ಸಂಬಂಧಿಸಿದಂತೆ ಪ್ರಬಂಧಗಳನ್ನು ಮಂಡಿಸಿ ಕನ್ನಡಕ್ಕೆ ಕೀರ್ತಿ ತಂದಿದ್ದಾರೆ. ಸಂಶೋಧನೆ, ಗ್ರಂಥ ಸಂಪಾದನೆ, ಶಾಸ್ತ್ರೀಯ ಹಾಗೂ ಸೃಜನಶೀಲ ನೆಲೆಯ ಕೃತಿ ರಚನೆ ಹೀಗೆ ವಿವಿಧ ಕ್ಷೇತ್ರಗಳಲ್ಲಿ ಸಾಹಿತ್ಯ ಕೃಷಿ ಮಾಡಿರುವ ಇವರು ಹೊಸದನ್ನು ಹುಡುಕುವ ಶೋಧನಾತ್ಮಕ ದೃಷ್ಟಿಯನ್ನು ಹೊಂದಿದ್ದಾರೆ.

ಡಾ. ಹಂಪನಾ ಅವರ ಬಹುಮುಖ ಸಾಹಿತ್ಯ ಸೇವೆಯನ್ನು ಪರಿಗಣಿಸಿ ಕರ್ನಾಟಕ ಸಾಹಿತ್ಯ ಅಕಾಡೆಮಿಯು ಗೌರವ ಪ್ರಶಸ್ತಿ ನೀಡಿ ಗೌರವಿಸುತ್ತಿದೆ. ಕರ್ನಾಟಕ ರಾಜ್ಯಸಾಹಿತ್ಯ ಅಕಾಡೆಮಿಯು **ಗೌರವ ಪ್ರಶಸ್ತಿ ೧೯೯೪ ರ ಕೈಪಿಡಿಯಿಂದ**

ಅಮರೇಶ್ವರ ವಿಜಯ ನಾಟಕ ಮಂಡಳಿ ಗುಬ್ಬಿ ತುಮಕೂರು ಮತ್ತು ಕನ್ನಡ ಸಂಸ್ಕೃತಿ ಇಲಾಖೆ ಬೆಂಗಳೂರು ಇವರ ಸಂಯುಕ್ತ ಆಶ್ರಯದಲ್ಲಿ ಏರ್ಪಡಿಸಿದ್ದ **'ಐತಿಹಾಸಿಕ ನಾಟಕೋತ್ಸವ'**ದ ಸಂದರ್ಭದಲ್ಲಿ ಡಾ. ಹಂಪನಾ ಅವರಿಗೆ ಅರ್ಪಿಸಿದ

**ಸನ್ಮಾನ ಪತ್ರ.**

ನಾಡಿನ ಸಾಹಿತ್ಯ ದಿಗ್ಗಜಗಳಲ್ಲಿ ಒಬ್ಬರಾದ ಡಾ. ಹಂಪನಾ ನಾಗರಾಜಯ್ಯನವರು ದಿನಾಂಕ 7- 10- 1936ರಂದು ಕೋಲಾರ ಜಿಲ್ಲೆಯ ಗೌರಿಬಿನೂರು ತಾಲ್ಲೂಕಿನ ಹಂಪಸಂದ್ರದಲ್ಲಿ ಜನಿಸಿದರು. ಇವರ ತಂದೆ ಪ್ರಸಿದ್ಧ ಮನೆತನದ ಶ್ಯಾನುಭೋಗ್ ಪದ್ಮನಾಭಯ್ಯ, ತಾಯಿ ಪದ್ಮಾವತಮ್ಮ. ಹಂಪಸಂದ್ರ ಗೌರೀಬಿದನೂರು, ಮಧುಗಿರಿಗಳಲ್ಲಿ

ವಿದ್ಯಾಭ್ಯಾಸಮಾಡಿದ ಶ್ರೀಯುತರು ಮೈಸೂರು ವಿಶ್ವವಿದ್ಯಾಯನಿಲಯದಲ್ಲಿ ಬಿ. ಎ. (ಆನರ್ಸ್) ಮತ್ತು ಎಂ. ಎ. ಪದವಿ ಗಳಿಸಿದರು. ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಪಿಹೆಚ್. ಡಿ. ಪದವಿ ಪಡೆದರು. ತಹಶೀಲ್ದಾರ್ ಹುದ್ದೆಯನ್ನು ತಿರಸ್ಕರಿಸಿ ಉಪನ್ಯಾಸಕ ವೃತ್ತಿಯನ್ನು ಆರಂಭಿಸಿದ ಹಂಪ. ನಾಗರಾಜಯ್ಯನವರು ಮಹಾರಾಣಿ ಕಾಲೇಜು ಮೈಸೂರು, ಸರ್ಕಾರಿ ಕಾಲೇಜು ಮಂಡ್ಯ. ಡಿ. ಆರ್. ಎಂ. ಕಾಲೇಜು ದಾವಣಗೆರೆ, ಸರ್ಕಾರಿ ಕಲೆ ಮತ್ತು ವಿಜ್ಞಾನ ಕಾಲೇಜು ಬೆಂಗಳೂರು, ಸಹ್ಯಾದ್ರಿ ಕಾಲೇಜು ಶಿವಮೊಗ್ಗ, ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಕೇಂದ್ರ, ಮುಂತಾದ ಸ್ಥಳಗಳಲ್ಲಿ ಉಪನ್ಯಾಸಕರಾಗಿ, ಪ್ರಾಧ್ಯಾಪಕರಾಗಿ ಸುಮಾರು ಐವತ್ತಕ್ಕೂ ಹೆಚ್ಚು ಕೃತಿಗಳನ್ನು ರಚಿಸಿ ಸಾರಸ್ವತ ಲೋಕವನ್ನು ಶ್ರೀಮಂತಗೊಳಿಸಿದ್ದಾರೆ. ಭಾಷಾ ವಿಜ್ಞಾನಿಗಳು, ದ್ರಾವಿಡ ಸಂಖ್ಯಾವಾಚಕಗಳು, ಭಾಷೆ, ಭಾಷಾವಿಜ್ಞಾನ. ಯಕ್ಷಯಕ್ಷಿಯರು, ನೋಂಪಿಯ ಕಥೆಗಳು, ಕಮ್ಮಟದ ಕಿಡಿಗಳು, ಗೊಮ್ಮಟ-ಬಾಹುಬಲಿ (ಸಂಶೋಧನೆ), ನಾಗಕುಮಾರ ಷಟ್ಪದಿ, (ಸಂಪಾದನೆ) ನಾಗಶ್ರೀ, ಸವ್ಯಸಾಚಿ ಪಂಪ (ಕಾದಂಬರಿ), ಹೆಸರಿನ ಸೊಗಸು (ಪ್ರಬಂಧ), ಗೋವಿಂದ ಪೈ ಬದುಕು ಬರಹ, ಗಡಿನಾಡ ಗಾಂಧಿ (ಜೀವನ ಚರಿತ್ರೆ), ಕರ್ನಾಟಕದ ಜಾತ್ರೆಗಳು. ಆಕಾಶ ಜಾನಪದ, ಮುಂತಾದ ಹಲವಾರು ಶ್ರೇಷ್ಠ ಕೃತಿಗಳನ್ನು ರಚಿಸಿದ್ದಾರೆ. ಉತ್ತಮ ಭಾಷಾ ಪ್ರೌಢಿಮೆ ಪಡೆದ ಅವರ ನೂರ ಮೂವತ್ತಕ್ಕಿಂತಲೂ ಹೆಚ್ಚಿನ ಸಂಖ್ಯೆಯ ಸಂಶೋಧನೆ ಲೇಖನಗಳು ನಾಡಿನ ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ದ್ರಾವಿಡ ಭಾಷಾ ವಿಜ್ಞಾನ ಮತ್ತು ಭಾಷಾ ವಿಜ್ಞಾನಿಗಳು ಎಂಬ ಎರಡು ಬೃಹತ್ ಗ್ರಂಥಗಳನ್ನು ಅರವತ್ತರ ದಶಕದಲ್ಲಿಯೇ ರಚಿಸಿದ ಶ್ರೀಯುತರು ಶ್ರೇಷ್ಠ ಭಾಷಾವಿಜ್ಞಾನಿಯೆಂದು ಹೆಸರು ಪಡೆದಿದ್ದಾರೆ. ಇವರ ಪ್ರಧಾನ ಸಂಪಾದಕತ್ವದಲ್ಲಿ ಬೆಳ್ಳಿ ಬಿಟ್ಟ ಬಳ್ಳಿ ಮಾಲೆಯ ಒಂದು ನೂರಾ ಒಂದು ಪುಸ್ತಕಗಳು, ಮತ್ತು ಮಕ್ಕಳ ಮಾಲೆಯ ಇನ್ನೂರು ಪುಸ್ತಕಗಳು ಪ್ರಕಟವಾಗಿವೆ.

ಜೈನ ಸಂಶೋಧನ ಕೇಂದ್ರ, ಕನ್ನಡ ಅಧ್ಯಯನ ಕೇಂದ್ರಗಳ ನಿರ್ದೇಶಕರಾಗಿ, ಕನ್ನಡ ಶೀಘ್ರಲಿಪಿ ಬೆರಳಚ್ಚುಗಾರರ ಸಂಘ, (ಅಕಶೀಬೆ) ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ಬಳಗ , ಕರ್ನಾಟಕದ ಗ್ರಂಥ ಪ್ರಕಟನಾ ಸಲಹಾ ಸಮಿತಿ, ರಂಗ ಚೇತನ ಬೆಂಗಳೂರು, ಜನಪರ ಸಾಹಿತ್ಯ ಪರಿಷತ್ತುಗಳಿಗೆ ಅಧ್ಯಕ್ಷರಾಗಿ, ಕರ್ನಾಟಕ ಸಂಘ ಮಹಾರಾಜ ಕಾಲೇಜು ಇಲ್ಲಿ ಉಪಾಧ್ಯಕ್ಷರಾಗಿ, ಕನ್ನಡ ಸಾಹಿತ್ಯ ಪರಿಷತ್ತು, ಮಂಡ್ಯ ಸರ್ಕಾರಿ ಕಾಲೇಜು, ಬೆಂಗಳೂರು ಕಲೆ ಮತ್ತು ಸರ್ಕಾರಿ ವಿಜ್ಞಾನ ಕಾಲೇಜು ಇವುಗಳಲ್ಲಿ ಕಾರ್ಯದರ್ಶಿಯಾಗಿ ಇವರು ನಿರ್ವಹಿಸಿದ ಕಾರ್ಯಗಳು ಶಾಶ್ವತವಾಗಿ ನಿಲ್ಲುವಂತಹವು.

1978 ಜುಲೈ 23ರಂದು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಹಂಪ. ನಾಗರಾಜಯ್ಯನವರು ಅಲ್ಲಿಯವರೆಗೂ ಕಂಡರಿಯದಂತಹ ಬದಲಾವಣೆಗಳನ್ನು ತಂದು ಕನ್ನಡ ಸಾಹಿತ್ಯ ಪರಿಷತ್ತನ್ನು ಅಭಿವೃದ್ಧಿಪಡಿಸಿದರು. ಇಂದಿನ ಸಾಹಿತ್ಯ ಪರಿಷತ್ತಿನ ಕಟ್ಟಡ ಇವರ

ಪರಿಶ್ರಮದ ಫಲ. ಕನ್ನಡ ಸಾಹಿತ್ಯ ಪರಿಷತ್ತಿನ ಮುಖಾಂತರ ಹಲವಾರು ನಾಟಕೋತ್ಸವಗಳನ್ನು ನಡೆಸಿ ಕರ್ನಾಟಕದಾದ್ಯಂತ ನಾಟಕಗಳ ಬಗ್ಗೆ ಜನರಲ್ಲಿ ಅಭಿರುಚಿ ಮೂಡುವಂತೆ ಮಾಡಿದರು. ವಾರ್ಷಿಕ ಸಾಹಿತ್ಯ ಸಮ್ಮೇಳನಗಳು ಸುವ್ಯವಸ್ಥಿತವಾಗಿ ನಡೆಯುವಂತೆ ವ್ಯವಸ್ಥೆ ಜಾರಿಗೆ ತಂದರು. ಒಟ್ಟಾರೆ ಇವರ ಅಧಿಕಾರ ಅವಧಿಯಲ್ಲಿ ನಡೆದಷ್ಟು ಕಾರ್ಯಗಳು ಹಿಂದೆಂದೂ ನಡೆದಿರಲಿಲ್ಲ.

ಪತ್ರಿಕಾರಂಗದಲ್ಲೂ ಇವರು ಸಲ್ಲಿಸಿದ ಸೇವೆ ಗಣನೀಯವಾದುದ್ದು. ಜೀವನ ಮಾಸಪತ್ರಿಕೆ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಾಧನೆ ತ್ರೈಮಾಸಿಕಗಳಿಗೆ ಸಂಪಾದಕರಾಗಿ ದುಡಿದಿದ್ದಾರೆ ಶ್ರೀಯುತರು ಅಧ್ಯಕ್ಷತೆ ವಹಿಸಿದ, ಉದ್ಘಾಟಿಸಿದ, ಸಾಹಿತ್ಯ ಸಮ್ಮೇಳನಗಳಲ್ಲಿ ಮಾಡಿದ ಉಪನ್ಯಾಸಗಳು ಪುಸ್ತಕ ರೂಪದಲ್ಲಿ ಪ್ರಕಟವಾಗಿವೆ. ಹಲವಾರು ಪ್ರಸಿದ್ಧ ಸಾಹಿತಿಗಳು ತಮ್ಮ ಕೃತಿಗಳನ್ನು ಇವರಿಗೆ ಅರ್ಪಿಸಿದ್ದಾರೆ. ಅವುಗಳಲ್ಲಿ ಮುಖ್ಯವಾದುವು ವಡ್ಡಗೆರೆ ನಾಗಮ್ಮ, ವಿಜಯಮ್ಮಿ ಚರಿತೆ, ಕಾವ್ಯಸಂಗಮ, ನನ್ನ ಕಿಟಕಿಯ ಆಚೆ, ಬಹಳ ಕಾದಿದ್ದೇನೆ, ಮಳೆ ಒಂದು ಜಾನಪದೀಯ ಅಧ್ಯಯನ, ಇತ್ಯಾದಿ. ನಾಗೇಂದ್ರಪ್ಪ ದಾಗಿನಕಟ್ಟೆ, ಬಾಳೇಶ ಲಕ್ಷೆಟ್ಟಿ ಮುಂತಾದವರು ಹಂಪನಾ ಅವರ ಜೀವನಚರಿತ್ರೆಗಳನ್ನು ರಚಿಸಿದ್ದಾರೆ. ಗುಲ್ಬರ್ಗ ವಿಶ್ವವಿದ್ಯಾಲಯದ ಸಂಶೋಧಕರಾದ  ನಾಗಪ್ಪ ಚಲವಾದಿಯವರು ಹಂಪನಾ ಅವರ ಕೃತಿಗಳನ್ನು ಕುರಿತು ಮಹಾಪ್ರಬಂಧವನ್ನು ರಚಿಸಿ ಪಿ ಎಚ್. ಡಿ ಪದವಿ ಪಡೆದಿದ್ದಾರೆ. ಹಂಪನಾ ಅವರಿಗೆ ಪಚ್ಚೆತನ, ಸಂಕೃತಿ, ಹಾಗೂ ಸಂಕರ್ಷಣ ಎಂಬ ಮೂರು ಅಭಿನಂದನಾ ಗ್ರಂಥಗಳನ್ನು ಸಮರ್ಪಿಸಲಾಗಿದೆ.

1993 ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ, 1995ರಲ್ಲಿ ಜಾನಪದ ಅಕಾಡೆಮಿ, ಶಿಶು ಸಾಹಿತ್ಯ ಕ್ಷೇತ್ರದಲ್ಲಿನ ವಿಶಿಷ್ಟ ಸೇವೆಗಾಗಿ 1990 ರಲ್ಲಿ ರಾಷ್ಟ್ರೀಯ ಪುರಸ್ಕಾರವನ್ನು ಪಡೆದಿದ್ದಾರೆ. ಶೃಂಗೇರಿ ಮಠ, ಚಿತ್ರದುರ್ಗದ ಬಹನ್ಮಠ, ಮೂರುಸಾವಿರ ಮಠ, ಇಲಕಲ್ ಮಹಾಂತೇಶ ಮಠ, ನಿಡುಮಾಮಿಡಿ ಮಠ ಬಂಗಾರಪೇಟೆ ಮುಂತಾದ ಮಠಗಳಲ್ಲದೆ ಬೆಂಗಳೂರು ವಿಶ್ವವಿದ್ಯಾಲಯ ಸಾರ್ವಜನಿಕ ಶಿಕ್ಷಣ ಇಲಾಖೆ ಮುಂತಾದವು ಪ್ರಶಸ್ತಿ ನೀಡಿ ಗೌರವಿಸಿವೆ. ಶ್ರೀಯುತರು ಭಾಷಾಭೂಷಣ ಪ್ರಶಸ್ತಿ ಹಾಗೂ ಸುವರ್ಣ ಪದಕವನ್ನೂ ಗಳಿಸಿದ್ದಾರೆ.

ಹಂಪ. ನಾಗರಾಜಯ್ಯರವರ ಬಗ್ಗೆ ಹೇಳುತ್ತಾ ಹೋದರೆ ಮುಗಿಯಲಾರದಷ್ಟು ಸಾಮಗ್ರಿ ದೊರೆಯುತ್ತದೆ. ಸಾಗರದಲ್ಲಿ ಸಿಗುವ ಪದಾರ್ಥಗಳನ್ನು ಹೆಕ್ಕುತ್ತಾ ಹೋದರೆ ಮುಗಿಯದ ಹಾಗೆ ಅಗಾಧವಾದ ವಿದ್ಯೆ ಸಾಹಿತ್ಯ ಸಂಪತ್ತು ಶ್ರೀಯುತರಲ್ಲಿ ಅಡಗಿದೆ. ವಿದ್ಯೆ, ವಿದ್ವತ್ತು, ಸಾಹಿತ್ಯ ಕ್ಷೇತ್ರದಲ್ಲಿ ತಮಗೆ ಸರಿಸಮಾನರಾದ ಕಮಲಾರವರನ್ನು ಪತ್ನಿಯನ್ನಾಗಿ ಪಡೆದಿರುವ ಹಂಪನಾರವರು ಕನ್ನಡ ಸಾರಸ್ವತ ಲೋಕದ ಒಂದು ಬೃಹತ್ ಆಸ್ತಿ. ಸಹೃದಯರೂ, ವಿನಯ ಶೀಲರೂ, ನಿಗರ್ವಿಗಳೂ ಆದ ಹಂಪನಾರವರು ಉತ್ತಮ ಕಲಾವಿದರೂ ಕೂಡ. ಕಾಲೇಜು

ದಿನಗಳಲ್ಲಿ ಹಲವಾರು ನಾಟಕಗಳಲ್ಲಿ ಅಭಿನಯಿಸಿ ಪ್ರಶಸ್ತಿಗಳನ್ನು ಪಡೆದಿದ್ದಾರೆ. ಕ್ರೀಡೆಯಲ್ಲೂ ಮುಂದಿದ್ದ ಇವರು ಅದರಲ್ಲಿಯೂ ಹಲವಾರು ಪ್ರಶಸ್ತಿಗಳನ್ನು ಪಡೆದಿದ್ದಾರೆ.

ಇಂತಹ ಸಾರಸ್ವತಲೋಕದ ಧ್ರುವತಾರೆಯನ್ನು ಕನ್ನಡ ರಂಗಭೂಮಿಯ ಬೆಳವಣಿಗೆಯ ಉಚ್ಛ್ರಾಯ ಸ್ಥಿತಿಗೆ ನಾಂದಿ ಹಾಕಿದ ಶ್ರೀ ಗುಬ್ಬಿ ಚಂದಣ್ಣನವರ ವೇದಿಕೆಗೆ ಅಭಿಮಾನದಿಂದ ಕರೆತಂದು ಗೌರವಪೂರ್ವಕವಾಗಿ ಸನ್ಮಾನಿಸುತ್ತಿದ್ದೇವೆ. ಶ್ರೀಯುತರಿಗೆ ಕನ್ನಡ ಕಲಾಮಾತೆ ಆಯುರಾರೋಗ್ಯ ಐಶ್ವರ್ಯಗಳನ್ನು ಕೊಟ್ಟು ರಕ್ಷಿಸಲಿ. ಶ್ರೀಯುತರಿಂದ ಕನ್ನಡ ತಾಯಿಯ ಕೀರ್ತಿ ಮುಕುಟಕ್ಕೆ ಹಲವಾರು ಚಿನ್ನದಗರಿಗಳು ಸೇರ್ಪಡಲಿ ಎಂದು ತುಂಬುಹೃದಯದಿಂದ ಹಾರೈಸುತ್ತೇವೆ.

ಸಮಾರಂಭದ ಅಧ್ಯಕ್ಷರು
ಶ್ರೀ ಐ. ಎಂ. ವಿಠಲಮೂರ್ತಿ
ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ

ಚನ್ನಬಸಯ್ಯ, ಗುಬ್ಬಿ.
ಅಮರೇಶ್ವರ ವಿಜಯ ನಾಟಕ ಮಂಡಳಿ (ಗುಬ್ಬಿ) ನೊಂ
ನಂ 23, ವೇದಗಂಗಾ, ಪಾಂಡುರಂಗ ನಗರ.
ತುಮಕೂರು-572101.

# ಕೃತಿಗಳ ವರ್ಗೀಕರಣ

**ಅನುವಾದ:**

ಆತ್ಮತತ್ವ ವಿಚಾರ, 1971.

ಕೃಷ್ಣ ಪಾಂಡವರು, 1971.

ಭೀಮ ಭಕ್ತಿ ಪರೀಕ್ಷೆ, 1979.

ವೀರ ಜಿನೇಂದ್ರ ಚರಿತೆ, 1975.

**ಕಾದಂಬರಿ:**

ನಾಗಶ್ರೀ, 1965.

ಸವ್ಯಸಾಚಿ ಪಂಪ, 1972.

**ಗ್ರಂಥ ಸಂಪಾದನೆ:**

ಅಪ್ರತಿಮ ವೀರ ಚರಿತೆ, (+) 1975.

ಚಂದ್ರಸಾಗರವರ್ಣಿ ಕೃತಿಗಳು, 1981.

ಜಯನೃಪ ಕಾವ್ಯಸಂಗ್ರಹ, 1967.

ತತ್ವಾರ್ಥಸೂತ್ರಾನುಗತ ಕರ್ಣಾಟ ಲಘುವೃತ್ತಿ, 1994.

ಧನ್ಯಕುಮಾರ ಚರಿತ್ರೆ, 1976.

ನಾಗಕುಮಾರ ಷಟ್ಪದಿ, 1978.

ನೇಮಿನಾಥ ಪುರಾಣ, (+) 1981.

ಪಂಪ ಭಾರತ ಸಂಗ್ರಹ, (+ +) 1961.

ಪ್ರಾಚೀನ ಕಾವ್ಯಮಾರ್ಗ-ಭಾಗ 3, (+) 1992.

ಭರತೇಶ ವೈಭವ, (+ +) 1967.

ರತ್ನಾಕರನ ಹಾಡುಗಳು, 1979.

ವಡ್ಡಾರಾಧನೆ, 1993.

ಶಾಂತಿಪುರಾಣ, 1982.

ಸದಾಶಿವರ ಹನ್ನೆರಡು ಕಥೆಗಳು, 1985.

ಸಾಳ್ವ ಭಾರತ, 1976.

**ಜಾನಪದ:**

ಆಕಾಶ ಜಾನಪದ, 1985

ಕರ್ನಾಟಕದ ಜಾತ್ರೆಗಳು, 1985.

ಜನಪದ ಕಲಾವಿದರ ಸೂಚಿ,(ಸಂ) 1982.
ಜಾನಪದ ಅಧ್ಯಯನ ವಿಚಾರ ಸಂಕಿರಣ, (ಸಂ) 1980
**ಜೀವನ ಚರಿತ್ರೆ:**
ಅಜಾತಶತ್ರು. (+) 1968.
ಅತ್ತಿಮಬ್ಬೆ, 1994
ಗಡಿನಾಡು ಗಾಂಧಿ, (+) 1974.
ಗೋವಿಂದ ಪೈ ಬದುಕು ಬರಹ, (+) 1976.
ನೆನಪಿನಂಗಳದಲ್ಲಿ ಮಾಸ್ತಿ, 1992.
ಮಹಾವೀರ, 1974.
ಶಂಭವ ಸಾಗರ ಚರಿತೆ, 1968.
ಸಮ್ಮೇಳನಾಧ್ಯಕ್ಷರುಗಳು, 1983.
**ಪ್ರಚಾರೋಪನ್ಯಾಸ ಮಾಲೆ:**
ಮೂರನೆಯ ಮಂಗರಸ, 1986
ವಡ್ಡಾರಾಧನೆ,1968.
ವಿ. ಕೃ. ಗೋಕಾಕ್, 1986.
ಸಿ. ವಿ. ರಾಮನ್, 1968.
**ಪ್ರಬಂಧ**
ಹಂಪನಾ ಆಯ್ದ ಪ್ರಬಂಧಗಳು, 1993
ಹೆಸರಿನ ಸೊಗಸು, 1974.
**ಭಾಷಾ ವಿಜ್ಞಾನ:**
ದ್ರಾವಿಡ ಭಾಷಾ ವಿಜ್ಞಾನ,1966.
ದ್ರಾವಿಡ ಸಂಖ್ಯಾವಾಚಕಗಳು, 1973.
ಭಾರತದ ಭಾಷಾ ಸಮಸ್ಯೆ, 1968.
ಭಾಷೆ, 1973.
ಭಾಷಾ ವಿಜ್ಞಾನ, 1968.
ಭಾಷಾ ವಿಜ್ಞಾನಿಗಳು, 1977.
**ವಿಮರ್ಶೆ**
ಫಣಿಕುಮಾರ ಕಥಾ ಸಾಹಿತ್ಯ, 1978.
ಪೈಯವರ ಮೂರು ನಾಟಕಗಳು, 1967.

**ಶಿಶು ಸಾಹಿತ್ಯ:**

ಕರ್ನಾಟಕ ಮತ್ತು ಜೈನಧರ್ಮ, 1981.

ದೇವರಾಯನ ದುರ್ಗ, 1973.

ನಾಡೋಜ ಪಂಪ, 1971.

ಬಸವಪ್ಪ ಶಾಸ್ತ್ರಿ. 1975.

ಮಹಾಕವಿ ರನ್ನ, 1976.

ಮಹಾವೀರ, 1976

**ಸಂಶೋಧನೆ:**

ಅನನ್ಯ, 2003

ಕಮ್ಮಟದ ಕಿಡಿಗಳು, 1980

ಕವಿವರ ಕಾಮಧೇನು, 1996

ಗೊಮ್ಮಟ ಬಾಹುಬಲಿ, 1981.

ಚಂದ್ರಕೊಡೆ, 1997

ನಾಗಚಂದ್ರನ ಕಾಲ ಸ್ಥಳ, 1989.

ನೋಂಪಿಯ ಕಥೆಗಳು, 1976.

ಬಂಧುವರ್ಮನ ಇತಿವೃತ್ತ, 1993.

ಬಾಹುಬಲಿ: ರೂಪ, ಸ್ವರೂಪ, ವಿಶ್ವರೂಪ, 2006

ಯಕ್ಷ ಯಕ್ಷಿಯರು, 1976

ವಿಷ್ಣುವರ್ಧನ ವಿಜಯಾದಿತ್ಯ ಕೀರ್ತಿವರ್ಮ, 1996

ಶಾಸನಗಳಲ್ಲಿ ಎರಡು ವಂಶಗಳು, 1994.

ಸಾಂತರರು ಒಂದು ಅಧ್ಯಯನ 1997

**ಸಂಪಾದಕರು**

ಕನ್ನಡದ ಮೂವರು ಕಟ್ಟಾಳುಗಳು, 1979.

ಕುವೆಂಪು ಜೋಶಿ, 1970

ಕೈವಾರ ಸಾಹಿತ್ಯ ಸಮ್ಮೇಳನ, 1984.

ಚಿಕ್ಕಮಗಳೂರು ಸಾಹಿತ್ಯಸಮ್ಮೇಳನ1981

ಧರ್ಮಸ್ಥಳ ಸಾಹಿತ್ಯ ಸಮ್ಮೇಳನ, 1980

ದಿವ್ಯಧ್ವನಿ, 1975

ನೆನಪಿನ ಹೊತ್ತಗೆ, 1970

ಬೀದರ್ ಸಾಹಿತ್ಯ ಸಮ್ಮೇಳನ, 1985

ಬೆಳಗಾವಿ ಸಾಹಿತ್ಯ ಸಮ್ಮೇಳನ,1980

ಮಡಿಕೇರಿ ಸಾಹಿತ್ಯ ಸಮ್ಮೇಳನ, 1982.

ಹೊಂಬುಜದ ಶಾಸನಗಳು, (+) 1997

You have done a great job in academising the Jaina subject in Kannada. I wish more would follow in English also for example, Saantararu must come out in English. History of Jaina Royals, Saantaras would be an excellent topic on which you are an accepted authority. As such it could reach academies, scholars and historians, both at home and abroad. Please think over this on priority basis.

**Dr. S. A. Bhuvanandrakumar**
Editor: Jinamanjuri
Canada & U.S.A

Dr. Hampa Nagarajaiah, a very famous scholar on Jainsim, its epigraphs, history, art, and artecture in Karnataka........

You are today the best historian of Jainism in your knowledge on the Jaina epigraph is phenomenal.

It will be as interesting as will be enlightening to see the new material from Shimoga you mentioned. And I am certain your two Ganga books will prove a land mark for the Jaina history of Karnataka.

**M.A. Dhaky**
Director (Emeritns)
American institute of Indian studies

ತಮ್ಮ ಸಂಶೋಧನೆಯಿಂದ ಹೊರಬಂದಿರುವ 'ಬಾಹುಬಲಿ ಅಂಡ್ ಬಾದಾಮಿ ಚಲುಕ್ಯಾಸ್' ಗ್ರಂಥ ನಮ್ಮಂತಹ ಯುವಕರಿಗೆ ಹಾಗು ಸಂಶೋಧಕರಿಗೆ ಹೆಚ್ಚು ಉಪಯುಕ್ತ. ಬಾದಾಮಿ ಚಾಳುಕ್ಯರ ಕಾಲದ ಜೈನಧರ್ಮ ಮತ್ತು ಅದರ ಕೊಡುಗೆಗಳನ್ನು ಆಳವಾದ ಚಿಂತನೆಗೆ ಒಳಪಡಿಸಿದ್ದೀರಿ ಮತ್ತು ಜೈನಧರ್ಮದ ಹಲವಾರು ಮಜಲುಗಳನ್ನು ವಿಮರ್ಶಾತ್ಮಕವಾಗಿ ವಿವರಿಸಿದ್ದೀರಿ.

**ಡಾ. ಗಣಪತಿಗೌಡ**
ಮಂಗಳೂರು ವಿ. ವಿ. ಕಾಲೇಜು
ಮಡಿಕೇರಿ

ಪ್ರೀತಿಯ ಓಜರಾದ ಡಾ ಹಂಪನಾ ಅವರಿಗೆ,

ವಂದನೆಗಳು

ನಿಮ್ಮ ಪತ್ರ ಊಹ್ಞೂಂ ಬರಿಯ ಪತ್ರವಲ್ಲ- ಪುಟ್ಟದೊಂದು ಗದ್ಯಕಾವ್ಯ- ನಿನ್ನೆ ಸಿಕ್ಕಿ ತುಂಬ ಸಂತೋಷವಾಯಿತು. ಈ ವಾತ್ಸಲ್ಯ, ಪ್ರೀತಿಗಳಿಗೆ ಏನು ನಾಟಿಯಿದೆ?

ಮಾನಸ್ತಂಭ, A History of Rashtrakutas of Malkhed ಅಂತೆಯೇ Indra in Jaina Iconography ಮೂರು ಕೃತಿಗಳು ತುಂಬ ಕಲಾತ್ಮಕವಾಗಿವೆ, ಉದ್ಬೋಧಕವಾಗಿವೆ, ವಿಷಯ ಪರಿಪ್ಲುತವಾಗಿವೆ ಅಂದಷ್ಟೆ ಹೇಳಿದರೆ ಏನೂ ಹೇಳಿದಂತಾಗಲಿಲ್ಲ. ನೀವು ವಹಿಸಿದ ಶ್ರಮ ಸಾಧ್ಯವಾದ ಕ್ಷೇತ್ರಕಾರ್ಯ ಮತ್ತು ವ್ಯಾಪಕ ಓದಿನ ಹಿನ್ನೆಲೆಯಲ್ಲಿ ಇವು ನಮ್ಮ ಸಂಸ್ಕೃತಿಯ ನಿಜವಾದ ಮಾನ ಸ್ತಂಭಗಳೇ ಆಗಿವೆ, ಹಾರ್ದಿಕ ಅಭಿನಂದನೆಗಳು

**ಪ್ರೊ. ತಾಳ್ತಜೆ ವಸಂತಕುಮಾರ್**

ತಮ್ಮ ಸಂಶೋಧನೆಯಿಂದ ಹೊರಬಂದಿರುವ ಈ ಗ್ರಂಥ ನಮ್ಮಂತಹ ಯುವಕರಿಗೆ ಹಾಗು ಸಂಶೋಧಕರಿಗೆ ಹೆಚ್ಚು ಉಪಯುಕ್ತ ಎಂದು ಭಾವಿಸುತ್ತೇನೆ.

ಬಾದಾಮಿ ಚಾಳುಕ್ಯರ ಕಾಲದ ಜೈನ ಧರ್ಮ ಮತ್ತು ಅದರ ಕೊಡುಗೆಗಳನ್ನು ಆಳವಾದ ಚಿಂತನೆಗೆ ಒಳಪಡಿಸಿದ್ದಿರಿ ಮತ್ತು ಜೈನ ಧರ್ಮದ ಹಲವಾರು ಮಜಲುಗಳನ್ನು ವಿಮರ್ಶಾತ್ಮಕವಾಗಿ ವಿವರಿಸಿದ್ದೀರಿ.

ತಮ್ಮ ವಿಶ್ವಾಸಿ

**ಡಾ. ಗಣಪತಿ ಗೌಡ**

# INDRA IN JAINA ICONOGRAPHY

**ಸಂಶೋಧನೆ**

| | | |
|---|---|---|
| ಡೆಮ್ಮಿ 1/8 ಆಕಾರ, ಪುಟಗಳು | : | 96+xx+16 |
| ಪ್ರಥಮ ಮುದ್ರಣ | : | 2002 |
| ಪ್ರಕಾಶಕರು | : | ಶ್ರೀ ಸಿದ್ಧಾಂತ ಕೀರ್ತಿ ಗ್ರಂಥಮಾಲೆ<br>ಹೊಂಬುಜಕ್ಷೇತ್ರ<br>ಶಿವಮೊಗ್ಗ ಜಿಲ್ಲೆ |

**ಅಭಿಪ್ರಾಯ**

'ಇಂದ್ರ ಇನ್ ಜೈನ ಐಕಾನೋಗ್ರಫಿ' ಎಂಬ ಈ ಪ್ರತಿಮಾ ಶಾಸ್ತ್ರ ಗ್ರಂಥದ ಲೇಖಕರು ಪ್ರಸಿದ್ಧ ವಿದ್ವಾಂಸ, ಕನ್ನಡಿಗ ಡಾ. ಹಂಪ ನಾಗರಾಜಯ್ಯನವರು. ಈ ವಿಷಯದ ಬಗ್ಗೆ ಇದೊಂದು ಆದ್ಯ ಕೊಡುಗೆ. ಹಂಪನಾ ಅವರು ಆಳವಾದ ಅಧ್ಯಯನ ಮತ್ತು ಕ್ಷೇತ್ರ ಕಾರ್ಯಗಳ ಮೂಲಕ ಇಂದ್ರನೆಂಬ ಪೌರಾಣಿಕ ವ್ಯಕ್ತಿತ್ವದ ಅಭಿವ್ಯಕ್ತಿ ಶಿಲ್ಪಕೃತಿಗಳಲ್ಲಿ, ಚಿತ್ರಕಲಾ ಕೃತಿಗಳಲ್ಲಿ, ಸಾಹಿತ್ಯದಲ್ಲಿ ಆಗಿರುವ ರೀತಿಯನ್ನು ತೋರಿಸಿಕೊಟ್ಟಿದ್ದಾರೆ. ಈ ವಸ್ತು (ಇಂದ್ರ)ವಿನ ಸಾಮಾಜಿಕ, ಧಾರ್ಮಿಕ, ಪೌರಾಣಿಕ ಅರ್ಥಾಂತರಗಳನ್ನು ಹಂಪನಾ ಪರಿಶೀಲಿಸಿದ್ದಾರೆ. ತುಂಬ ಅಪರೂಪದ ನೂರಕ್ಕಿಂತಲೂ ಹೆಚ್ಚಿನ ಫೋಟೋಗಳು ಆರ್ಟ್ ಪೇಪರ್‌ನಲ್ಲಿ ಮುದ್ರಿತವಾಗಿ ಈ ಪುಸ್ತಕವನ್ನು ಅಲಂಕರಿಸಿವೆ; ಮಾಹಿತಿ, ವಿವರಣೆಗಳಿಗೆ ಖಚಿತವಾದ ಆಧಾರ ಒದಗಿಸಿವೆ.

ಜೈನ ಪುರಾಣಗಳಲ್ಲಿ ಇಂದ್ರನೆಂಬ ಹೆಸರಿನ ಮೂವರಿದ್ದಾರೆಂದು ಹಂಪನಾ ವಿವರಿಸಿದ್ದಾರೆ. 1. ಉದಂಕ ಋಷಿಯ ಪತ್ನಿಯನ್ನು ಬಲಾತ್ಕರಿಸಿದ ಇಂದ್ರ. 2. ತೀರ್ಥಂಕರರ ಪಂಚಕಲ್ಯಾಣಗಳನ್ನು ನೆರವೇರಿಸುವ ಇಂದ್ರದೇವತೆಗಳೊಡೆಯ. 3. ಜ್ಯೇಷ್ಠ ನಕ್ಷತ್ರ ಪುಂಜದ ಅಧಿಪತಿ. ಇಲ್ಲಿ ತೀರ್ಥಂಕರರ ಪಂಚಕಲ್ಯಾಣಗಳಲ್ಲಿ ಭಾಗವಹಿಸುವ ಇಂದ್ರನೇ ಕಲಾವಿದ, ಶಿಲ್ಪಿಗಳಿಗೆ ಸ್ಫೂರ್ತಿಯಾದವನು; ಐರಾವತವೂ ಅಷ್ಟೇ ಪ್ರಿಯವಾದುದು. ಜೈನ ಸಾಹಿತ್ಯದಲ್ಲಿ ಇಂದ್ರ ಚಿತ್ರಿತನಾದ ಬಗೆಗೆ ಪ್ರತ್ಯೇಕ ಅಧ್ಯಾಯವಿದೆ. ಹೀಗಾಗಿ ಈ ವಸ್ತುವಿನ ಬಗ್ಗೆ ಬಂದ ಮೊದಲನೆಯ ಅಧಿಕೃತ ಪರಾಮರ್ಶನ ಗ್ರಂಥವಿದು.

'ಇಂದ್ರ ಇನ್ ಜೈನ ಐಕಾನೊಗ್ರಫಿ' ಎಂಬ ಪ್ರತಿಮಾಶಾಸ್ತ್ರ ಗ್ರಂಥದ ಲೇಖಕರು ಪ್ರಸಿದ್ಧ ವಿದ್ವಾಂಸ, ಕನ್ನಡಿಗ ಡಾ. ಹಂಪ. ನಾಗರಾಜಯ್ಯನವರು. ಈ ವಿಷಯದ ಬಗ್ಗೆ ಇದೊಂದು

ಅನನ್ಯ ಕೊಡುಗೆ. ಹಂಪನಾ ಅವರು ಆಳವಾದ ಅಧ್ಯಯನ ಮತ್ತು ಕ್ಷೇತ್ರ ಕಾರ್ಯಗಳ ಮೂಲಕ ಇಂದ್ರನೆಂಬ ಪೌರಾಣಿಕ ವ್ಯಕ್ತಿತ್ವದ ಅಭಿವ್ಯಕ್ತಿಶಿಲ್ಪಾಕೃತಿಗಳಲ್ಲಿ, ಚಿತ್ರಕಲಾ ಕೃತಿಗಳಲ್ಲಿ ಸಾಹಿತ್ಯದಲ್ಲಿ ಆಗಿರುವ ರೀತಿಯನ್ನು ತೋರಿಸಿಕೊಟ್ಟಿದ್ದಾರೆ. ಈ ವಸ್ತುವಿನ (ಇಂದ್ರನ) ಸಾಮಾಜಿಕ, ಧಾರ್ಮಿಕ, ಪೌರಾಣಿಕ ಅರ್ಥಾಂತರಗಳನ್ನು ಹಂಪನಾ ಪರಿಶೀಲಿಸಿದ್ದಾರೆ.

ತುಂಬ ಅಪರೂಪದ ನೂರಕ್ಕಿಂತಲು ಹೆಚ್ಚಿನ ಫೋಟೋಗಳು ಆರ್ಟ್‌ಪೇಪರಿನಲ್ಲಿ ಮುದ್ರಿತವಾಗಿ ಈ ಪುಸ್ತಕವನ್ನು ಅಲಂಕರಿಸಿವೆಃ ಮಾಹಿತಿ ವಿವರಣೆಗಳಿಗೆ ಖಚಿತವಾದ ಆಧಾರ ಒದಗಿಸಿವೆ. ಜೈನ ಪುರಾಣಗಳಲ್ಲಿ ಇಂದ್ರನೆಂಬ ಹೆಸರಿನ ಮೂವರಿದ್ದಾರೆಂದು ಹಂಪನಾ ವಿವರಿಸಿದ್ದಾರೆ;

1.ಉದಂಕ ಋಷಿಯ ಪತ್ನಿಯನ್ನು ಬಲಾತ್ಕರಿಸಿದ ಇಂದ್ರ

2. ತೀರ್ಥಂಕರರ ಪಂಚಕಲ್ಯಾಣಗಳನ್ನು ನೇರವೇರಿಸುವ ಇಂದ್ರ- ದೇವತೆಗಳೊಡೆಯ

3. ಜ್ಯೇಷ್ಠ ನಕ್ಷತ್ರಪುಂಜದ ಅಧಿಪತಿ.

ಇಲ್ಲಿ ತೀರ್ಥಂಕರರ ಪಂಚಕಲ್ಯಾಣಗಳಲ್ಲಿ ಭಾಗವಹಿಸುವ ಇಂದ್ರನೇ ಕಲಾವಿದ, ಶಿಲ್ಪಿಗಳಿಗೆ ಸ್ಫೂರ್ತಿಯಾದವನು. ಐರಾವತವೂ ಅಷ್ಟೇ ಪ್ರಿಯವಾದುದು. ಜೈನ ಸಾಹಿತ್ಯದಲ್ಲಿ ಇಂದ್ರ ಚಿತ್ರಿತನಾದ ಬಗೆಗೆ ಪ್ರತ್ಯೇಕವಾದ ಆಯಾಮವಿದೆ. ಹೀಗಾಗಿ ಈ ವಸ್ತುವಿನ ಬಗ್ಗೆ ಬಂದ ಮೊದಲನೆಯ ಅಧಿಕೃತ ಪರಾಮರ್ಶನ ಗ್ರಂಥವಿದು.

-**'ತರಂಗ'**,

22 ಆಗಸ್ಟ್ 2002 (ಪುಟ. 72)

## Opulent Candragiri

**ಸಂಶೋಧನೆ : ವಾಸ್ತು ಶಿಲ್ಪ**

| | | |
|---|---|---|
| ಡೆಮ್ಮಿ 1/8 ಆಕಾರ, ಪುಟಗಳು | : | XV+68 |
| ಪ್ರಥಮ ಮುದ್ರಣ | : | 2001 |
| ದ್ವಿತೀಯ ಮುದ್ರಣ | : | 2006 |
| ಪ್ರಕಾಶಕರು | | ಎಸ್. ಡಿ. ಜೆ. ಎಂ. ಎಂ. ಸಿ<br>ಶ್ರವಣ ಬೆಳಗೊಳ 573135 |

**ಅಭಿಪ್ರಾಯ :**

'Opulent Candragiri' ಒಂದು ಅಪರೂಪದ ಸಂಶೋಧನ ಕೃತಿ. ಒಂದು ಪುಸ್ತಕವನ್ನು ಹೇಗೆ ಪ್ರಕಟಿಸಬೇಕೆಂಬುದನ್ನು ನಿಮ್ಮಿಂದ ಕಲಿಯಬೇಕು. ವಿಷಯದ ಸಂಶೋಧನೆಯ ಅಚ್ಚುಕಟ್ಟುತನವೂ ಚೆನ್ನಾಗಿದೆ. ವಿದೇಶಿಯರಿಗೆ ಹಾಗೂ ನಮ್ಮವರಿಗೆ- ಹೀಗೆ ಇಬ್ಬರಿಗೂ ಮಾರ್ಗದರ್ಶನವಾಗುವಂಥ ವಿಷಯ ವೈವಿಧ್ಯ ಇದೆ ಆ ಪುಸ್ತಕದಲ್ಲಿ.

**ಡಾ. ಸರಜೂ ಕಾಟ್ಕರ್**
**ಬೆಳಗಾವಿ**

# A History of the Rashtrakutas of Malkhed and Jainism

**ಸಂಶೋಧನೆ: ಇತಿಹಾಸ**

| | | |
|---|---|---|
| ಡೆಮ್ಮೈ1/8ಆಕಾರ, ಪುಟಗಳು | : | XVI+44+312 |
| ಪ್ರಥಮ ಮುದ್ರಣ | : | 2000 |
| ಪ್ರಕಾಶಕರು | : | ಅಂಕಿತ ಪ್ರಕಾಶನ<br>ಬಸವನಗುಡಿ<br>ಬೆಂಗಳೂರು |

**ಅಭಿಪ್ರಾಯ :**

ರಾಷ್ಟ್ರಕೂಟರನ್ನು ಕುರಿತ ಈ ಪುಸ್ತಕವನ್ನು ಪ್ರೊ. ಧನ್ಯಕುಮಾರ್ ತಮಿಳು ಭಾಷೆಗೆ ಅನುವಾದ ಮಾಡಿದ್ದಾರೆ. ಇಂಗ್ಲಿಷ್ ಪುಸ್ತಕದ ಎರಡನೆಯ ಮುದ್ರಣ ಸಿದ್ಧವಾಗುತ್ತಿದೆ.

**'ಎ ಹಿಸ್ಟರಿ ಆಫ್ ರಾಷ್ಟ್ರಕೂಟಾಸ್ ಆಫ್ ಮಳಖೇಡ್ ಅಂಡ್ ಜೈನಿಸಮ್ (2000)'**- ಗ್ರಂಥ ಕುರಿತು;

ಕನ್ನಡದಲ್ಲಿ ಈಗಾಗಲೇ ಹಲವು ವಿದ್ವತ್ ಕೃತಿಗಳನ್ನು ರಚಿಸಿ ಖ್ಯಾತರಾಗಿರುವ ನೀವು ಈಚೆಗೆ ಇಂಗ್ಲಿಷ್‌ನಲ್ಲಿಯೂ ವಿದ್ವತ್ ಕೃತಿಗಳನ್ನು ರಚಿಸಿರುವ ಮೂಲಕ ನಮ್ಮ ಹಳೆಯ ಪೀಳಿಗೆಯ ಆರ್. ನರಸಿಂಹಾಚಾರ್ಯರು, ಎ. ವೆಂಕಟಸುಬ್ಬಯ್ಯನವರು, ವಿ. ಸೀತಾರಾಮಯ್ಯ, ತೀ ನಂ. ಶ್ರೀ. ಈ ಕೆಲವರ ಸಾಲಿಗೆ ಸೇರಿದ್ದೀರಿ. ಇದು ಖಂಡಿತಾವಾಗಿ ನಿಮ್ಮ ವರ್ಚಸ್ಸನ್ನು ಯಶಸ್ಸನ್ನೂ ಬೆಳೆಸಿರುವ ಸಂಗತಿ..... ಸಾಹಿತ್ಯ ಭಾಗದಲ್ಲಿ ಈಚೆಗೆ ಶೋಧನೆಗಳನ್ನು ಅಳವಡಿಸಿ ಒಂದು ಸಮಗ್ರ ಚಿತ್ರ ಲಭ್ಯವಾಗುವಂತೆ ಮಾಡಿದ್ದೀರಿ. ಸಾಹಿತ್ಯದ ವಿದ್ಯಾರ್ಥಿಗಳಿಗೆ ವಿಶೇಷವಾಗಿ ಕನ್ನಡೇತರ ವಿದ್ವಾಂಸರು ವಿಮರ್ಶಕರಿಗೆ ಇದರಿಂದ ಬಹುವಾಗಿ ಪ್ರಯೋಜನವಾಗುತ್ತದೆ. ನಿಮ್ಮ ಸಾಧನೆ ಸಾಹಸ ಸಿದ್ಧಿಗಳು ಇನ್ನೂ ಮೇಲ್ಮೊಗವಾಗಿ ಸಾಗಲಿ, ಸಾಗುತ್ತಲೇ ಇರಲಿ.

**-ಪ್ರೊ. ಟಿ. ವಿ. ವೆಂಕಟಾಚಲ ಶಾಸ್ತ್ರಿ**
ಮೈಸೂರು

'ಮಳಖೇಡದ ರಾಷ್ಟ್ರಕೂಟರು ಮತ್ತು ಜೈನಧರ್ಮ' ಎಂಬ ನಿಮ್ಮ ಇಂಗ್ಲಿಷ್ ಪುಸ್ತಕದ ಬಿಡುಗಡೆ ಸಮಾರಂಭದಲ್ಲಿ ಭಾಗವಹಿಸಿದ್ದು ಸಂತೋಷದ ಅನುಭವ. ಆ ದಿನ ಡಾ. ಎ. ವಿ. ನರಸಿಂಹ ಮೂರ್ತಿಯವರು ನಿಮ್ಮನ್ನು 'ಅಭಿನವ ಅಲ್ತೇಕರ' ಎಂದು ವರ್ಣಿಸಿದ್ದು

ಆಶ್ಚರ್ಯವಾಯಿತು. ಭಾರತೀಯ ಇತಿಹಾಸದ ಶ್ರೇಷ್ಠ ವಿದ್ವಾಂಸರಾದ ಎ. ವಿ. ನರಸಿಂಹಮೂರ್ತಿಯವರ ಅಭಿಪ್ರಾಯದಲ್ಲಿ ನನಗೆ ಮೊದಲಿನಿಂದಲೂ ಗೌರವ ಮತ್ತು ವಿಶ್ವಾಸ. ಆದರೂ 'ಅಭಿನವ ಅಲ್ತೇಕರ್' ಎಂಬುದು, ಮೆಚ್ಚುಗೆಗೆ ಹೇಳಿದ್ದರೂ ಕೂಡ, ಉತ್ಪ್ರೇಕ್ಷೆ ಆಯಿತೇನೋ ಎಂದು ಅನ್ನಿಸಿದ್ದುಂಟು. ಅಂಕಣಕ್ಕಾಗಿ ನಾನು ಓದಿ ಮುಗಿಸಬೇಕಾದ ಬೇರೆ ಪುಸ್ತಕಗಳಿದ್ದವು. ಆದರೂ ಕುತೂಹಲಕ್ಕಾಗಿ ನಿಮ್ಮ ಪುಸ್ತಕವನ್ನು ಓದಿ ಮುಗಿಸಿದೆ. ಎ. ವಿ. ನರಸಿಂಹಮೂರ್ತಿಯವರು ನಿಮ್ಮ ಪುಸ್ತಕದ ಸಾಧನೆ ಮತ್ತು ವಿಸ್ತಾರ ಕುರಿತು ಹೇಳಿದ್ದರಲ್ಲಿ ಅತಿಶಯೋಕ್ತಿ ಇರಲಿಲ್ಲವೆಂದು ಖಚಿತವಾಯಿತು. ಇಂಗ್ಲಿಷ್‌ನಲ್ಲಿ ನಿಮಗೆ ಈ ಹಿಡಿತ ಇರುವುದಾಗಲೀ, ಚರಿತ್ರೆಯಲ್ಲಿ ಇಷ್ಟು ಪರಿಶ್ರಮ ಇರುವುದಾಗಲೀ ನನಗೆ ಗೊತ್ತಿರಲಿಲ್ಲ. ಇನ್ನೂರು ವರ್ಷ ಕರ್ನಾಟಕವನ್ನು ಆಳಿದ ರಾಷ್ಟ್ರಕೂಟರ ಕಾಲದ ವೈಭವವನ್ನು, ಕೊಡುಗೆಯನ್ನು ಪಳಗಿದ ಇತಿಹಾಸಕಾರರಂತೆ ರಚಿಸಿದ್ದೀರಿ, ನಿಮ್ಮ ಅಗಾಧ ವಿದ್ವತ್ತನ್ನು ದಾಖಲಿಸಿದ್ದೀರಿ. ಅಭಿನಂದನೆಗಳು. ನೀವು ಕೊಟ್ಟಿರುವ ಇತರ ಇಂಗ್ಲಿಷ್ ಪುಸ್ತಕಗಳನ್ನು ಓದಿದ ಮೇಲೆ ಬರೆಯುತ್ತೇನೆ.

**ಹಾ. ಮಾ. ನಾಯಕ**

'ಗೋಧೂಳಿ'
ಜಯಲಕ್ಷ್ಮೀಪುರಂ ಮೈಸೂರು

# ಒಳನೋಟ

ಮಹಾಕಾವ್ಯ ಬರೆಯುತ್ತಿದ್ದೀರಂತೆ?ನಿಮ್ಮನ್ನು ಮುಖ್ಯವಾಗಿ ಸಂಶೋಧಕರೆಂದು ಗುರುತಿಸುತ್ತಾರೆ. ಕವಿಯಾದದ್ದು ಯಾವಾಗ?

ಆಗಾಗ ಕವಿತೆಗಳನ್ನು ಬರೆದಿದ್ದೇನೆ. ನನ್ನ 'ಸವ್ಯಸಾಚಿ ಪಂಪ' ಆದಿಕವಿ ಪಂಪನನ್ನು ಕುರಿತ ಪ್ರಥಮ ಐತಿಹಾಸಿಕ ಕಾದಂಬರಿ. ಇದೀಗ ದೊಡ್ಡಕಾವ್ಯ ರಚನೆಯಲ್ಲಿ ತೊಡಗಿದ್ದೇನೆ. ಮುಗಿಯುವ ಹಂತದಲ್ಲಿದೆ.

ಇದು ಯಾವರೀತಿಯ ಮಹಾಕಾವ್ಯ?

ಇದು ರಾಮಾಯಣ ಮಹಾಭಾರತದಂಥ ಕಾವ್ಯವಲ್ಲ. ರಾಜರಾಣಿಯರಿಗೆ ಪುರೋಹಿತರಿಗೆ ಮತ್ತು ಯುದ್ಧಗಳಿಗೆ ಇಲ್ಲಿ ಪ್ರಾಧಾನ್ಯವಿಲ್ಲ. ವರ್ತಕ ಸಮಾಜದ ರಮ್ಯ ಕಥಾನಕದ ಭಿತ್ತಿಯಿರುವ ಈ ಜೀವನ್ಮುಖಿ ಕಾವ್ಯದಲ್ಲಿ ಸ್ತ್ರೀ ಪಾತ್ರಗಳಿಗೆ ಮೊದಲ ಮನ್ನಣೆ.

ಈ ಮಹಾಕಾವ್ಯದ ಭಾಷಾಶೈಲಿ ಮತ್ತು ಛಂದಸ್ಸಿನ ಕುರಿತು ಹೇಳುವಿರಾ?

ಆಡುಮಾತಿನ ಲಯದಿಂದ ಕೂಡಿದ ಸಹಜ ಕನ್ನಡ ಈ ಕಾವ್ಯದ ಮಾಧ್ಯಮವಾಗಿದೆ. ಈ ಮಹಾಕಾವ್ಯ ಸರಳ ರಗಳೆಯಲ್ಲಿದೆ. ದೈನಂದಿನ ಬದುಕಿನ ಭಾಷೆಯನ್ನು ಕೂಡ ಮಹಾಕಾವ್ಯದ ಭಾಷೆಯನ್ನಾಗಿ ಬಳಸಿ ಕೊಳ್ಳುವ ಸಾಧ್ಯತೆಗಳನ್ನು ಈ ಮೂಲಕ ಕಂಡುಕೊಳ್ಳಲಾಗಿದೆ.

ಈ ಮಹಾಕಾವ್ಯದ ಹೆಸರೇನು?

ಮನುಷ್ಯಸ್ವಭಾವದ ವಿನ್ಯಾಸದ ನಿರಿಗೆಗಳಲ್ಲಿ ಅನಾವರಣಗೊಳ್ಳುತ್ತ ಧರ್ಮಾತೀತವಾಗಿ ಮಹೋನ್ನತ ಮಾನವೀಯ ಮೌಲ್ಯಗಳಿಂದ ಕೂಡಿದ ನೆಲೆಯ ಮೇಲೆ ಜನಮುಖಿ ಕಾಳಜಿಯಲ್ಲಿ ಪರ್ಯವಸಾನಗೊಳ್ಳುವ ಈ ಕಾವ್ಯದ ಶೀರ್ಷಿಕೆ 'ಚಾರುನೀಹಾರಿಕೆ'.

ಇದರ ಕಥಾಸಾರಾಂಶ ಕುರಿತು ತಿಳಿಸುವಿರಾ?

ಪೈಶಾಚಿಕ ಭಾಷೆಯಲ್ಲಿ ಗುಣಾಢ್ಯ ಬರೆದ ಬೃಹತ್ಕಥೆಯಲ್ಲಿ ಈ ಕಥೆಯ ಬೀಜವಿರಬೇಕು. ಆ ಬೃಹತ್‌ಕಥೆ ಇನ್ನೂ ಸಿಕ್ಕಿಲ್ಲ. ಎಂಟನೆಯ ಶತಮಾನದ ಪುನ್ನಾಟ ಸಂಘದ(ಮೈಸೂರು ಜಿಲ್ಲೆಯ ಹುಣಸೂರು ತಾಲ್ಲೂಕಿನ ಪ್ರದೇಶದಲ್ಲಿ ಆಗಿ ಹೋದ ಪ್ರಸಿದ್ಧ ಸಂಘ ಜೈನ ಮುನಿಗಳ ಸಮುದಾಯ)ಜಿನಸೇನಾಚಾರ್ಯರು ಸಂಸ್ಕೃತದಲ್ಲಿ 'ಹರಿವಂಶ' ಬರೆದಿದ್ದಾರೆ. ಆ ಜೈನ ಕಾವ್ಯದ ಆಖ್ಯಾನವಿದು. ಆ ಆಖ್ಯಾನ ಚಾರುದತ್ತ ಮತ್ತು ವಸಂತತಿಳಕೆಯರ ಕಥೆಯನ್ನೊಳಗೊಂಡಿದೆ. ಮಹಾಕಾವ್ಯಕ್ಕೆ ಈ ಕಥೆಯನ್ನು ಆಧಾರವಾಗಿಟ್ಟುಕೊಂಡಿರುವೆ. ಗೌರವಾನ್ವಿತ ವರ್ತಕ ಮನೆತನದ ಚಾರುದತ್ತ, ಸುರಸುಂದರಿ ವೇಶ್ಯೆ ವಸಂತತಿಳಕೆಯಲ್ಲಿ ಅನುರುಕ್ತನಾಗುತ್ತಾನೆ.

ಮನೆತನದ ಕೀರ್ತಿ ಬೀದಿ ಪಾಲಾಗುವ ಹಾಗೆ ನಿರ್ಗತಿಕನಾಗುತ್ತಾನೆ. ನಂತರ ಸಾಧ್ವಿ ಪತ್ನಿಯ ಹೃದಯವೈಶಾಲ್ಯದಿಂದಾಗಿ ವಸಂತತಿಳಿಕೆಯನ್ನು ಪತ್ನಿಯಾಗಿ ಸ್ವೀಕರಿಸುತ್ತಾನೆ. ಭಾರಿ ಶ್ರಮ ಮತ್ತು ನಿಷ್ಠೆಯಿಂದ ವ್ಯಾಪಾರದಲ್ಲಿ ಯಶಸ್ಸು ಸಾಧಿಸುತ್ತ ಮತ್ತೆ ವಣಿಜಶ್ರೇಷ್ಠನಾಗುತ್ತಾನೆ. ಹೀಗೆ ಕತೆ ಸುಖಾಂತವಾಗುತ್ತದೆ. ಈ ರೀತಿ ಸುಖಾಂತವಾಗುವ ಕಥೆಯ ಹಂದರ ಮನೋಜ್ಞವಾಗಿದೆ. ಅನಿರೀಕ್ಷಿತ ತಿರುವುಗಳನ್ನು ಪಡೆಯುತ್ತಾ ಸಾಗುತ್ತದೆ. ಸ್ವಾರ್ಥ ಜಗತ್ತಿನೊಳಗೆ ಸದಾ ಮೌನವಾಗಿ ಸ್ಪಂದಿಸುವ ಮಾನವೀಯ ಸಂಬಂದಗಳನ್ನು ಎಳೆಎಳೆಯಾಗಿ ಬಿಡಿಸುತ್ತ ಸಹೃದಯನ ಜೊತೆ ಹೃದಯಸಂವಾದಕ್ಕೆ ತೊಡಗುತ್ತದೆ ಎಂದು ಮಹಾಕಾವ್ಯವನ್ನು ಓದಿದಾಗ ಕೇಳಿದ ಅನೇಕರು ಹೇಳಿದ್ದಾರೆ.

ಈ ಮಹಾಕಾವ್ಯವನ್ನು ಎಲ್ಲಿ ಓದಿದ್ದೀರಿ?

ಧಾರವಾಡದ ವಿದ್ವಜ್ಜನ ಮಿತ್ರರ ಮುಂದೆ ಈ ಮಹಾಕಾವ್ಯದ ಕೆಲ ಭಾಗಗಳನ್ನು ಓದಿ ಕಥಾ ಸಾರಂಶವನ್ನು ತಿಳಿಸಿದ್ದೇನೆ.

ಜೈನ ಸಾಹಿತ್ಯಕ್ಕೆ ತಮ್ಮ ಕೊಡುಗೆ ಏನು?

ಭಾರತೀಯ ಮತ್ತು ಕರ್ನಾಟಕದ ಇತಿಹಾಸ, ವಾಸ್ತುಶಿಲ್ಪ, ಸಾಹಿತ್ಯ ಮತ್ತು ಸಾಂಸ್ಕೃತಿಕ ಅಧ್ಯಯನ ಗ್ರಂಥಗಳಲ್ಲಿ ಜೈನ ಸಾಮಗ್ರಿ ಮತ್ತು ಆಧಾರಗಳನ್ನು ಕಡೆಗಣಿಸಲಾಗಿದೆ. ನಾಡಿನ ಪರಂಪರೆಯ ಸಮೀಕ್ಷೆ ಯನ್ನು ಸರಿಯಾದ ಹಳಿಯ ಮೇಲೆ ನಿಲ್ಲಿಸುವ ಇರಾದೆಯಿಂದ,ಇನ್ನೂ ಕನ್ನೆ ನೆಲವಾಗಿರುವ ಜೈನ ಕೊಡುಗೆಯ ವೈಶಿಷ್ಟ್ಯ ತೋರಿಸುವ ಬರವಣಿಗೆ ಮಾಡಿದ್ದೇನೆ.

ಭಾಷಾವಿಜ್ಞಾನ ಕ್ಷೇತ್ರದಲ್ಲಿ ತಮ್ಮ ಸಾಧನೆಯ ವೈಶಿಷ್ಟ್ಯವೇನು?

'ದ್ರಾವಿಡ ಭಾಷಾ ವಿಜ್ಞಾನ'ವನ್ನ ಮೇರುಕೃತಿಗಳಲ್ಲಿ ಒಂದು ಎಂದು ವಿದ್ವಾಂಸರು ಕೊಂಡಾಡಿದ್ದಾರೆ. ಈ ಕ್ಷೇತ್ರದ ಪ್ರಪ್ರಥಮ ಕನ್ನಡ ಗ್ರಂಥವಿದು ಎಂದು ಹೇಳಿದ್ದಾರೆ. ನಾನು ಮತ್ತು ನನ್ನ ಸಮಕಾಲೀನರು ಮೂರು ದಶಕಗಳ ಹಿಂದೆ ಈ ಕ್ಷೆತ್ರಕ್ಕೆ ಲಗ್ಗೆ ಹಾಕಿದೆವು. ಅಲ್ಲಿಂದೀಚೆಗೆ ಭಾಷಾವಿಜ್ಞಾನ ಬೃಹತ್ತಾಗಿ ಬೆಳೆದಿದೆ. ಇದರಲ್ಲಿ ಇನ್ನಷ್ಟು ಕೃಷಿ ಮಾಡಲು ಅವಕಾಶಗಳಿದ್ದು ಯುವಪೀಳಿಗೆ ಇದನ್ನ ಕೈಗೆತ್ತಿಕೊಳ್ಳಬೇಕು.

ವರ್ತಮಾನದ ಕನ್ನಡ ಸಾಹಿತ್ಯಕ್ಕೆ ತಾವು ಹೇಗೆ ಸ್ಪಂದಿಸುವಿರಿ?

ಇಂದು ಕನ್ನಡದಲ್ಲಿ ಅಪೂರ್ವ ಒಳನೋಟಗಳಿರುವ ಕೃತಿಗಳು ಬರುತ್ತಿವೆ. ವಿಶೇಷವಾಗಿ ಯುವಕರ ಸಾಧನೆ ಎದ್ದುಕಾಣುತ್ತಿದೆ. ಲೇಖಕಿಯರು ಕೂಡ ಹಿಂದೆಂದೂ ಕಾಣದಂಥ ಸತ್ವಶಾಲಿಯಾದ ಬರವಣಿಗೆ ಮಾಡುತ್ತಿದಾರೆ. ಅವುಗಳನ್ನು ಓದುವುದು ನನ್ನ ಹವ್ಯಾಸ. ನನ್ನ ಅರಿವಿನ ಕ್ಷಿತಿಜವನ್ನು ಹೊಸ ಕಾಲದ ಬರವಣಿಗೆ ವಿಸ್ತರಿಸುತ್ತಿದೆ ಎಂದು ಹೇಳಲು ನನಗೆ ಯಾವ ಮುಜುಗರವೂ ಇಲ್ಲ.

ನೀವು ದೇಶ ಸುತ್ತಿದವರು, ಕರ್ನಾಟಕದಲ್ಲಿ ಪ್ರವಾಸಿಗರಿಗೆ ಯಾವ ಅಗತ್ಯಗಳನ್ನು ಹೊಸದಾಗಿ ಕಲ್ಪಿಸಬೇಕು ಎಂದು ಸೂಚಿಸುತೀರಿ?

ಪ್ರಾಕೃತಿಕ ಹಾಗೂ ಸಾಂಸ್ಕೃತಿಕ ಇತಿಹಾಸದ ಸಂಕ್ಷಿಪ್ತ ಮಾಹಿತಿ ಸಿಗುವಂತಾಗಬೇಕು. ಉದಾಹರಣೆಗೆ ವರದಾ ನದಿಯ ಹೆಸರು ಮತ್ತು ಮಹತ್ವ ತಿಳಿಯುವಂತೆ ದೊಡ್ಡ ಫಲಕ ಹಾಕಬೇಕು. ನಾವು ಹಾದುಹೋಗುವ ಊರುಗಳ ಹಿನ್ನೆಲೆ ಪರಿಚಯವಾಗಬೇಕು. ಉದಾಹರಣೆಗೆ ಮುಧೋಳದ ಹೆದ್ದಾರಿಯಲ್ಲಿ ಅದು ರನ್ನ ಮಹಾಕವಿಯ ಹುಟ್ಟೂರು ಎಂಬ ಹಾಗೂ ಆತ ರಚಿಸಿದ ಕಾವ್ಯಗಳ ಮಾಹಿತಿಯ ಫಲಕ ಕನ್ನಡ, ಹಿಂದಿ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಕಾಣಬೇಕು. ವಿದೇಶಿ ಪ್ರವಾಸಿಗಳೇ ಅಲ್ಲದೆ ದೇಶೀಯರಿಗೂ ಈ ವಿವರ ಗೊತ್ತಾಗಬೇಕು.

ಹೊರನಾಡಿನ ಶಿಕ್ಷಣಾಂಗದಲ್ಲಿ ಕನ್ನಡ ಕಲಿಕೆ ಕ್ರಮೇಣ ಒಣಗುತ್ತಿವೆ. ಇದನ್ನು ಪುನಶ್ಚೇತನಗೊಳಿಸಲು ತಮ್ಮ ಸಲಹೆ ಏನು?

ಮದರಾಸು, ಮಧುರೈ, ಮುಂಬೈ ಹೈದರಾಬಾದ್ ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡ ಸ್ನಾತಕೋತ್ತರ ಶಿಕ್ಷಣ ಸೊರಗದಂತೆ ಕಾಪಾಡುವ ನೈತಿಕ ಹೊಣೆಯನ್ನು ಕರ್ನಾಟಕ ಅರಿಯಬೇಕು. ಪ್ರತಿ ವಿಶ್ವವಿದ್ಯಾಲಯದ20ವಿದ್ಯಾರ್ಥಿಗಳಿಗೆ ವರ್ಷಕ್ಕೆ ತಲಾ 10ಸಾವಿರ ರೂಪಾಯಿ ಮೊತ್ತದ ವಿದ್ಯಾರ್ಥಿ ವೇತನ ಕೊಡಬೇಕು. ಇದರ ದೂರಗಾಮಿ ಸತ್ಫಲ ಕನ್ನಡಕ್ಕೆ ದಕ್ಕುತ್ತದೆ.

**17-4-2003**

**ಸುಧಾ**

**ಸಂದರ್ಶಕರು : ರಂಜಾನ್ ದರ್ಗಾ**

**JINEDRASTAVANA**

ಡೆಮ್ಮೈ 1/8 ಆಕಾರ, ಪುಟಗಳು : XVI+48
ಪ್ರಥಮ ಮುದ್ರಣ : 2003
ಪ್ರಕಾಶಕರು : ರಾಷ್ಟ್ರೀಯ ಪ್ರಾಕೃತ ಅಧ್ಯಯನ ಸಂಸ್ಥೆ
ಶ್ರವಣಬೆಳಗೊಳ

**ಅಭಿಪ್ರಾಯ :**

'Jinendra Stavana' ಕೃತಿಯ ಬೆಂಬದಿಯಲ್ಲಿರುವ,

"This is an invaluable book to be given to all those who would wish for an illuminating introduction to Digambara stotras" ಎನ್ನುವ ಮಾತುಗಳಲ್ಲಿ ಕಿಂಚಿತ್ತೂ ಅತಿಶಯೋಕ್ತಿಗಳಿಲ್ಲ.

ಮೂರೂ ಲಿಪಿಗಳಲ್ಲಿ ಮುದ್ರಿತವಾಗಿರುವ ಶ್ಲೋಕಗಳು ಅವುಗಳನ್ನು ಹಿಂಬಾಲಿಸುವ ಸ್ಪಷ್ಟವಾದ ಆಂಗ್ಲ ಭಾಷಾಂತರಗಳು ಅನೇಕ ಉದ್ಧೃತಗಳಿಂದ ಉಪಯುಕ್ತವೆನಿಸುತ್ತವೆ. ಈ ಮೆಚ್ಚುನುಡಿಗಳು ಹಿಂದೆ ಒಂದು ಸಣ್ಣ ಸ್ವಾರ್ಥವೂ ಇದೆ. ಸಂಸ್ಕೃತದ ಶಬ್ದಗಳನ್ನ ಕನ್ನಡಕ್ಕೆ ತರುವಾಗ ನಮಗೆ ಉಂಟಾಗುವ ಕಷ್ಟ ಗೊಂದಲಗಳನ್ನು ಈ ಮೂಲಕ ನಾವು ನಿವಾರಿಸಿಕೊಳ್ಳಬಹುದು ನಮ್ಮ ಪ್ರೀತಿಯ ಹಕ್ಕೆ ಅಲ್ಲವೇ!

"Bahubali and Badami Chalukyas" ಗ್ರಂಥವಂತೂ ಕೈಗಳನ್ನು ತೊಳೆದುಕೊಂಡು ಅಕ್ಕರೆಯಿಂದ ಆದರಿಸುವಂತಿದೆ. ಛಾಯಾಚಿತ್ರಗಳ ಗುಣಮಟ್ಟವಂತೂ ಮುಕ್ತವಾದ ಕೊಂಡಾಟಕ್ಕೆ ಅರ್ಹವಾಗಿದೆ. ತಮ್ಮ ಆಂಗ್ಲ ಭಾಷಾ ಪ್ರೌಢಿಮೆ, ವಿಷಯದ ಬಗೆಗೆ ಅಧಿಕಾರಯುತವಾಗಿ ಮಾತಾಡಬಲ್ಲ ಅಧ್ಯಯನ ಹಿನ್ನೆಲೆ ವಿಶ್ಲೇಷಣಾ ವಿಧಾನಗಳು, ಮಾಹಿತಿಗಳು ಮಹಾಪೂರಗಳೆಲ್ಲವೂ ನಮ್ಮ ಅಭಿಮಾನದ ಬರಹಕ್ಕೆ ಕಾರಣವಾಗಿದೆ. ತಮ್ಮ ಸವ್ಯಸಾಚಿತ್ವಕ್ಕೆ ನಮೋ ನಮಃ. ತಮ್ಮ ಕಾರ್ಯಕ್ಷಮತೆ ಶ್ರದ್ಧೆಯನ್ನು ನಾವೂ ಒಂದು ಆದರ್ಶವಾಗಿ ಸ್ವೀಕರಿಸಿದವರು, ಆ ನಿಟ್ಟಿನಿಂದ ನಮ್ಮಿಂದಾದ ಪ್ರಯತ್ನಗಳನ್ನು ಮಾಡುತ್ತಿರುವವರು. ಆ ನಿಟ್ಟಿನಲ್ಲಿ ತಮ್ಮ ನಲ್ವರಕೆಗಳು ಸದಾ ನಮ್ಮ ಬೆಂಬಲಕ್ಕಿವೆಯೆಂಬ ನಂಬಿಕೆಯೂ ನಮಗಿದೆ.

ಮೇಡಂ ಅವರಿಗೆ ನಮ್ಮ ನೆನಪು ಕೊಡಿ,

ಡಾ. ಮಣಿಮಾಲಿನಿ
ಡಾ. ತಾಳ್ತಜೆ ವಸಂತಕುಮಾರ್
ಮುಂಬಯಿ

# Compilation of great merit

Your monograph jinendra stavana is an innovative compilation of great merit. I jion professors paul dundas and jhon E. cort in offering you my felicitations. I like the work so much that that I composed spontaneously two s'lokas ಇಟಾ in its praise, offering them to you as a benedication for futher contribution by you to our culture.

**Dr. Iravatha Mahadevan**
IAS (Rtd)
Chennai - 600 088

||ಶಾಸನಂ ಜಿನ ಶಾಸನಂ||
ಜಿನೇಂದ್ರ ಸ್ತವನಂ ಸ್ತೋತ್ರಂ
ಶಿಲಾಸು ಲಿಖಿತಂ ಪುರಾ|
ಆಚಾರ್ಯ ನಾಗರಾಜೇನ
ಪುನರೇವ ಪ್ರಕಾಶಿತಮ್||

ಶ್ರಾವಕಾಧ್ಯಯನಾರ್ಥಂ ಚ
ಜಿನಧರ್ಮ ಪ್ರಬೋಧಿತುಂ|
ಕೃತಂ ಪುಣ್ಯಮಿದಂ ಸ್ತೋತ್ರಂ
ಸರ್ವ ಲೋಕ ಹಿತಾಯ ಚ||

- ಐರಾವತ ಮಹಾದೇವ ಶರ್ಮಾ
ಚೆನ್ನೈ 600 088



ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಲೋಕದಲ್ಲಿ ಹಂಪನಾ ಚಿರಪರಿಚಿತ ಹೆಸರು. ಸಾಹಿತ್ಯ, ಶಾಸನ ಸಂಶೋಧನೆ, ತತ್ವಶಾಸ್ತ್ರ, ವಾಸ್ತುಶಿಲ್ಪ, ಮೂರ್ತಿ ಶಿಲ್ಪ... ಹೀಗೆ ಹಲವು ಕ್ಷೇತ್ರಗಳಲ್ಲಿ ಎಲ್ಲ ಕಾಲಕ್ಕೂ ನಿಲ್ಲಬಲ್ಲ ಅಪರೂಪದ ಕೃಷಿಯನ್ನು ಹಂಪನಾ ಮಾಡಿದ್ದಾರೆ. ಅವರು ಜೈನ ಸಂಸ್ಕೃತಿಯ ಎಲ್ಲ ಮಜಲುಗಳನ್ನು ಅರ್ಥೈಸಿಕೊಂಡು ಅಧಿಕೃತವಾಗಿ ಮಾತನಾಡಬಲ್ಲ ಹಿರಿಯ ವಿದ್ವಾಂಸರು. ಜಾನಪದ ಕ್ಷೇತ್ರದಲ್ಲೂ ಅವರದು ಗಮನಾರ್ಹ ಸಾಧನೆಯಿದೆ. ಹಂಪನಾ ಅವರ ಮಹತ್ತಿಗೆ ಈವರೆಗಿನ ಅವರ ಪ್ರಕಟಿತ ಕೃತಿಗಳೇ ಸಾಕ್ಷಿ. ಅವರ ಎಲ್ಲ ಕೃತಿಗಳಿಗೆ ಕೈಮರವಾಗುವ 'ಪುಸ್ತಕಸೂಚಿ'ಯ ಅಗತ್ಯವಿದ್ದು ಅದು ಈಗ ನೆರವೇರುತ್ತಿದೆ.

ಸಮಗ್ರ ರೀತಿಯಲ್ಲಿ ಪುಸ್ತಕದ ವಿಷಯ, ಆಕಾರ, ಒಟ್ಟು ಪುಟಗಳು, ಪ್ರಕಾಶನ ಸಂಸ್ಥೆ, ಸ್ಥಳ, ವರ್ಷ, ಮುಂತಾದ 'ಪುಸ್ತಕ ವಿವರ' (bibliographic details)ಗಳನ್ನು ಸಂಗ್ರಹಿಸಲಾಗಿದೆ. ಪುಸ್ತಕಗಳ ಮರುಮುದ್ರಣ (reprint) ವಿವರಗಳು, ಪರಿಷ್ಕೃತ ಆವೃತ್ತಿ (revised edition) ವಿವರಗಳನ್ನೂ ದಾಖಲಿಸಲಾಗಿದೆ. ಇವುಗಳ ಜೊತೆಗೆ, ಪುಸ್ತಕದ ಬಗ್ಗೆ ವಿದ್ವತ್ ವಲಯದಿಂದ ವ್ಯಕ್ತವಾಗಿರುವ ಆ ಕೃತಿಯ ಬಗೆಗಿನ ಅಭಿಪ್ರಾಯವನ್ನು ಸಂಕ್ಷಿಪ್ತವಾಗಿ ಸಂಗ್ರಹಿಸಿಕೊಳ್ಳಲಾಗಿದೆ. ಜೊತೆಗೆ ಪುಸ್ತಕದ 'ಸಾರ' (abstract)ವನ್ನು ಸಂಗ್ರಹಿಸಿ ಕೊಡಲಾಗಿದೆ.

ಸಂಪಾದಕರು




ಕೆ.ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್-ಕೃಷ್ಣಾಪುರದೊಡ್ಡಿ